## ಕ್ರಿಯಾ-ನವಕರ್ನಾಟಕ ಜಂಟಿ ಪ್ರಕಟಣೆ

# ಮಾರ್ಕ್ಸ್ 200 – ಕ್ಯಾಪಿಟಲ್ 150









## ಪ್ರಕಟಣಪೂರ್ವ ಕೂಪನ್ ಖರೀದಿಸಿ

ಮಹಾನ್ ಮಾನವತಾವಾದಿ, ಚಿಂತಕ ಕಾರ್ಲ್ ಮಾರ್ಕ್ಸ್ (1818–1883) ಅವರ ಜನ್ಮದಿನದ ದ್ವಿಶತಮಾನೋತ್ಸವ ಹಾಗೂ ಅವರು ರಚಿಸಿದ ಜಗತ್ಪ್ರಸಿದ್ಧ ಕೃತಿ 'ದಾಸ್ ಕ್ಯಾಪಿಟಲ್'ನ 150ನೇ ವರ್ಷಾಚರಣೆಯ ಅಂಗವಾಗಿ ಮಾರ್ಕ್ಸ್ ಅವರ ಕೆಲವು ಪ್ರಮುಖ ಕೃತಿಗಳನ್ನು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸುವ ಬೃಹತ್ ಯೋಜನೆಯನ್ನು ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಮತ್ತು ಕ್ರಿಯಾ ಮಾಧ್ಯಮ ಪ್ರೈವೆಟ್ ಲಿಮಿಟೆಡ್ ಸಂಸ್ಥೆಗಳು ಹಮ್ಮಿಕೊಂಡಿವೆ. ಈ ಯೋಜನೆಯಲ್ಲಿ ಹಲವಾರು ತಜ್ಞ ಲೇಖಕರು ಅನುವಾದ/ಪರಿಷ್ಕರಣೆ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ. ಶೀರ್ಷಿಕೆಗಳು ಇಂತಿವೆ –

- ಬಂಡವಾಳ – ಸಂಪುಟ 1
- ಭಾರತವನ್ನು ಕುರಿತು ಮಾರ್ಕ್ಸ್
- ಫ್ರಾನ್ಸ್‌ನಲ್ಲಿ ಅಂತರ್ಯುದ್ಧ (ಮೊದಲ ಕಾರ್ಮಿಕ ಪ್ರಭುತ್ವ – 1871)
- ಆರ್ಥಿಕ ಮತ್ತು ತತ್ವಶಾಸ್ತ್ರೀಯ ಕೈಬರಹಗಳು–1844
- ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೆ ಒಂದು ಕೊಡುಗೆ
- ಲೂಯಿ ಬೊನಪಾರ್ಟೆಯ 18ನೇ ಬ್ರೂಮೇರ್
- ತತ್ವಶಾಸ್ತ್ರದ ಬಡತನ

ಇಂದೇ ರೂ. 1400 ಪಾವತಿಸಿ ಪ್ರಕಟಣಪೂರ್ವ ಕೂಪನ್ ಖರೀದಿಸಿ, ನಿಮ್ಮ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಿ. ಪುಸ್ತಕಗಳನ್ನು ಅಂಚೆ/ಕೊರಿಯರ್ ಮೂಲಕ ನಿಮ್ಮ ಮನೆಬಾಗಿಲಿಗೆ ತಲುಪಿಸಲಾಗುವುದು. ರವಾನೆ ಉಚಿತ. ನಿಮ್ಮ ಗೆಳೆಯರಿಗೆ, ನೀವು ಓದಿದ ಶಾಲೆ–ಕಾಲೇಜುಗಳಿಗೆ, ಇತರ ಸಂಘ–ಸಂಸ್ಥೆ–ಗ್ರಂಥಾಲಯಗಳಿಗೆ ಈ ಪುಸ್ತಕಗಳನ್ನು ಉಡುಗೊರೆಯಾಗಿ ನೀಡಿ ಈ ಯೋಜನೆಯನ್ನು ಯಶಸ್ವಿಗೊಳಿಸಲು ಸಹಕರಿಸಿ.

**ಈ ಏಳು ಪುಸ್ತಕಗಳ ಒಟ್ಟು ಮುಖಬೆಲೆ ರೂ. 2100/–**
**ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 1400/–**

**ರೂ.700/- ರಿಯಾಯಿತಿ**

ಪ್ರಕಟಣಪೂರ್ವ ಕೂಪನ್ ಖರೀದಿಸಲು ಒಂದು ಸೆಟ್‌ಗೆ ರೂ. 1400ರಂತೆ ಹಣವನ್ನು ನಮ್ಮ ಮಳಿಗೆಗಳಲ್ಲಿ ನಗದು ಪಾವತಿಸಿ, ಇಲ್ಲವೇ ನಮ್ಮ ಬ್ಯಾಂಕ್ ಖಾತೆಗೆ ವರ್ಗಾಯಿಸಿ ಅಥವಾ ಆನ್‌ಲೈನ್ ಮೂಲಕ ಸಂದಾಯ ಮಾಡಿ. ಬ್ಯಾಂಕ್ ಖಾತೆಯ ವಿವರಗಳು : Current A/c No. 0788201010612. IFSC Code CNRB0000788 ಕೆನರಾ ಬ್ಯಾಂಕ್, ಮಾಧವನಗರ, ಬೆಂಗಳೂರು (ಬ್ಯಾಂಕ್ ಖಾತೆಗೆ ನೇರವಾಗಿ ಹಣ ವರ್ಗಾಯಿಸಿದವರು navakarnataka@gmail.comಗೆ ವಿವರಗಳನ್ನು ಹಾಗೂ ದಾಖಲೆಗಳನ್ನು ಒದಗಿಸುವುದು.)

**ಮೊದಲ ಕಂತಿನ ಲೋಕಾರ್ಪಣೆ**

20–5–2018ರ ಭಾನುವಾರ ಬೆಳಗ್ಗೆ 10.00 ಗಂಟೆಗೆ ಬೆಂಗಳೂರಿನ ಗಾಂಧಿಭವನದಲ್ಲಿ ಮೊದಲ ಕಂತಿನ ಎರಡು ಪುಸ್ತಕಗಳ ಲೋಕಾರ್ಪಣೆ

ಫ್ರಾನ್ಸ್‌ನಲ್ಲಿ ಅಂತರ್ಯುದ್ಧ (ಅನು. : ವಿಶ್ವ ಕುಂದಾಪುರ) ✦ ತತ್ವಶಾಸ್ತ್ರದ ಬಡತನ (ಅನು. : ಕೆ. ಪಿ. ವಾಸುದೇವನ್)

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

ಪ್ರಧಾನ ಕಛೇರಿ : ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-560 001. ಫೋನ್ : 080-22161900/01 , ಮೊಬೈಲ್ : 9972590106

e-mail : navakarnataka@gmail.com  Shop Online www.navakarnataka.com

ಶಾಖೆಗಳು

* ಕೆಂಪೇಗೌಡ ರಸ್ತೆ, ಬೆಂಗಳೂರು-560 009. ಮೊ : 9480686859 * ಗಾಂಧಿನಗರ, ಬೆಂಗಳೂರು-560 009. ಮೊ : 9480686862
* ಕೆ. ಎಸ್. ರಾವ್ ರಸ್ತೆ, ಮಂಗಳೂರು-575 001. ಮೊ : 9480686864 * ಬಲ್ಮಠ, ಮಂಗಳೂರು-575 001. ಮೊ : 9480686866
* ರಾಮಸ್ವಾಮಿ ವೃತ್ತ, ಮೈಸೂರು-570 024. ಮೊ : 9480686863 * ಸ್ಟೇಷನ್ ರಸ್ತೆ, ಕಲಬುರಗಿ-585 102. ಮೊ : 9480686865

# ಹೊಸತು




## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ಸೃಜನ್, ವಿ. ಗೋಪಾಲ್, ಗೋಪಿ ಹಿರೇಬೆಟ್ಟು
ಜಿ. ಎಂ. ಬೊಮ್ನಳ್ಳಿ

**ಮುಖಪುಟ :** ಕಾರ್ಲ್ ಮಾರ್ಕ್ಸ್ ಕಲಾಕೃತಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಕಳೆದ ತಿಂಗಳ ಮೊದಲ ವಾರಾಂತ್ಯದಲ್ಲಿ ಮುಕ್ತಾಯಗೊಂಡ ಪಾರ್ಲಿಮೆಂಟ್ ಅಧಿವೇಶನ ಸಂಪೂರ್ಣ ನಿರರ್ಥಕ. ಯಾವುದೇ ಕಲಾಪ ನಡೆಯದೆ, ಕೇಂದ್ರ ಸರಕಾರ ಮಂಡಿಸಿದ ಬಜೆಟ್ ಮೇಲೆ ಚರ್ಚೆಯೂ ಇಲ್ಲದೆ ಅನುಮೋದನೆಯಾದ್ದು ಇತಿಹಾಸ. ಹಾಗೆಯೇ ಸರಕಾರ ಬಯಸಿದ್ದ ಕೆಲವು ಮಸೂದೆಗಳೂ ಅಂಗೀಕಾರದ ಮುದ್ರೆ ಪಡೆದುವು. ಈ ಅಧಿವೇಶನದಲ್ಲಿ ಮೊದಲ ಬಾರಿಗೆ ಫೆಬ್ರವರಿ ೧ರಂದು ಬಜೆಟ್ ಮಂಡಿಸಿ ಹೊಸ ಪರಂಪರೆ ಪ್ರಾರಂಭಿಸಲಾಯಿತು. ಜನವರಿ ೨೯ರಿಂದ ಫೆಬ್ರವರಿ ೯ರವರೆಗೆ ಉಭಯ ಸದನಗಳ ಕಲಾಪ ನಡೆದು ಮತ್ತೆ ಪ್ರಾರಂಭವಾದ್ದು ಮಾರ್ಚ್ ೫ರಂದು. ಎರಡನೇ ಭಾಗ ಮೋದಿ ಸರಕಾರದ ಮೊಂಡುತನ ಮತ್ತು ಪ್ರತಿಪಕ್ಷಗಳ ಪ್ರತಿಭಟನೆಗಳಿಂದ ಕೊಚ್ಚಿಹೋಯಿತು. ಕಲಾಪಗಳು ನಡೆಯದೇ ಅಧಿವೇಶನ ಅಂತ್ಯಗೊಳ್ಳುವ ಹೊಸ ಪರಂಪರೆ ಸೃಷ್ಟಿಯಾಗಿದೆ. ನಾಲ್ಕನೇ ವರ್ಷ ಮುಗಿಯುತ್ತಿದ್ದ ಹಾಗೇ ಕಲಾಪಗಳನ್ನು ಅಡ್ಡಿಪಡಿಸುವುದು ರೂಢಿಯಾಗಿಬಿಟ್ಟಿದೆ. ಇಂಥ ಕೆಟ್ಟ ಚಾಳಿಯನ್ನು ಪ್ರಾರಂಭಿಸಿದ್ದು ಭಾಜಪದವರೆ, ಯುಪಿಎ ಸರಕಾರ ಅಸ್ತಿತ್ವದಲ್ಲಿದ್ದಾಗ. ಮಾಮೂಲಿಯಾಗಿ ಪರಸ್ಪರ ಆರೋಪ ಪ್ರತ್ಯಾರೋಪಗಳು ಆಗಿವೆ. ಈ ಸಲದ ಒಂದು ವಿಶೇಷ ಎಂದರೆ, ಆಡಳಿತಾರೂಢವಾಗಿರುವ ಎನ್‌ಡಿಎ ಸದಸ್ಯರು ವೇತನ ಪಡೆಯದಿರಲು ತೀರ್ಮಾನಿಸಿರುವುದು. ಎರಡೂ ಕಡೆಯವರು ಕಲಾಪ ಮುಂದುವರಿದ ಮೇಲೆ ಪ್ರದರ್ಶನ ನಡೆಸಿದರು ಪಾರ್ಲಿಮೆಂಟ್ ಭವನದ ಮುಂದೆ. ನಂತರ ಒಂದು ದಿನ ಉಪವಾಸ ಸತ್ಯಾಗ್ರಹ ಮಾಡಿದರು. ಇದು ನಾಟಕೀಯವಾಗಿತ್ತು ಎನ್ನುವುದನ್ನು ಒತ್ತಿ ಹೇಳಬೇಕು, ಇವೆಲ್ಲದರ ಹೊರೆ ಬೀಳುವುದು ಜನಸಾಮಾನ್ಯರ ಮೇಲೆ, ತೆರಿಗೆದಾರರ ಮೇಲೆ. ಪಾರ್ಲಿಮೆಂಟರಿ ಕಲಾಪಗಳು ನಡೆಯದೆ ಕೋಟಿ ಕೋಟಿ ರೂಪಾಯಿಗಳ ನಷ್ಟ ಉಂಟಾಗುತ್ತದೆ. ಇದನ್ನು ಭರಿಸುವುದು ಅಸಾಧ್ಯ, ಇನ್ನೊಂದು ಕಡೆ ಅದು ಪ್ರಜಾಪ್ರಭುತ್ವಕ್ಕೇ ಮಾರಕ.

ಅಧಿವೇಶನದ ಸಮಯದಲ್ಲಿ ಆಂಧ್ರಪ್ರದೇಶಕ್ಕೆ ವಿಶೇಷ ಸ್ಥಾನಮಾನ, ಹಣ ನೀಡಲಾಗಿಲ್ಲ ಎಂಬುದಾಗಿ ಪ್ರಾರಂಭವಾದ ಪ್ರತಿಭಟನೆ, ಕೂಗಾಟಗಳು ಅಂತ್ಯಗೊಂಡಿದ್ದು ಕಾವೇರಿ ವಿವಾದ ಕುರಿತು ತಮಿಳುನಾಡು ಪಕ್ಷಗಳ ಅಬ್ಬರದಿಂದ. ಈ ಮಧ್ಯೆ ನಡೆದ ಪ್ರತಿಭಟನೆಗಳು ಮೂರ್ತಿಭಂಜನೆ ಮುಂತಾದ ಅವಾಂತರಗಳನ್ನು ಕುರಿತಾಗಿತ್ತು. ಮೋದಿ ಸರಕಾರದ ವಿರುದ್ಧ ಆಂಧ್ರದ ಸದಸ್ಯರು ಮಂಡಿಸಿದ್ದ ಅವಿಶ್ವಾಸನಿರ್ಣಯ ಚರ್ಚೆಯೇ ನಡೆಯದೆ ಬಿದ್ದು ಹೋಯಿತು. ಈಗ ಎಲ್ಲ ರಾಜಕೀಯ ಪಕ್ಷಗಳ ಗಮನ ೨೦೧೯ರ ಪಾರ್ಲಿಮೆಂಟ್ ಚುನಾವಣೆಗಳತ್ತ. ಈ ಸಲ ಮೋದಿ–ಷಾ ಅಲೆಗೆ ಕಡಿವಾಣ ಬೀಳುವುದಂತೂ ಖಚಿತ. ಪ್ರತಿಪಕ್ಷಗಳು ನೇರಸ್ಪರ್ಧೆಗೆ ಅನುವು ಮಾಡಿಕೊಡುವ ಪ್ರಯತ್ನ ನಡೆಸಿವೆ. ಇದು ಕಪ್ಪೆ ತಕ್ಕಡಿಗೆ ಹಾಕಿದ ಹಾಗೆ. ಕೊನೆಯವರೆಗೆ ಏನೂ ಹೇಳುವಂತಿಲ್ಲ. ರಾಜಕೀಯ ಪಕ್ಷಗಳ ನಾಯಕರು ಚುನಾವಣೆಗಳಿಂದ ಪಾಠ ಕಲಿಯುವ ಲಕ್ಷಣ ತೋರುತ್ತಿಲ್ಲ. ಹಾಗಾಗಿ ಎಲ್ಲ ಅನಿಶ್ಚಿತ.

* * *

ಮಾಧ್ಯಮದಲ್ಲಿ ಪ್ರಕಟವಾಗುವ ಸುದ್ದಿ ಎಷ್ಟು ಸತ್ಯ ಎನ್ನುವುದು ಯಕ್ಷ ಪ್ರಶ್ನೆ. ಪ್ರಿಂಟ್ ಮೀಡಿಯದಲ್ಲಾದರೆ ಸುದ್ದಿಯ ಸತ್ಯಾಸತ್ಯತೆಯನ್ನು ತಪಾಸಣೆ ಮಾಡಲು ಸಮಯ ಇರುತ್ತದೆ. ಇಲೆಕ್ಟ್ರಾನಿಕ್ ಮಾಧ್ಯಮದಲ್ಲಂತೂ ಯಾವುದಕ್ಕೂ ಸಮಯ ಸಾಲದು. ಹಾಗಾಗಿ ಪ್ರಸಾರವಾದ್ದೇ ಸುದ್ದಿ. ಅದರಲ್ಲಿ ಕಾಳಿಗಿಂತ ಜೊಳ್ಳೇ ಹೆಚ್ಚು. ಇದರ ನಿಯಂತ್ರಣವೂ ದುಸ್ತರ ಯಾವುದೇ ಮಾಧ್ಯಮಕ್ಕೆ. ಇದು ಆಯಾ ಮಾಧ್ಯಮಗಳ ನೀತಿ ಹಾಗೂ ಸಿಬ್ಬಂದಿಯ ಮೇಲೆ ಅವಲಂಬಿತ. ಸ್ವಯಂ ನಿಯಂತ್ರಣವೊಂದೇ ಮಾರ್ಗ. ಪ್ರೇಕ್ಷಕರು ಹಾಗೂ ಓದುಗರನ್ನೇ ಅವಲಂಬಿಸಿರುವ ಮಾಧ್ಯಮಗಳಿಗೆ ಜಾಹೀರಾತುಗಳು ಒಂದೇ ಆಧಾರ. ಅದರಿಂದ ಪರಸ್ಪರ ಪೈಪೋಟಿಯಿಂದಾಗಿ ಊಹಾಪೋಹಗಳಿಗೆ, ಗಾಳಿಮಾತುಗಳಿಗೆ ಗಾಳ ಹಾಕುವುದೇ ಹೆಚ್ಚು.

ಸರಕಾರ ಮಾಧ್ಯಮಗಳ ನಿಯಂತ್ರಣದಲ್ಲಿ ಮೂಗು ತೂರಿಸುವುದು ಎಷ್ಟು ಸರಿ ಎನ್ನುವುದೀಗ ಪ್ರಶ್ನೆ. ಸರ್ವಾಧಿಕಾರಿ ಆಡಳಿತಗಳಲ್ಲಿ ಕಟ್ಟುನಿಟ್ಟಾದ ಸೆನ್ಸಾರ್ ಕ್ರಮ

(೬ನೇ ಪುಟಕ್ಕೆ)




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೯ ಸಂಚಿಕೆ-೧೦ ಮೇ ೨೦೧೮

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**






**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೯೧೧, ೨೨೧೬೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಶ್ರಮಿಕ ವರ್ಗದ ಸಂಕೋಲೆಗಳು

**ಕ**ಮ್ಯುನಿಸ್ಟ್ ಕ್ರಾಂತಿಯ 'ಮುಂಚೂಣಿಯಲ್ಲಿರುವ ಶ್ರಮಿಕ ವರ್ಗ ಕಳೆದುಕೊಳ್ಳಲೇನೂ ಇಲ್ಲ, ಅದು ಕಳೆದುಕೊಳ್ಳುವುದು ತನ್ನನ್ನು ಬಂಧಿಸಿದ ಸಂಕೋಲೆಗಳನ್ನು ಮಾತ್ರ' ಎಂದು ವಿಶ್ವದ ದುಡಿವವರ್ಗದ ತತ್ವಶಾಸ್ತ್ರಜ್ಞ ಕಾರ್ಲ್ ಮಾರ್ಕ್ಸ್ ಹೇಳಿದ. ದುಡಿವ ವರ್ಗದ ಪ್ರಭುತ್ವದ ಚಾರಿತ್ರಿಕ ಜವಾಬ್ದಾರಿಯ ಅನಿವಾರ್ಯತೆಯನ್ನು ಪ್ರತಿಪಾದಿಸಿದ ಕಾರ್ಲ್ ಮಾರ್ಕ್ಸ್ ಜನಿಸಿ ೨೦೦ ವರ್ಷವಾಯಿತು. ಅವರು ಬರೆದ ವಿಶ್ವವಿಖ್ಯಾತ ಗ್ರಂಥ 'ಕ್ಯಾಪಿಟಲ್' (ಬಂಡವಾಳ) ಪ್ರಕಟವಾಗಿ ೧೫೦ ವರ್ಷವಾಯಿತು. ಕಾರ್ಲ್ ಮಾರ್ಕ್ಸ್ ಕಂಡ ಕನಸು ೧೮೭೧ರ ಪ್ಯಾರಿಸ್ ಕ್ರಾಂತಿಯಿಂದ ಇಂದಿನವರೆಗೆ ವಿವಿಧ ದೇಶಗಳಲ್ಲಿ, ವಿವಿಧ ರೀತಿಗಳಲ್ಲಿ ನನಸಾಗಿದೆ. ಶ್ರಮಿಕ ವರ್ಗದ ಪ್ರಭುತ್ವ ಸ್ಥಾಪನೆ ಕೆಲವೆಡೆ ಯಶಸ್ವಿಯಾಗಿದ್ದು, ನಂತರ ಪತನವೂ ಆಗಿದೆ, ಇನ್ನು ಕೆಲವೆಡೆ ವಿವಿಧ ಸ್ವರೂಪಗಳಲ್ಲಿ ಅಸ್ತಿತ್ವದಲ್ಲಿದೆ. ಒಟ್ಟಿನಲ್ಲಿ ದುಡಿವ ವರ್ಗ ಪ್ರಭುತ್ವವನ್ನು ಕೈವಶಮಾಡಿಕೊಂಡು ಶ್ರಮಿಕ ವರ್ಗದ ಹಿತಾಸಕ್ತಿಗಾಗಿ ಆಡಳಿತ ನಡೆಸಬಲ್ಲದು ಎಂಬ ಸತ್ಯ ಸಾಬೀತಾಗಿದೆ. ಮಾರ್ಕ್ಸ್ ಕಂಡ ಕನಸು ಕಾಲ್ಪನಿಕವಲ್ಲ ಅದೊಂದು ಪ್ರಾಯೋಗಿಕ, ಜಾರಿಯಾಗಬಲ್ಲ ಸಿದ್ಧಾಂತ ಎಂಬುದೂ ಸಾಬೀತಾಗಿದೆ. ವಿವಿಧ ದೇಶಗಳಲ್ಲಿ ಕ್ರಾಂತಿಯ ವಿಧಾನಗಳೂ ಭಿನ್ನವಾಗಿವೆ, ಆಡಳಿತ ವಿಧಾನಗಳೂ ಭಿನ್ನವಾಗಿವೆ. ತೊಂಭತ್ತರ ದಶಕದಲ್ಲಿ ಆರಂಭವಾದ ಬಂಡವಾಳಶಾಹಿಯ ಜಾಗತೀಕರಣ ನೀತಿಯಿಂದಾಗಿ ಕೆಲವು ಶ್ರಮಿಕ ವರ್ಗದ ಪ್ರಭುತ್ವಗಳ ಪತನವೂ ಆಗಿದೆ. ಅದು ಮಾರ್ಕ್ಸ್‌ವಾದದ ಪತನವಲ್ಲ ಮಾರ್ಕ್ಸ್‌ವಾದಿ ಪ್ರಭುತ್ವದ ಒಂದು ಮಾದರಿಯ ಪತನ ಮಾತ್ರ.

ಶ್ರಮಿಕ ವರ್ಗದ ಪ್ರಭುತ್ವಕ್ಕೆ ಎದುರಾದ ಬಂಡವಾಳಶಾಹಿ ಪ್ರಭುತ್ವಗಳು ಪ್ರಜಾಸತ್ತೆಯ ಹೆಸರಿನಲ್ಲಿ ನಡೆಸುವ ಆಡಳಿತ ಎಷ್ಟರಮಟ್ಟಿಗೆ ಪ್ರಜಾಸ್ನೇಹಿಯಾಗಿರುತ್ತದೆ ಎಂಬುದು ಇಂದಿನ ಪ್ರಮುಖ ಪ್ರಶ್ನೆ. ಪ್ರಜೆಗಳು ಎಂದರೆ ಅದರಲ್ಲಿ ದುಡಿವವರ್ಗ, ಮಧ್ಯಮವರ್ಗ, ಮೇಲ್ವರ್ಗ ಹೀಗೆ ವಿವಿಧ ರೀತಿಗಳಲ್ಲಿ ವಿಂಗಡನೆಯಾಗಿದೆ. ಪ್ರಜೆಗಳಿಂದ ಆಯ್ಕೆಯಾದ ಒಂದು ಪ್ರಭುತ್ವ ಯಾವ ವರ್ಗದ ಪ್ರಜೆಗಳ ಹಿತಾಸಕ್ತಿಗಾಗಿ ಆಡಳಿತ ನಡೆಸುತ್ತದೆ ಎಂಬುದನ್ನು ಗಮನಿಸಬೇಕು. ಕಳೆದ ತಿಂಗಳು ಕೇಂದ್ರ ಸಚಿವ ಸದಾನಂದ ಗೌಡರು ಬೆಂಗಳೂರಿಗೆ ಬಂದಾಗ ಕಾರ್ಮಿಕ ಕಾನೂನುಗಳಿಗೆ ಸಂಬಂಧಿಸಿದಂತೆ "೩೮ ಕಾನೂನುಗಳ ಪೈಕಿ ಉದ್ಯಮ ಸ್ನೇಹಿಯಾದ ೯ರಿಂದ ೧೦ ಕಾನೂನುಗಳನ್ನು ಮಾತ್ರ ಉಳಿಸಿಕೊಳ್ಳಲಾಗುವುದು" (೨.೪.೨೦೧೮ರ ಪ್ರಜಾವಾಣಿ) ಎಂದು ಹೇಳಿಹೋಗಿದ್ದಾರೆ. ಈಗಾಗಲೇ ಸುಧಾರಣೆಗಳ ಹೆಸರಿನಲ್ಲಿ ಕಾರ್ಮಿಕ ಹಿತಾಸಕ್ತಿ ಕಾಯುವ, ನೂರಾರು ವರ್ಷಗಳಿಂದ ಕಾರ್ಮಿಕರು ಹೋರಾಟ ಮಾಡಿ ಪಡೆದಿರುವ ಅನೇಕ ಹಕ್ಕು ಮತ್ತು ಕಾನೂನುಗಳನ್ನು ತಿದ್ದುಪಡಿ ಮಾಡಲಾಗಿದೆ. ಈ ತಿದ್ದುಪಡಿಗಳೆಲ್ಲ ಉದ್ಯಮಿಗಳ ಹಿತಾಸಕ್ತಿ, ಅವರ ಲಾಭಕ್ಕೆ ಪೂರಕವಾಗಿವೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ವರ್ಷಕ್ಕೆ ಎರಡು ಕೋಟಿ ಉದ್ಯೋಗ ಸೃಷ್ಟಿಸುತ್ತೇವೆಂದು ಭರವಸೆ ಕೊಟ್ಟ ಪ್ರಧಾನಿ ಈಗಿರುವ 'ಖಾಯಂ' ಕೆಲಸದ ನೀತಿಯನ್ನೇ ಕಿತ್ತುಹಾಕಿ 'ಕಾಲಮಿತಿಯ ಉದ್ಯೋಗ' ಎಂಬ ನೀತಿಯನ್ನು ಜಾರಿಗೆ ತರುತ್ತಿದ್ದಾರೆ. ಈಗಾಗಲೇ ಗುತ್ತಿಗೆ, ಒಪ್ಪಂದಗಳ ಹೆಸರಿನಲ್ಲಿ ಉದ್ಯೋಗ ಭದ್ರತೆಯ ಹಕ್ಕನ್ನು ಕಸಿದುಕೊಂಡು ಕೆಲಸಗಾರರರ ಬದುಕನ್ನು ಅನಿಶ್ಚಿತತೆಗೊಡ್ಡಿದ್ದಾರೆ. ಈ ಎಲ್ಲ ಕಾನೂನುಗಳನ್ನೂ ಉದ್ಯಮಿಗಳ, ದೇಶದ–ವಿಶ್ವದ ಕಾರ್ಪೊರೇಟ್ ಕಂಪನಿಗಳ, ಲಾಭಕ್ಕೆ ಪೂರಕವಾಗಿ ಸೃಷ್ಟಿಸಲಾಗುತ್ತಿದೆ. ಇದು ಇಂದಿನ ಬಿ.ಜೆ.ಪಿ. ಸರಕಾರದ ನೀತಿ ಮಾತ್ರವಲ್ಲ ಹಿಂದಿನ ಕಾಂಗ್ರೆಸ್ ನಾಯಕತ್ವದ ಆಡಳಿತದ ನೀತಿಯೂ ಆಗಿತ್ತು. ಆದರೆ ಪ್ರಸ್ತುತ ಬಿ.ಜೆ.ಪಿ. ಸರಕಾರ ಸಂಸತ್ತಿನಲ್ಲಿ ತನಗಿರುವ ಸಂಖ್ಯಾಬಲದ ಬೆಂಬಲದಿಂದ ನಿರ್ದಯವಾಗಿ, ದಮನಕಾರಿ ವಿಧಾನದಿಂಥ ಶ್ರಮಿಕ ವಿರೋಧಿ ನೀತಿಗಳನ್ನು ಜಾರಿ ಮಾಡುತ್ತಿದೆ. ಶ್ರಮಿಕರಿಲ್ಲದ, ವಿವಿಧ ರೀತಿಯ ರೊಬೋಟ್‌ಗಳ ಮೂಲಕ ಉತ್ಪಾದನೆಯನ್ನು ನಡೆಸಿ ಶ್ರಮದಿಂದ ಶ್ರಮಿಕರನ್ನೇ ಬೇರ್ಪಡಿಸುವ ಕಾಲ ಸನ್ನಿಹಿತವಾಗುತ್ತಿದೆ. ಅದಕ್ಕೂ ಬಂಡವಾಳಶಾಹಿ ಪ್ರಭುತ್ವಗಳು ಒಂದು ಯೋಜನೆ ರೂಪಿಸಿದ್ದಾರೆ. ಕೆಲಸವನ್ನೇ ಕೇಳಬೇಡಿ ತಿಂಗಳಿಗೊಂದಿಷ್ಟು ದುಡ್ಡು ಕೊಡುತ್ತೇವೆ ಎನ್ನುತ್ತಿದ್ದಾರೆ. 'ಯೂನಿವರ್ಸಲ್ ಬೇಸಿಕ್ ಇನ್‌ಕಮ್' ಎಂಬ ಹೆಸರಿನ ಈ ಯೋಜನೆ ವಿವಿಧ ದೇಶಗಳಲ್ಲಿ ಚರ್ಚೆಗೆ ಬರುತ್ತಿದೆ. ಜನರ ವಿರೋಧವೂ ವ್ಯಕ್ತವಾಗಿದೆ. ದೇಶದ ಸಂಪತ್ತನ್ನು ಲೂಟಿಮಾಡಿ ಅದರಲ್ಲಿನ ಒಂದು ಸಣ್ಣ ಪಾಲನ್ನು ಜನರಿಗೆ ಬಿಸಾಕುವ ಯೋಜನೆ ಇದು. ಕಾರ್ಪೊರೇಟ್ ಕಂಪನಿಗಳ ಪರವಾಗಿರುವ ಇಂಥ ಪಕ್ಷಗಳನ್ನು ಆಯ್ಕೆ ಮಾಡುವವರು ಇದೇ ಪ್ರಜೆಗಳು. ಅದರಲ್ಲೂ ಪ್ರಮುಖವಾಗಿ ಶ್ರಮಿಕರು.

ಭಾರತದ ಜನಸಂಖ್ಯೆಯಲ್ಲಿ ಸುಮಾರು ೫೦ ಕೋಟಿ ಕಾರ್ಮಿಕರಿದ್ದಾರೆಂದು ಅಂದಾಜಿಸಲಾಗಿದೆ. ಅದರಲ್ಲಿ ಸುಮಾರು ೧೦ ಕೋಟಿಯಷ್ಟು ಸಂಘಟಿತ ವಲಯದಲ್ಲಿದ್ದರೆ ಉಳಿದವರು ಅಸಂಘಟಿತರು. ಅಸಂಘಟಿತರಲ್ಲಿ ಕೃಷಿಕೂಲಿಕಾರರೂ ಸೇರುತ್ತಾರೆ. ಈಗ ಜಾರಿಯಲ್ಲಿರುವ ಗುತ್ತಿಗೆ, ಒಪ್ಪಂದದ ಕಾರ್ಮಿಕರ

ಜೊತೆ ಈಗ ತಂದಿರುವ 'ಕಾಲಮಿತಿ ಉದ್ಯೋಗ'ದ ಪರಿಣಾಮದಿಂದ ಯಾವ ವರ್ಗವನ್ನು ಸಂಘಟಿತ ವಲಯವೆಂದು ಕರೆಯಲಾಗುತ್ತಿತ್ತೋ ಅದು ಆ ವಲಯದಿಂದ ಹೊರಬೀಳುತ್ತದೆ. ಉಳಿದಂತೆ ಕೃಷಿ ಕೂಲಿಕಾರರು, ಸಣ್ಣ ರೈತರನ್ನೂ ಒಳಗೊಂಡು ದೇಶದ ೪೯ ಪ್ರತಿಶತ ಜನ ಕೃಷಿಯನ್ನು ಅವಲಂಬಿಸಿದ್ದಾರೆ. ಪ್ರಧಾನಿ ಮೋದಿಯವರು ಯೋಜನಾ ಆಯೋಗದ ಬದಲಾಗಿ ನೀತಿ ಆಯೋಗ ರಚಿಸಿದರು. ೨೦೧೫ರಲ್ಲಿ ನೀತಿ ಆಯೋಗ ಸರಕಾರಕ್ಕೊಂದು ಶಿಫಾರಸು ಮಾಡಿದೆ. ದೇಶದ ಒಟ್ಟು ಆಂತರಿಕ ಉತ್ಪನ್ನ (ಜಿ.ಡಿ.ಪಿ.)ದಲ್ಲಿ ಕೃಷಿ ಆದಾಯ ಕಡಿಮೆ ಇರಲು ಕಾರಣ ದೇಶದ ಸಣ್ಣ ಹಿಡುವಳಿಗಳು ಎಂಬುದು ಈ ನೀತಿ ಆಯೋಗದ ಸಂಶೋಧನೆ. ಅದಕ್ಕೆ ಮೋದಿಯವರ ಕೇಂದ್ರ ಸರಕಾರದ ಕೃಷಿ ಇಲಾಖೆಯಿಂದ ದೇಶದ ಎಲ್ಲ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಒಂದು ಹೊಸ ಮಾದರಿ ಕಾನೂನು ಸಿದ್ಧಪಡಿಸಲಾಗಿದೆ. 'ಕೃಷಿ ಉತ್ಪನ್ನ ಮತ್ತು ಜಾನುವಾರು ಮಾರುಕಟ್ಟೆ ಕಾನೂನು ೨೦೧೭' ಎಂಬುದೇ ಈ ಹೊಸ ಮಾದರಿ ಕಾನೂನು. ಇದರ ಮೊದಲನೇ ಅಧ್ಯಾಯದ ೧೮ನೇ ಭಾಗವು 'ರೈತ–ಉತ್ಪಾದಕ ಕಂಪನಿ' (ಎಫ್‌ಪಿಸಿ) ಕುರಿತು ಹೇಳುತ್ತದೆ. ಭಾರತೀಯ ಕಂಪನಿ ಕಾನೂನು ೧೯೫೬ರ ಪ್ರಕಾರ ಕೃಷಿ ಕಂಪನಿಗಳನ್ನು ನೋಂದಣಿ ಮಾಡುವ ಕುರಿತು ಪ್ರಸ್ತಾಪವಿದೆ. ಅಲ್ಲಿಗೆ ಭಾರತದಲ್ಲಿ ಕಾರ್ಪೊರೇಟ್ ಕೃಷಿಯನ್ನು ವ್ಯಾಪಕಗೊಳಿಸಿ ಸಣ್ಣ ಹಿಡುವಳಿದಾರರು ಭೂಮಿಯನ್ನು ಮಾರಿಕೊಳ್ಳುವ ಅಥವಾ ಕಂಪನಿಗಳಿಗೆ ಒಪ್ಪಂದದ ಮೇಲೆ ಬಿಟ್ಟುಕೊಡುವ ಅನಿವಾರ್ಯತೆಗೆ ಒಳಗಾಗುತ್ತಾರೆ. ಪರಿಣಾಮವಾಗಿ ಭಾರತದಲ್ಲಿ ೧ರಿಂದ ೫ ಎಕರೆ ಭೂಮಿ ಹೊಂದಿದ ಸುಮಾರು ಶೇ. ೭೫ರಷ್ಟು ಸಣ್ಣ ರೈತರು ಕೃಷಿ ಭೂಮಿಯಿಂದ ಹೊರಬೀಳುತ್ತಾರೆ. ರೈತರೇ ಹೊರಬಿದ್ದ ಮೇಲೆ ಕೃಷಿ ಕೂಲಿಕಾರರಿಗೇನು ಕೆಲಸ? ಕೃಷಿ ಕೈಗಾರಿಕೆಯ ಹೆಸರಿನಲ್ಲಿ ಯಾಂತ್ರಿಕರಣಗೊಂಡ ಕಾರ್ಪೊರೇಟ್ ಕೃಷಿ ವಲಯದಿಂದ ಸಾಂಪ್ರದಾಯಿಕ ಕೃಷಿಕೂಲಿಕಾರರೂ ಹೊರಬೀಳುತ್ತಾರೆ. ದೇಶದ ಆಹಾರ ಭದ್ರತೆಯು ಇದರಿಂದ ನಾಶವಾಗುತ್ತದೆ.

ತಾವೇ ಆಯ್ಕೆ ಮಾಡಿದ ಪ್ರಭುತ್ವಗಳ ನೀತಿಗಳಿಂದ ಜನತೆ ಹಸಿವು, ಬಡತನ, ನಿರುದ್ಯೋಗದ ಸಂಕೋಲೆಗಳಿಗೆ ಬಲಿಯಾಗುತ್ತಾರೆ. ಇದು ಉದ್ಯಮ ಸ್ನೇಹಿ ಪ್ರಭುತ್ವದ ಪರಿಣಾಮ. ಪಕ್ಷ ಯಾವುದೇ ಇರಲಿ ಅದು ಜನಸ್ನೇಹಿಯಾಗದೆ ಕೇವಲ ಉದ್ಯಮ ಸ್ನೇಹಿಯಾಗಿ ಬಂಡವಾಳಗಾರರ ಹಿತಾಸಕ್ತಿ ಬಯಸಿದರೆ ಅದಕ್ಕೆ ಭವಿಷ್ಯವಿಲ್ಲ. ಜನ ಬಂಡೇಳುತ್ತಾರೆ. ಆದರೆ ಅವರು ಬಂಡವಾಳಗಾರರು ಹುಟ್ಟುಹಾಕಿದ ಪಕ್ಷಗಳಲ್ಲೇ ಬದಲಿ ಹುಡುಕುತ್ತಾರೆ. ದೇಶದ ದುಡಿವವರ್ಗದ ಸಂಘಟನೆಗಳು ಬೀದಿಗೆ ಬಿದ್ದ, ಸಂಕೋಲೆಗಳಲ್ಲಿ ಸಿಕ್ಕಿಹಾಕಿಕೊಂಡ ಜನರಲ್ಲಿ ವರ್ಗಪ್ರಜ್ಞೆ ಬೆಳೆಸಿ, ವಿಶಾಲ ತಳಹದಿಯ ಸಂಘಟನೆಗಳನ್ನು ಬೆಳೆಸಿ ಎಲ್ಲ ರೀತಿಯ ಶೋಷಿತರನ್ನು ಒಂದೆಡೆ ಸೇರಿಸಿ ದುಡಿವವರ್ಗವನ್ನು ಕ್ರಾಂತಿಯ ಮುಂಚೂಣಿಗೆ ತಂದಾಗ, ಅದು ವ್ಯವಸ್ಥೆಯ ಬದಲಾವಣೆಗೆ ದಾರಿ ಮಾಡಿಕೊಡುತ್ತದೆ. ಅದನ್ನೇ ಕಾರ್ಲ್ ಮಾರ್ಕ್ಸ್ ಹೇಳಿದ್ದು, ಅಂಥ ಕ್ರಾಂತಿಯಲ್ಲಿ 'ಶ್ರಮಿಕವರ್ಗ ಕಳೆದು ಕೊಳ್ಳುವದೇನೂ ಇಲ್ಲ, ಸಂಕೋಲೆಗಳನ್ನು ಮಾತ್ರ. ಆದರೆ ಗೆಲ್ಲಲು ವಿಶ್ವವೇ ಮುಂದಿದೆ' ಅಂತ. ಇಂದಿನ ಬಂಡವಾಳಶಾಹಿ ವರ್ಗ ನವಸಾಮ್ರಾಜ್ಯಶಾಹಿಯಾಗಿದೆ. ಅದು ಬೆಳೆದಷ್ಟೂ ವಿಶ್ವದ ಜನತೆಯ ಬದುಕು ಅನಿಶ್ಚಿತತೆಗೊಳಗಾಗುತ್ತದೆ. ಅವರ ಬದುಕು ಭೀಕರವಾಗುತ್ತದೆ. ಅದರಲ್ಲೂ ಶ್ರಮವನ್ನೇ ನಂಬಿದ ಶ್ರಮಿಕರ ಬದುಕು ಶೂನ್ಯವಾಗುತ್ತದೆ. ಆ ಶೂನ್ಯವನ್ನು ತುಂಬುವುದೇ ಮಾರ್ಕ್ಸ್ ಮತ್ತು ಮಾರ್ಕ್ಸ್‌ವಾದ. ಇದು ಮೇ ದಿನದ ಸಂದೇಶವಾಗಬೇಕು. ಭಾರತದ, ವಿಶ್ವದ ಎಲ್ಲ ರೀತಿಯ ಶೋಷಣೆಗೊಳಗಾದ ಜನತೆಯ ಸಂಕೋಲೆಗಳು ಕತ್ತರಿಸಿ ಹೋಗಬೇಕು. ಬಂಡವಾಳವು ಜಾಗತೀಕರಣಗೊಂಡಾಗ ಶ್ರಮಿಕವರ್ಗದ ಪ್ರತಿರೋಧವೂ ಜಾಗತೀಕರಣಗೊಳ್ಳಬೇಕು. ಶೋಷಣೆರಹಿತ ವಿಶ್ವದ ನಿರ್ಮಾಣ ದುಡಿವವರ್ಗದ ಗುರಿಯಾಗಬೇಕು. ಅದಕ್ಕಾಗಿ ಮಾರ್ಕ್ಸ್ ಆದಿಯಾಗಿ ವಿಶ್ವದ ಎಲ್ಲ ಜನಪರ ಚಿಂತಕರು, ಹೋರಾಟಗಾರರು ತೋರಿದ ದಾರಿ ಮಾದರಿಯಾಗಬೇಕು.

ವಿಶ್ವದ ಶ್ರಮಿಕರಿಗೆ ಮೇ ದಿನದ ಶುಭಾಶಯಗಳು.

> ಕಮ್ಯುನಿಸ್ಟರು ಯಾವುದೇ ಹೊಸ ಸಿದ್ಧಾಂತಗಳನ್ನು ಕಂಡುಹಿಡಿದಿಲ್ಲ. ಇದಕ್ಕೆ ಸಂಬಂಧಪಟ್ಟ ತಾತ್ವಿಕ ಸರಕು, ಅಭಿಪ್ರಾಯಗಳು, ಇವು ಯಾವುವೂ ಯಾವುದೋ ಮಹಾಪುರುಷ ಅನ್ವೇಷಿಸಿ ಹೊಸದಾಗಿ ಕಂಡುಹಿಡಿದು, ತನ್ಮೂಲಕ ಸಾರ್ವತ್ರಿಕ ಸುಧಾರಣೆಗೆ ಮುಂದಾದ ಪ್ರಸಂಗವೇನೂ ಅಲ್ಲ. ನಾವು, ಕಮ್ಯುನಿಸ್ಟರು ಸದ್ಯದ ಪರಿಸ್ಥಿತಿಯಲ್ಲಿ ಇರುವ ವರ್ಗ ಸಂಬಂಧಗಳನ್ನು ಗಮನಿಸಿ, ಅಭ್ಯಸಿಸಿ, ಅವುಗಳ ಚಾರಿತ್ರಿಕ ಸಂಚಲನಗಳನ್ನು ಗುರುತಿಸಿ, ನಮ್ಮ ಕಣ್ಮುಂದೆಯೇ ನಿರಂತರ ಸರಿಯುವ ಆಗುಹೋಗುಗಳನ್ನು ಅರ್ಥಮಾಡಿಕೊಂಡು, ಅವನ್ನೇ ಸಾಧಾರಣ ಮಾತುಗಳಲ್ಲಿ ಹೇಳುತ್ತಿದ್ದೇವೆ. ವರ್ತಮಾನ ಸ್ಥಿತಿಯಲ್ಲಿ ಹುದುಗಿರುವ ಆಸ್ತಿಯ ಸಂಬಂಧಗಳನ್ನು ತೊಡೆದುಹಾಕುವುದು ಅನ್ನುವುದು ಕಮ್ಯುನಿಸ್ಟರದೇ ವಿಶಿಷ್ಟ ಗುಣವೇನೂ ಅಲ್ಲ. ಎಲ್ಲ ಕಾಲದಲ್ಲೂ ಚಾರಿತ್ರಿಕ ಬದಲಾವಣೆಗಳು ಆದಾಗಲೆಲ್ಲ ಹೊಸಹೊಸ ಆಸ್ತಿಸಂಬಂಧಗಳು ಅವುಗಳ ಜೊತೆಜೊತೆಗೇ ಉಂಟಾಗಿವೆ. ಕಮ್ಯುನಿಸ್ಟ್ ಕ್ರಾಂತಿಯಾದ ಮೇಲೆ ಖಾಸಗಿ ಆಸ್ತಿಯ ಹಕ್ಕು ರದ್ದಾಗುತ್ತದೆ. ಇದು ಈ ಕ್ರಾಂತಿ ಎಂಬ ಚಾರಿತ್ರಿಕ ಬದಲಾವಣೆ ತರುವ ಹೊಸ ಸಂಬಂಧ !
>
> – ಕಾರ್ಲ್ ಮಾರ್ಕ್ಸ್




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |



**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

(ಈ ತಿಂಗಳು ೩ನೇ ಪುಟದಿಂದ)

ಜರುಗಿಸುವುದನ್ನು ಕಂಡಿದ್ದೇವೆ. ತುರ್ತು ಪರಿಸ್ಥಿತಿ ಅನುಭವ ನಮಗೆ ಚೆನ್ನಾಗಿದೆ ಒಂದೂವರೆ ವರ್ಷ ಜಾರಿಯಲ್ಲಿದ್ದಾಗ್ಯೂ. ಆಗ ಪತ್ರಿಕೆಗಳು ಸಂಪಾದಕೀಯ ವಿಲ್ಲದೆ ಖಾಲಿ ಜಾಗ ಬಿಟ್ಟು ಪ್ರಕಟವಾದ್ದನ್ನು ನೋಡಿದ್ದೇವೆ. ಮಾಧ್ಯಮಗಳನ್ನು ನಿಯಂತ್ರಣದಲ್ಲಿಟ್ಟು ಕೊಳ್ಳಲು ಪ್ರಭುತ್ವಗಳು ಯಾವಾಗಲೂ ಪ್ರಯತ್ನಿಸುತ್ತಲೇ ಇರುತ್ತವೆ. ಅದೇನೂ ಹೊಸದಲ್ಲ. ಅಂಥ ಪ್ರಯತ್ನ ವೊಂದನ್ನು ಮೋದಿ ಸರಕಾರದ ಸಚಿವೆ ಸ್ಮೃತಿ ಇರಾನಿ ಮಾಡಿ ಮಣ್ಣು ಮುಕ್ಕಿದರು. ಈಕೆ ಮಾನವ ಸಂಪನ್ಮೂಲದ ಸಚಿವೆಯಾಗಿದ್ದಾಗ ಸಾಕಷ್ಟು ಸುದ್ದಿ ಮಾಡಿದ್ದರು. ಈಕೆಯ ವಿದ್ಯಾರ್ಹತೆಯೇ ದೊಡ್ಡ ವಿಷಯ ಆಗಿತ್ತು. ಮೋದಿ ಸರಕಾರದಲ್ಲಿ ವಾರ್ತಾ ಇಲಾಖೆಯ ಸಚಿವೆಯಾಗಿರುವ ಈಕೆ ಸುಳ್ಳು ಸುದ್ದಿ ಪ್ರಕಟಣೆಯನ್ನು ತಡೆಯಲು ಒಂದು ಸುತ್ತೋಲೆ ಹೊರಡಿಸಿದರು. ಅದು ಪತ್ರಕರ್ತರ ಮೇಲೆ ಕ್ರಮ ಕೈಗೊಂಡು ಅವರಿಗೆ ಸರಕಾರ ನೀಡುವ ಮಾನ್ಯತೆಯನ್ನು ರದ್ದುಗೊಳಿಸುವು ದಾಗಿತ್ತು. ಸರಕಾರ ವರದಿಗಾರರಿಗೆ, ಸಚಿವಾಲಯ ಗಳಿಗೆ, ಸರಕಾರಿ ಕಚೇರಿಗಳಿಗೆ ಯಾವ ನಿರ್ಬಂಧವೂ ಇಲ್ಲದೆ ಪ್ರವೇಶಿಸಲು ಪರವಾನಗಿ ನೀಡುತ್ತದೆ. ಇದಕ್ಕೆ ಅಕ್ರೆಡಿಟೇಶನ್ ಎನ್ನುತ್ತಾರೆ. ಅದು ಪತ್ರಕರ್ತರ ಹಕ್ಕು ಹಾಗೂ ಸೌಲಭ್ಯ ಆಗಿರುತ್ತದೆ. ಮೊದಲ ಸಲ ಎಚ್ಚರಿಕೆ ನೀಡಿ, ಎರಡನೇ ಸಲ ಅದನ್ನು ರದ್ದುಗೊಳಿಸುವ ಬೆದರಿಕೆ ಹಾಕಿದರು ಸ್ಮೃತಿ ಇರಾನಿ. ಸುತ್ತೋಲೆ ದೊಡ್ಡ ಗದ್ದಲವನ್ನೇ ಎಬ್ಬಿಸಿತು ಎಲ್ಲ ಕಡೆಗಳಿಂದ. ಮುಖ್ಯವಾಗಿ ಪತ್ರಕರ್ತರಿಂದ ಪ್ರತಿಭಟನೆಗಳು ಬಂದವು. ಇದರಿಂದ ಎಚ್ಚೆತ್ತ ಪ್ರಧಾನಿ ಕೂಡಲೇ ಸುತ್ತೋಲೆಯನ್ನು ಹಿಂತೆಗೆದುಕೊಳ್ಳುವಂತೆ ಆದೇಶ ನೀಡಿದರು. ಇದು ಈಚೆಗೆ ನಡೆದ ಪ್ರಕರಣ–ಪಾರ್ಲಿಮೆಂಟ್ ಅಧಿವೇಶನ ಮುಕ್ತಾಯವಾದ ಮೇಲೆ. ಇದು ಪ್ರಧಾನಿಯವರಿಗೆ ಮೊದಲೇ ತಿಳಿದಿರಲಿಲ್ಲವೆ? ಸಚಿವೆ ಸ್ವತಂತ್ರವಾಗಿ ವರ್ತಿಸಿದರೆ? ಇವು ಉತ್ತರಿಸಲಾಗದ ಪ್ರಶ್ನೆಗಳು. ಆದರೆ ನಾಲ್ಕು ವರ್ಷಗಳ ಮೋದಿ ಸರಕಾರದ ಆಡಳಿತಾವಧಿಯಲ್ಲಿ ಈ ಬಗೆಯಲ್ಲಿ ಸುತ್ತೋಲೆ ವಾಪಸ್ಸು ಪಡೆದ ಪ್ರಕರಣಗಳು ಕಮ್ಮಿ ಏನಲ್ಲ. ಜನರ ಪ್ರತಿಕ್ರಿಯೆ ನಿರೀಕ್ಷಿಸಿ ಕ್ರಮ ಕೈಗೊಳ್ಳುವುದು ಹಿಂದುತ್ವವಾದಿಗಳು ಹಿಂದಿನಿಂದಲೂ ಅನುಸರಿಸಿಕೊಂಡು ಬಂದಿರುವ ಚಾಳಿ.

✶ ✶ ✶

ಕರ್ನಾಟಕದಲ್ಲಿ ಚುನಾವಣೆಯ ಕಾವು ಏರುತ್ತಿದೆ. ಚುನಾವಣಾ ಆಯೋಗ ವೇಳಾಪಟ್ಟಿಯನ್ನೂ ಪ್ರಕಟಿಸಿಯಾಯಿತು. ಮೇ ೧೫ರ ವೇಳೆಗೆ ಗೆಲುವು ಸೋಲುಗಳ ಲೆಕ್ಕಾಚಾರವೆಲ್ಲ ಅಂತ್ಯಗೊಳ್ಳುತ್ತದೆ. ಫಲಿತಾಂಶ ಹೊರಬಿದ್ದಿರುತ್ತದೆ. ಯಾರು ಅಧಿಕಾರದ ಗದ್ದುಗೆ ಏರುತ್ತಾರೆ ಎನ್ನುವುದು ಗೊತ್ತಾಗುತ್ತದೆ. ೨೦೧೮ರ ಚುನಾವಣೆಯ ಪ್ರಚಾರ ಕಾರ್ಯವನ್ನು ರಾಜಕೀಯ ಪಕ್ಷಗಳು ಪ್ರಾರಂಭ ಮಾಡಿ ತಿಂಗಳುಗಳೇ ಕಳೆದಿವೆ. ಭಾಜಪ ಕಾಂಗ್ರೆಸ್ ಆಡಳಿತವನ್ನು ಅಂತ್ಯಗೊಳಿಸಲು ಪಣ ತೊಟ್ಟಿದ್ದಾರೆ, ಕಾಂಗ್ರೆಸ್ ಅಧಿಕಾರ ಉಳಿಸಿಕೊಳ್ಳುವ ಸನ್ನಾಹದಲ್ಲಿ ತೊಡಗಿದೆ, ಜೆಡಿಎಸ್ ಯಾವ ಕಡೆ ಹೊರಳಿದರೆ ಕ್ಷೇಮ ಎನ್ನುವ ಲೆಕ್ಕಾಚಾರದಲ್ಲಿದೆ. ಟಿಕೇಟು ಆಕಾಂಕ್ಷಿಗಳ ಪರದಾಟ ಪ್ರಾರಂಭವಾಗಿದೆ. ಭಾಜಪದ ಮೊದಲ ಪಟ್ಟಿ ಪ್ರಕಟವಾಗುತ್ತಿದ್ದ ಹಾಗೇ ಅತೃಪ್ತಿಯು ಭುಗಿಲೆದ್ದಿದೆ. ಇದು ಅನಿರೀಕ್ಷಿತವೇನಲ್ಲ. ಎಲ್ಲ ಪಕ್ಷಗಳಲ್ಲೂ ಇದ್ದದ್ದೆ : 'ಆಯಾರಾಮ್ ಗಯಾರಾಮ್' ಗೊಂದಲವೆಲ್ಲ ಮುಗಿಯುವುದಕ್ಕೆ ಕೆಲವು ದಿನಗಳು ಬೇಕು. ವಂಶಪಾರಂಪರ್ಯ ಎಂದು ಕಾಂಗ್ರೆಸ್ಸನ್ನು ಹೀಯಾಳಿಸುವವರೇ ಅದಕ್ಕೆ ಮಾರುಹೋಗಿದ್ದಾರೆ, ಜೆಡಿಎಸ್ ಬಿಡಿ, ಅದು ಅಪ್ಪ ಮಕ್ಕಳ ಪಾರುಪತ್ಯ. ಈಗ ದೇವೇಗೌಡರ ಮೊಮ್ಮಕ್ಕಳೂ ಇಳಿದಿದ್ದಾರೆ ಕಣಕ್ಕೆ. ಯಡಿಯೂರಪ್ಪನವರ ಪುತ್ರ ಈಗ ಮೈಸೂರಿನ ವರುಣ ಕ್ಷೇತ್ರದಲ್ಲಿ, ಸಿದ್ದರಾಮಯ್ಯನ ಪುತ್ರನನ್ನು ಎದುರಿಸಲು ಸಿದ್ಧರಾಗಿದ್ದಾರೆ. ನಾಲ್ಕಾರು ಸಚಿವರ ಮಕ್ಕಳುಗಳು ಈಸಲ ಕಣಕ್ಕಿಳಿಯುತ್ತಿದ್ದಾರೆ. ಕಾಂಗ್ರೆಸ್, ಭಾಜಪಗಳ ವರಿಷ್ಠರು ರಾಜ್ಯದಲ್ಲಿ ಮುಕ್ಕಾಮ್ ಹೂಡಿದ್ದಾರೆ, ರೋಡ್ ಷೋ, ಸಮಾವೇಶಗಳಿಗೆ ಜನ ಕೂಡಿಸಿದ್ದಾರೆ. ಮೊದಲೇ ವಾಹನಗಳ ದಟ್ಟಣೆಯಿಂದ ಟ್ರಾಫಿಕ್ ಜಾಮ್‌ಗಳಿಂದ ಬವಣೆ ಅನುಭವಿಸುತ್ತಿರುವ ಜನ, ಅದರಲ್ಲೂ ಬೆಂಗಳೂರಿನ ಜನರ ಪಾಡು ಯಾರಿಗೂ ಬೇಡದ್ದು. ಎಲ್ಲೆಡೆ ಫ್ಲೆಕ್ಸ್‌ಗಳು ಮೆರೆಯುತ್ತಿವೆ. ಹಳೆಯ ದ್ವೇಷಗಳು ಮರುಕಳಿಸುತ್ತಿವೆ. ಪತ್ರಿಕೆಗಳಿಗೆ, ಮಾಧ್ಯಮಗಳಿಗೆ ಚುನಾವಣೆಯೆಂದರೆ ಸುಗ್ಗಿ. ಜಾಹೀರಾತುಗಳ ಭರಾಟೆ ಒಂದು ಕಡೆ, ಊಹಾಪೋಹಗಳು, ಸಮೀಕ್ಷೆಗಳಿಗೆ, ಒಣ ಚರ್ಚೆಗಳಿಗೆ ಅವಕಾಶ. ಯಾವ ಚಾನೆಲ್ ಹಾಕಿದರೂ ಚುನಾವಣೆಯ ಪ್ರಚಾರಕ್ಕೇ ಆದ್ಯತೆ. ಎಲ್ಲ ಪ್ರಮುಖ ಪಕ್ಷಗಳೂ ಕೂಡ ತಮ್ಮದೇ ಆದ ಚಾನೆಲ್‌ಗಳನ್ನು ಹೊಂದಿವೆ. ಅಂತೂ ಒಂದು ತಿಂಗಳು ಚುನಾವಣೆ ರಂಗನ್ನು ಸವಿಯುವುದೀಗ ನಮ್ಮ ಕೆಲಸ.

✶ ✶ ✶

ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಸ್ತ್ರೀಯರ ಪರವೇನಲ್ಲ, ರಿಯಲ್ ಎಸ್ಟೇಟ್ ದಂಧೆಯಲ್ಲಿದ್ದ ಈತ ಅಬ್ಬಬ್ಬ ಎಂದರೆ ಸ್ವಾರ್ಥಿ. ತಾನು, ತನ್ನ ಕುಟುಂಬದ ಸದಸ್ಯರು ಮುಖ್ಯ ಆತನಿಗೆ. ಮಗಳು, ಅಳಿಯ, ಮಗ ಎಲ್ಲರನ್ನೂ ಅಧಿಕಾರ ಸ್ಥಾನದಲ್ಲಿ ಕುಳ್ಳಿರಿಸಿದ್ದಾನೆ. ಇದೀಗ ಕುಖ್ಯಾತ ಗೂಢಚರ್ಯೆ ಸಂಸ್ಥೆ ಸಿಐಎಗೆ ಸ್ತ್ರೀಯೊಬ್ಬಳನ್ನು ಡೈರೆಕ್ಟರ್ ಹುದ್ದೆಗೇರಿಸಿದ್ದಾನೆ. ಇದೇ ಮೊದಲ ಬಾರಿಗೆ ಆಕೆ ಹುದ್ದೆಯನ್ನು ಅಲಂಕರಿಸಿದ್ದಾಳೆ. ಆಕೆಯ ಹೆಸರು ಜೀನಾ ಹಾಸ್ಪೆಲ್. ಈಕೆ ಸಿಐಎಗೆ ಹೊಸಬಳೇನಲ್ಲ, ಚಿರಪರಿಚಿತಳು. ಡೆಪ್ಯೂಟಿ ಡೈರೆಕ್ಟರ್ ಆಗಿದ್ದವಳು. ಈಕೆ ಹಿಂಸೆ ಮಾಡುವುದರಲ್ಲಿ ಪರಿಣತೆ. ಪುರುಷರೇ ಪ್ರಧಾನವಾಗಿರುವ ಈ ಸಂಸ್ಥೆಯಲ್ಲಿ ಹಾಸ್ಪೆಲ್ ಆರೋಪಿಗಳಿಗೆ ಚಿತ್ರಹಿಂಸೆ ನೀಡುವುದರಲ್ಲಿ ಎತ್ತಿದ ಕೈ. ನಾಜಿಗಳನ್ನು ನೆನಪಿಸುವಂಥ ಹಿಂಸಕಿ ಎಂದು ಕುಖ್ಯಾತಿ ಗಳಿಸಿದ್ದಾಳೆ ಈಕೆ. ಥಾಯ್ಲೆಂಡ್ ಮೊದಲಾದ ಕಡೆ ಈಕೆ ಮಾಡಿದ ಹಿಂಸಾಚಾರಕ್ಕೆ ಮಿತಿಯೇ ಇಲ್ಲ. 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆ ಈಕೆಯ ಪೂರ್ವೇತಿಹಾಸ, ಘನಂದಾರಿ ಅಟ್ಟಹಾಸವನ್ನು, ಕ್ರೌರ್ಯವನ್ನು ಹೊರಗೆಡಹಿದೆ. ಅಮೆರಿಕದ ಮಾನವ ಹಕ್ಕುಗಳ ತಂಡಗಳು ಹಾಸ್ಪೆಲ್ ಸಿಐಎ ಡೈರೆಕ್ಟರ್ ಆಗಿ ನೇಮಕಗೊಂಡಿರುವುದನ್ನು ವಿರೋಧಿಸಿವೆ. ನಾನಾ ಬಗೆಯ ಹಿಂಸೆಯನ್ನು ಆರೋಪಿಗಳಿಗೆ ವಿಧಿಸುವುದರಲ್ಲಿ ಈಕೆ ಚಾಣಾಕ್ಷೆ. ಈಗಂತೂ ಭಯೋತ್ಪಾದಕರು ಎಂದು ಹಣೆಪಟ್ಟಿ ಪಡೆದವರ ಪಾಡು ಹೇಳತೀರದು. ಈ ಎಲ್ಲ ಕಿರಾತ ಗುಣಗಳನ್ನೂ ನೋಡಿಯೇ ಟ್ರಂಪ್ ಈಕೆಯನ್ನು ಉನ್ನತ ಹುದ್ದೆಗೇರಿಸಿದ್ದಾರೆ.

✶ ✶ ✶

ಮುಂಬೈನಲ್ಲಿ ೨೦೧೭ರ ಜನವರಿಯಲ್ಲಿ ನಡೆದ ವಿಜ್ಞಾನ ಸಮ್ಮೇಳನದ ನಂತರ ೨೦೧೮ರ ಏಪ್ರಿಲ್‌ನಲ್ಲಿ ಸಮ್ಮೇಳನವು ಮಣಿಪುರದಲ್ಲಿ ಜರುಗಿತು. ಉನ್ನತ ಮಟ್ಟದ ವಿಜ್ಞಾನಿಗಳಾರೂ ಉಪಸ್ಥಿತರಿರಲಿಲ್ಲ. ಜನವರಿಯಲ್ಲಿ ಹೈದರಾಬಾದ್‌ನ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಸಮ್ಮೇಳನ ನಡೆಯುತ್ತದೆಂದು ತಿಳಿದು ಅಲ್ಲಿಗೆ ತೆರಳಲು ಅನೇಕ ವಿಜ್ಞಾನಿಗಳು ತಯಾರಿ ನಡೆಸಿದ್ದರು. ಏನೋ ಸಬೂಬು ಹೇಳಿ ಅದನ್ನು ಕೇಂದ್ರ ಸರ್ಕಾರ ವಜಾ ಮಾಡಿಸಿತು. ಅದರ ಪರಿಣಾಮ ಮಣಿಪುರದಲ್ಲಿ ವಿಜ್ಞಾನಿಗಳ ಅನುಪಸ್ಥಿತಿ. ಭಾರತೀಯ ಸಂಸ್ಕೃತಿಯನ್ನು ಅರೆದು ನುಂಗಿರುವ ಭಾಜಪದ ಧುರೀಣರು ಇದ್ದೆಡೆ ಅಪ್ರಬುದ್ಧ ಮತ್ತು ಅಸಂಗತ ಹೇಳಿಕೆಗಳಿರಬೇಕಾದ್ದು ಸಹಜ. ಮುಂಬೈಯಲ್ಲಿ ಋಗ್ವೇದದ ಋಷಿಗಳು ಕಂಡುಹಿಡಿದಿದ್ದ ಅಂತರಗ್ರಹ ಯಾನದ ಶ್ಲಾಘನೆ ಬಂದಿತ್ತು. ಮಣಿಪುರದಲ್ಲಿ ಸ್ಟೀಫನ್ ಹಾಕಿಂಗ್ ಹೇಳಿದ್ದನೆನ್ನಲಾದ ಒಂದು ಉಕ್ತಿಯನ್ನು ಯಾರೋ ಅನಾಮಧೇಯ ಕೇಂದ್ರ ಸಚಿವನು ಉದ್ಧರಿಸಿದನೆಂದು ವರದಿಯಾಗಿತ್ತು. ಹಾಕಿಂಗ್ ಅವರ ಪ್ರತಿನಿಧಿಗಳು 'ಅದೆಲ್ಲಾ ಬೊಗಳೆ, ಹಾಕಿಂಗ್ ಎಂದೂ ಅಂತಹ ಮಾತನ್ನಾಡಿರಲಿಲ್ಲ' ಎಂದು ವಿವರಣೆ ನೀಡಿದರು. ಸಚಿವರ ಪ್ರಕಾರ ಹಾಕಿಂಗ್ ಹೇಳಿದ್ದುದು, 'ವೇದದಲ್ಲಿ ನಮ್ಮ ವಿಜ್ಞಾನಕ್ಕಿಂತಲೂ ಹೆಚ್ಚಿನದಿದೆ' ಎಂದು. ಒಬ್ಬ ತುಂಟ ಪತ್ರಕರ್ತರು 'ಎಲ್ಲಿ ಹೇಳಿದ್ದಾರೆಂಬುದನ್ನು ತಿಳಿಸಿ' ಎಂದರು. ಮೈಯ್ಯಲ್ಲಿ ಬೆವರು ಸುರಿಸದೆ ಸಚಿವರು ದಬಾಯಿಸಿದರು : "ಸಂಶೋಧನೆ ಮಾಡಿ ತಿಳಿದುಕೊಳ್ಳಿ. ಆಗಲೂ ತಿಳಿಯದಿದ್ದರೆ ನನ್ನ ಬಳಿ ಬನ್ನಿ, ನಾನು ಹೇಳುತ್ತೇನೆ." ಯಾರೋ ಋಗ್ವೇದದ ನಾಸದೀಯ ಸೂಕ್ತದ ಬಗ್ಗೆ (೧೦–೧೨೯) ಇವರಿಗೆ ಹೇಳಿದ್ದಿರಬೇಕು. ಅದನ್ನು ಅರ್ಥಮಾಡಿಕೊಳ್ಳದ ಮೊದ್ದು ಮಂತ್ರಿ ಪೇಚಿಗೆ ಸಿಲುಕಿದರು. ಇಂತಹ ಮೋಜಿನ ಪ್ರಸಂಗಗಳು ಇಲ್ಲದಿದ್ದರೆ ವಿಜ್ಞಾನ ಸಮ್ಮೇಳನಕ್ಕೆ ಕಳೆ ಕಟ್ಟುವುದಿಲ್ಲವೆಂದು ಭಾಜಪ ತೀರ್ಮಾನಿಸಿದೆ. ನಿಗದಿಯಾಗಿದ್ದಂತೆ ಜನವರಿಯಲ್ಲಿ ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಸಮ್ಮೇಳನ ನಡೆಸಿದ್ದರೆ ಏಳೆಂಟು ನೊಬೆಲ್ ಪ್ರಶಸ್ತಿ ಪುರಸ್ಕೃತರು ಬರುವುದಿತ್ತಂತೆ. ಮಣಿಪುರಕ್ಕೆ ಯಾರೂ ಬರಲಿಲ್ಲ. ಸಮ್ಮೇಳನದಲ್ಲಿ ಏನೆಲ್ಲ ಚರ್ಚೆಗಳು ನಡೆದವೋ ಅದು ವರದಿಯಾಗಿಲ್ಲ. ಒಟ್ಟಿನಲ್ಲಿ ಕಳೆದ ಎಪ್ಪತ್ತು ವರ್ಷಗಳ ಇತಿಹಾಸದಲ್ಲಿ ಇಂತಹ ಪ್ರಹಸನ ನಡೆದಿರಲಿಲ್ಲ. ಅದೇ ಮಣಿಪುರ ವಿಜ್ಞಾನ ಕಾಂಗ್ರೆಸ್ ದಾಖಲೆ.

✶ ✶ ✶

ಚೀಣಾದಲ್ಲಿ ಕಮ್ಯುನಿಸ್ಟ್ ಪಕ್ಷವು ಅಧಿಕಾರದಲ್ಲಿದೆ ಎಂಬುದು ಐತಿಹ್ಯವೋ ಎಂಬಂತೆ ಅಲ್ಲಿ ಹಲವು ಬೆಳವಣಿಗೆಗಳು ನಡೆಯುತ್ತಿವೆ. ಕ್ಸಿ ಜಿನ್‌ಪಿಂಗ್ ಅಧ್ಯಕ್ಷರಾಗಿ ಚುನಾಯಿತರಾದಾಗ ಎರಡು ಮತಗಳು ಅವರ ವಿರುದ್ಧ ಬಿದ್ದುದ್ದುವಂತೆ! ಇಬ್ಬರು ಮತದಾರರಿಗೆ ಹಾಗೆ ವಿರೋಧ ವ್ಯಕ್ತಪಡಿಸಲು ಆಜ್ಞೆ ನೀಡಲಾಗಿತ್ತೆಂಬ ಜೋಕ್ ಕೇವಲ ಜೋಕ್ ಆಗಿದ್ದಿರಲಾರದು. ಪಿಂಗ್ ಈಗ ಜೀವಮಾನ ಪರ್ಯಂತ ಅವರ ದೇಶದ ಅಧ್ಯಕ್ಷರಾಗಿರಬೇಕೆಂದು ಪಾರ್ಲಿಮೆಂಟ್ ನಿರ್ಧಾರ ಪ್ರಕಟಿಸಿದೆ. ಅಧ್ಯಕ್ಷರಾಗಿ ಉಳಿಯುತ್ತಾರೋ ಮುಂದೊಂದು ದಿನ ಕಾರಾಗೃಹಕ್ಕೆ ತೆರಳುತ್ತಾರೋ ಹೇಗೆ ಹೇಳುವುದು! ಚೀಣಾದಲ್ಲಿ ಕಮ್ಯುನಿಸ್ಟ್ ಪಕ್ಷವು ಕಮ್ಯುನಿಸ್ಟ್ ಕಾರ್ಯವಿಧಾನವನ್ನು ಸಂಪೂರ್ಣವಾಗಿ ಕೈಬಿಟ್ಟಿದೆಯೆಂಬುದರಲ್ಲಿ ಸಂಶಯ ಉಳಿದಿಲ್ಲ. "ಪ್ರಜಾ ಪ್ರಭುತ್ವವಾದಿ ಕೇಂದ್ರೀಯತೆ" ಎಂಬುದು ಕಮ್ಯುನಿಸ್ಟ್ ಪಕ್ಷಗಳ ನೀತಿಯೆಂದು ಹೇಳುತ್ತಾರೆ. ಚೀಣಾದ ಪಕ್ಷದಲ್ಲಿ ಕೇಂದ್ರೀಯತೆ ಮಾತ್ರವೇ ಪ್ರಬಲವಾಗಿ ಉಳಿದಿದೆ. ಅಂತರರಾಷ್ಟ್ರೀಯವಾಗಿ ಚೀಣಾ ಅನುಸರಿಸುತ್ತಾ ಬಂದಿರುವ ನೀತಿ ಸಹ ಯಾವ ಅರ್ಥದಲ್ಲೂ ಕಮ್ಯುನಿಸ್ಟ್ ನೀತಿಯಾಗಿಲ್ಲ. ಶ್ರೀಲಂಕಾಕ್ಕೆ ನೀಡಿರುವ ಸಾಲದ ಬಾಬ್ತು ಹಂಬಂತೋಟಾ ಬಂದರನ್ನು ಚೀಣಾ ಸ್ವಾಧೀನ ಪಡೆಸಿಕೊಂಡಿದೆ, ಆಫ್ರಿಕಾದ ಹಲವು ದೇಶಗಳಲ್ಲಿ ಸಾವಿರಾರು ಎಕರೆ ಭೂಮಿಯನ್ನು ತನ್ನದಾಗಿಸಿಕೊಂಡಿದೆ. ಇದೆಲ್ಲಾ ಯಾವ ಮಾರ್ಕ್ಸ್‌ವಾದಿ ಸಿದ್ಧಾಂತದಡಿ ಸಿಂಧುವೆನಿಸಿಕೊಳ್ಳಲು ಯೋಗ್ಯವೋ ತಿಳಿಯದಾಗಿದೆ. ಆಜೀವ ಪರ್ಯಂತ ಜೈಲುವಾಸವೆಂಬ ಶಿಕ್ಷೆಯು ಅಪರಾಧಿಗಳಿಗೆ ನೀಡಲಾಗುತ್ತದೆ. ಚೀಣಾದ ಅಧ್ಯಕ್ಷರು ಆಜೀವಪರ್ಯಂತ ಅಧ್ಯಕ್ಷರೆಂಬುದು ಈ ಬಗೆಯದೆಂದು ಭಾವಿಸಬೇಕಾಗಿದೆ.

* * *

ನಮ್ಮ ದೇಶದ ಸರ್ವೋಚ್ಚ ನ್ಯಾಯಾಲಯವು ಗಣರಾಜ್ಯದ ರಾಜ್ಯಗಳ ಸ್ವಾತಂತ್ರ್ಯವನ್ನು ಕುಗ್ಗಿಸುವಂತಹ ಹಲವು ತೀರ್ಮಾನಗಳನ್ನು ನೀಡಿ ನಮ್ಮದು ಸ್ವಾಯತ್ತ ರಾಜ್ಯಗಳ ಒಕ್ಕೂಟವೋ ಅಥವಾ ಕೇಂದ್ರದ ಮರ್ಜಿ ಯಲ್ಲಿರುವ ಸಾಮಂತ ರಾಜ್ಯಗಳೋ ಎಂಬ ಅನುಮಾನ ಮೂಡಿಸಿದೆ. ಅಂತಹ ಎರಡು ತೀರ್ಮಾನಗಳು ನಮ್ಮ ರಾಜ್ಯಕ್ಕೆ ಮುಗ್ಗಟ್ಟಿನ ಸನ್ನಿವೇಶ ರಚಿಸಿವೆ. ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಪದವಿ ತರಗತಿಗಳಿಗೆ ಪ್ರವೇಶ ಪಡೆಯಲು ನಮ್ಮ ರಾಜ್ಯದವರಿಗೆ ಹೆಚ್ಚು ಅನುಕೂಲ ಕಲ್ಪಿಸುವ ರಾಜ್ಯ ಸರ್ಕಾರದ ಆಜ್ಞೆಯನ್ನು ಸರ್ವೋಚ್ಚ ನ್ಯಾಯಾಲಯವು ಅಸಿಂಧುವೆಂದು ಘೋಷಿಸಿದೆ. ಬೇರೆ ರಾಜ್ಯಗಳ ವಿದ್ಯಾರ್ಥಿಗಳು ಕರ್ನಾಟಕದ ವೈದ್ಯಕೀಯ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿ ಪದವಿ ಪಡೆಯುತ್ತಾರೆ. ಅಂಥವರಿಗೆ ಸ್ನಾತಕೋತ್ತರ ಶಿಕ್ಷಣಕ್ಕೆ ಯಾರೂ ಪ್ರವೇಶ ಮಾರ್ಗವನ್ನು ಮುಚ್ಚಿಹಾಕಿಲ್ಲ. ಆದರೆ ಸರ್ಕಾರವು ನಮ್ಮ ರಾಜ್ಯದ ವಿದ್ಯಾರ್ಥಿಗಳಿಗೆ ವಿಶೇಷ ಆದ್ಯತೆ ನೀಡಲು ಲಭ್ಯವಿರುವ ಸ್ಥಾನಗಳಲ್ಲಿ ಕೆಲವನ್ನು ಅವರಿಗಾಗಿ ಕಾದಿರಿಸಲಾಗಿತ್ತು. ಕಾಲೇಜು ಮತ್ತು ಆಸ್ಪತ್ರೆಗಳನ್ನು ನಮ್ಮ ರಾಜ್ಯದವರು ತಮ್ಮ ಹಣದ ಹೂಡಿಕೆಯಿಂದ ಸ್ಥಾಪಿಸಿದ್ದಾರೆ. ಅದಕ್ಕೆ ಸರ್ಕಾರದ ಬೆಂಬಲವನ್ನು ಪಡೆಯಲಾಗಿತ್ತು. ಹೀಗಿರುವಾಗ ರಾಜ್ಯದ ಹೊರಗಿನವರಿಗೂ ರಾಜ್ಯದವರಿಗೆ ನೀಡಲಾಗಿರುವ ಸೌಲಭ್ಯವನ್ನು ಕಲ್ಪಿಸಬೇಕೆಂಬ ಸರ್ವೋಚ್ಚ ನ್ಯಾಯಾಲಯದ ಆಜ್ಞೆಯು ಸರ್ವಥಾ ಪ್ರಶ್ನಾರ್ಹವಾಗಿದೆ. ಸ್ವಾಯತ್ತ ರಾಜ್ಯಗಳ ಒಕ್ಕೂಟದಲ್ಲಿ ರಾಜ್ಯಗಳಿಗೆ ಶಿಕ್ಷಣ ವ್ಯವಸ್ಥೆಯನ್ನು ತನ್ನ ರಾಜ್ಯದ ವಿದ್ಯಾರ್ಥಿಗಳಿಗೆ ಅನುಕೂಲಕರವಾಗಿ ಮಾಡುವ ಸ್ವಾತಂತ್ರ್ಯವೂ ಇಲ್ಲವೆಂದಾದರೆ ನಾವು ಒಕ್ಕೂಟದ ಪರಿಕಲ್ಪನೆಗೆ ನೂತನ ವ್ಯಾಖ್ಯಾನ ನೀಡಬೇಕಾಗುತ್ತದೆ. ಅಂಥದೇ ಅಥವಾ ಅದಕ್ಕಿಂತಲೂ ಹೆಚ್ಚು ಪ್ರಶ್ನಾರ್ಹವಾದ್ದು ಕಾವೇರಿ ನೀರಿನ ಬಗೆಗೆ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪು. ಇಂತಿಷ್ಟು ನೀರನ್ನು ನೆರೆರಾಜ್ಯಕ್ಕೆ ನೀಡಬೇಕೆಂದು ತೀರ್ಪಿತ್ತ ನಂತರ ನ್ಯಾಯಾಲಯವು ಎಂಥದೋ "ಕಾವೇರಿ ನೀರಿನ ಬೋರ್ಡ್" ರಚಿಸಬೇಕೆಂದು ತಿಳಿಸಿದೆ. ಅದರ ವ್ಯಾಪ್ತಿ ಏನೆಂಬುದು ಸ್ಪಷ್ಟವಾಗಿಲ್ಲ. ನಮ್ಮ ರಾಜ್ಯದ ಕಾವೇರಿ ಅಣೆಕಟ್ಟುಗಳು, ಅಂದರೆ ಕೃಷ್ಣರಾಜಸಾಗರ, ಹಾರಂಗಿ, ಗೊರೂರು, ಇತ್ಯಾದಿಗಳು, ಈ ಬೋರ್ಡಿನ ಅಧೀನದಲ್ಲಿರುತ್ತವೆಂದು ಹೇಳಲಾಗಿದೆ. ನಮ್ಮ ರಾಜ್ಯದ ಬೊಕ್ಕಸದಿಂದ ನಿರ್ಮಿಸಲಾದ ಅಣೆಕಟ್ಟುಗಳನ್ನು ಬೇರೆ ಯಾರದೋ ವಶಕ್ಕೆ ನಾವೇಕೆ ಕೊಡಬೇಕು? ಹಾಗೆ ಹೊರ ರಾಜ್ಯದವರು ಬಂದರೆ ಅವರಿಗೆ ಪ್ರವೇಶವನ್ನು ನೀಡಕೂಡದು. ನ್ಯಾಯಾಲಯವು ತಿಳಿಸಿರುವಷ್ಟು ನೀರು ಕೊಡಲು ಒಪ್ಪಿದ ನಂತರ ನಮ್ಮ ರಾಜ್ಯಕ್ಕೆ ಇದೆಂತಹ ಕಿರುಕುಳ? ಮಳೆ ಇಲ್ಲದ ವರ್ಷಗಳಲ್ಲಿ ನೀರಿನ ಪ್ರಮಾಣವನ್ನು ಕಡಿಮೆ ಮಾಡುವುದಷ್ಟೇ ಈ ಬೋರ್ಡಿನ ಪರಿಧಿಗೆ ಸೇರಲು ಅರ್ಹವಾಗಿದೆ. ನಮ್ಮ ರಾಜ್ಯ ಸರ್ಕಾರವು ಈ ವಿಷಯದಲ್ಲಿ ನ್ಯಾಯಾಲಯದ ತೀರ್ಪಿನ ಕ್ಲುಪ್ತವಾದ ವ್ಯಾಪ್ತಿಯನ್ನು ಸರಿಯಾಗಿ ತಿಳಿದು ಕಾರ್ಯಪ್ರವೃತ್ತವಾಗಬೇಕು.

* * *

ಭಾರತೀಯ ಜನತಾ ಪಕ್ಷದ ಅಧ್ಯಕ್ಷ ಸನ್ಮಾನ್ಯ ಅಮಿತ್ ಶಾ ಅವರು ಗಂಭೀರ ಅಪರಾಧದ ಪ್ರಕರಣ ವೊಂದರಲ್ಲಿ ಅಪರಾಧಿಯೆಂದು ಗುರುತಿಸಲಾಗಿದ್ದು ಮೊಕದ್ದಮೆಯನ್ನು ಎದುರಿಸಿದ ವೀರರು. ನ್ಯಾಯಾಲಯಗಳು ಅವರ ಪರವಾಗಿ ತೀರ್ಪುಗಳನ್ನು ನೀಡಿದ ನಂತರದ ಘಟನೆಗಳಲ್ಲಿ ನ್ಯಾಯಮೂರ್ತಿ ಲೋಯಾ ಅವರ ಸಾವು ಚರ್ಚೆಯ ವಿಷಯ ವಾಗಿರುವುದು ವಿಶ್ವಕ್ಕೆ ತಿಳಿದ ವಿಷಯ. ಸದ್ಯದಲ್ಲಿ ಅಮಿತ್ ಶಾ ಅವರು ನಮ್ಮ ರಾಜ್ಯದ ಅಧಿಕಾರಗ್ರಹಣದ ಜವಾಬ್ದಾರಿ ಹೊತ್ತು ತಮ್ಮ ಬೌದ್ಧಿಕ ದಿಗಂತವನ್ನು ವಿಸ್ತರಿಸಿಕೊಳ್ಳುವುದರಲ್ಲಿ ನಿರತರಾಗಿದ್ದಾರೆ. ಈಚೆಗಂತೂ ಅವರು ಕುವೆಂಪು ಅವರ ಕುಪ್ಪಳಿ ಸ್ಮಾರಕಕ್ಕೆ ಭೇಟಿ ನೀಡಿ ಕುವೆಂಪು ಎಂಬ ಖ್ಯಾತ ಸಾಹಿತಿಗಳೊಬ್ಬರು ನಮ್ಮ ರಾಜ್ಯದಲ್ಲಿದ್ದರೆಂಬ ಜ್ಞಾನವನ್ನು ತುಂಬಿಕೊಂಡಿದ್ದಾರೆ. ಕುಪ್ಪಳಿಯಲ್ಲಿ ಶುದ್ಧೀಕರಣಕ್ಕೆ ಯಾರೂ ಹಸುವಿನ ಗಂಜಳವನ್ನು ಬಳಸಲಿಲ್ಲವೆಂಬುದು ನಮ್ಮ ರಾಜ್ಯಕ್ಕೆ ಹೆಮ್ಮೆಯ ಸಂಗತಿ. ತಮ್ಮ ಸ್ವಯಂಸೇವಕರಿಗೆ ಇಂತಹ ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂದು ತಿಳಿಸಲು ಕುವೆಂಪು ಸಂದೇಶ ನೀಡಿದ್ದಾರೆಂದು ಅಮಿತ್ ಶಾ ತಿಳಿದರೆ ಅವರ ಕುಪ್ಪಳಿ ಭೇಟಿಯು ಸಾರ್ಥಕವಾದೀತು. ಕುವೆಂಪು ಊರಿಗೆ ಹೋಗುವ ಮುನ್ನ ಅಮಿತ್ ಭಾಯಿ ಮೈಸೂರಿನಲ್ಲಿ ಸ್ವಯಂಘೋಷಿತ ಮಹಾರಾಜ ಯದುವೀರನನ್ನು ಭೇಟಿಯಾಗಿದ್ದರಂತೆ. ಅವರ ಊಳಿಗಮಾನ್ಯ ಪ್ರಭುತ್ವದಲ್ಲಿನ ವ್ಯಾಮೋಹದ ಸೂಚನೆ ಇದು. ತಥಾಕಥಿತ ಮಹಾರಾಜನನ್ನು ಭೇಟಿ ಮಾಡಿದರೆಂಬ ಕಾರಣಕ್ಕೆ ನಮ್ಮ ರಾಜ್ಯದ ಮತದಾರರು ಅಮಿತ್ ಅವರ ಬಗೆಗಿನ ಒಲವನ್ನು ಇಮ್ಮಡಿಗೊಳಿಸಿ ಕೊಳ್ಳುವುದಿಲ್ಲವೆಂಬ ಭರವಸೆ ತರ್ಕಬದ್ಧವಾಗಿದೆ. ಕುವೆಂಪು ಮತ್ತು ಯದುವೀರನನ್ನು ಪರಿಚಯಿಸಿಕೊಂಡ ಭಾಜಪ ಅಧ್ಯಕ್ಷರು ಈ ಬಾರಿ ಮಾನ್ಯ ದ. ರಾ. ಬೇಂದ್ರೆಯವರ ಮನೆಗೆ ಹೋಗಿ ಧಾರವಾಡದ ಮತದಾರರ ಮೆಚ್ಚುಗೆ ಪಡೆಯಲು ಯತ್ನಿಸಿದ್ದಾರೆ. ಅಮಿತ್ ಶಾ ಅವರ "ಸಾಹಿತ್ಯ ಪ್ರೀತಿ"ಯನ್ನು ಶ್ಲಾಘಿಸುತ್ತಾ ಧಾರವಾಡದ ಮತದಾರರು ಅದೆಲ್ಲಾ ಕೇವಲ ಚುನಾವಣೆಯ ಸಂದರ್ಭದ ಕಳ್ಳಾಟವೆಂದು ತಿಳಿಯದೆ ಹೋಗುವಷ್ಟು ಹುಂಬರೆ? ಏನೇ ಇರಲಿ, ಅಮಿತ್ ಭಾಯಿ ಅವರಿಗೆ ಚುನಾವಣೆಯು ಒಂದು ಶಿಕ್ಷಣ ಕಣವಾಗಿರುವುದು ಸಮಾಧಾನದ ವಿಷಯ. ಹತ್ತಾರು ಸ್ವಾಮಿಗಳನ್ನು ಭೇಟಿಯಾಗಿ ಅಧ್ಯಾತ್ಮದ ಬತ್ತಳಿಕೆಯನ್ನೂ ತುಂಬಿಕೊಂಡಿರಬೇಕು. ಸ್ವಾಮಿ ಗಳಿಗೆಲ್ಲಾ ಅಡ್ಡಬಿದ್ದು ಸೊಂಟದಲ್ಲಿ ನೋವು ಬಂದಿದ್ದರೆ ಭಾಷಣಗಳನ್ನು ಸುರಿಸುವಾಗಿನ ಹಾವಭಾವಗಳು ಸಾಕಷ್ಟು ಮದ್ದು ನೀಡಿರುತ್ತವೆ. ಜೈ ಶ್ರೀರಾಮ್ ಎಂದು ಮಾನ್ಯರು ಅಹಮದಾಬಾದಿಗೆ ಜಿಗಿದರೆ ನಮ್ಮ ರಾಜ್ಯವು ಸ್ವಲ್ಪ ನಿಸೂರಾಗಿರಲು ಸಾಧ್ಯ.

* * *

ಜೈ ಶ್ರೀರಾಮ್ ಎಂದರೆ ನೆನಪಿಗೆ ಬರುತ್ತದೆ: ನಮ್ಮ ಆಕಾಶವಾಣಿಯ ಅಮೃತವರ್ಷಿಣಿಯಲ್ಲಿ 'ಖ್ಯಾತ ವಾಗ್ಮಿ' ಶೆಣೈ ಅವರ ಭುವನದ ಭಾಗ್ಯ ಮುಗಿಯಿತೇನೊ! ಈಚೆಗೆ ಅವರ ಅದ್ಭುತ ಸಂಶೋಧನೆಗಳ ತುಂಬ ಹರಡಿರುವ ಮತಧರ್ಮದ ಪ್ರಚಾರ ಗುಳಿಗೆಗಳು ಬರುತ್ತಿಲ್ಲ. ಅವೈಚಾರಿಕತೆಯ ಸರದಾರ ಡಾ॥ ರಘು ಅವರಿಗೆ ಸ್ವಲ್ಪ ವಿರಾಮ ದೊರೆತಿರಬೇಕು. ಕೆಲವು ದಿನಗಳ ಹಿಂದೆ ಅವರು ಶೆಣೈ ಅವರ ಭಾರತ ದರ್ಶನ ಪ್ರಸ್ತುತಪಡಿಸುವಾಗ ಮುತ್ತಿನಂಥ ಮಾತಾಡಿದರು : ಮರಳು ಮತ್ತು ಮರದಿಂದ ಮಾಡಿದ ಸೇತುವೆಯು ಧನುಷ್ಕೋಡಿಯ ಬಳಿಯೇ ಎಲ್ಲೋ ಇದೆ, ಎಂದು. ಅದೇ ರಾಮಸೇತುವೆ, ಅದರ ಮೇಲೆ ನಡೆದೇ ಶ್ರೀರಾಮಚಂದ್ರನು ಲಂಕೆಗೆ ಹೋದದ್ದು. ಲಂಕೆಯು ಸಮುದ್ರತಟದಲ್ಲೇ ಇದ್ದಿತೇನು? ಅಥವಾ ಸೇತುವೆ ದಾಟಿ ಸ್ವಲ್ಪ ದೂರ ನಡೆದುಹೋಗುವ ಶ್ರಮವೂ ರಾಮನ ಪಾಲಿಗೆ ಬಂದಿದ್ದಿತೆ? ಡಾ॥ ರಘು ತಿಳಿಸಿದರು, ಆ ರಾಮ ಸೇತುವೆಯ ಅಸ್ತಿತ್ವವನ್ನು ಅಮೆರಿಕಾದ ಸೆಟಲೈಟ್ ಖಚಿತಪಡಿಸಿದೆ, ಎಂದು. ಅದೇನು ವಿಚಿತ್ರ, ಈ ಸೇತುವೆಗೂ ಅಮೆರಿಕಾದ ಸೆಟಲೈಟೇ ಬೇಕು, ನಮ್ಮ ಇಸ್ರೋದ ಯಾವುದಾದರೊಂದು ಸೆಟಲೈಟ್‌ಗೆ ಗೋಚರವಾಗಬಾರದಿತ್ತೆ? ಆಕಾಶವಾಣಿಯು ಅನೈತಿಹಾಸಿಕ ಸಂಗತಿಗಳು, ಮೌಢ್ಯದ ವಿತರಣೆ, ಇವಕ್ಕೆ ಪ್ರಸಿದ್ಧವಾಗುವ ಕಾಲದಲ್ಲಿ ನಾವಿದ್ದೇವೆ ! ●




ಆತ್ಮೀಯರೇ ಏಪ್ರಿಲ್ ತಿಂಗಳ ಸಂಚಿಕೆಯಲ್ಲಿ 'ಏಣಗಿ ಬಾಳಪ್ಪ'ನವರ ಜೀವನ ಶೈಲಿ ಮತ್ತು ರಂಗಭೂಮಿಯಲ್ಲಿ ಅವರ ನಟನ ವಿಸ್ತಾರತೆಯನ್ನು ಪ್ರಸ್ತುತ ಪಡಿಸಿದ ಶ್ರೀ ಗಣೇಶ್ ಅಮೀನಗಡ ಅವರಿಗೆ ಧನ್ಯವಾದಗಳು.

*ಯಡಿಯೂರು* — ***ನಂದ***

ಲೆನಿನ್ ಅಂಬೇಡ್ಕರ್ ಪೆರಿಯಾರ್ ಜೊತೆಗೆ ಬುದ್ಧನ ಮುಖಪುಟ ಈ ತಿಂಗಳು ಸ್ವಾರಸ್ಯ ವಿಷಯ. ಉತ್ತಮ ರೀತಿಯ ಸಂಪಾದಕೀಯ. ಕೇಂದ್ರ ಮತ್ತು ರಾಜ್ಯ ಬಜೆಟ್‌ನೋಟ/ಯೂರಿಪಿಡಿಸ್‌ನ ನಾಟಕದಲ್ಲಿನ ಹೆಲೆನ್ ಹಾಗೂ ಮಹಾಕಾವ್ಯದ ಸೀತೆಯ ಪರಿ, ವಧು ಪರೀಕ್ಷೆ ತಯಾರಿಯ ಅವಾಂತರಗಳು, ವೀರರಾಣಿ ಬೆಳವಡಿ ಮಲ್ಲಮ್ಮನ ಪವಾಡ! ಮರೆಯಲಾಗದ ಮಹಾನ್ ಏಣಗಿ ಬಾಳಪ್ಪನವರ ವಿವರ, ಡಾ॥ ಬಿ. ಆರ್. ಅಂಬೇಡ್ಕರ್ ಮತ್ತು ಕಾಲದ ಕರೆ ಇವುಗಳ ಜೊತೆಗೆ ನಾನೊಬ್ಬ ರೈತ ಕವನ ಎಲ್ಲವೂ ಅರ್ಥಪೂರ್ಣವಾಗಿ ಮೂಡಿವೆ.

*ಪಾಂಡವಪುರ* — ***ಕುಣಿಗಲ್ ಜಯಣ್ಣ***

**ದಲಿತರ ಮೇಲೆ ಧಾಳಿ : ಮುಂದುವರೆದ ಆಕ್ರಮಣ**

ದಲಿತ, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮೇಲೆ ನಡೆಯುವ ಅತ್ಯಾಚಾರ ಧಾಳಿ ಮತ್ತು ಆಕ್ರಮಣಕಾರಿ ದೌರ್ಜನ್ಯಗಳನ್ನು ತಡೆಯುವ ನಿಟ್ಟಿನಲ್ಲಿ, ೧೯೮೯ರಲ್ಲಿ ಅಂದಿನ ಕೇಂದ್ರ ಸರ್ಕಾರವು ಕಾನೂನೊಂದನ್ನು ಜಾರಿಗೊಳಿಸಿತು. ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯವು ಈ ಕಾನೂನಿಗೆ ಕೆಲವು ಮಾರ್ಪಾಡುಗಳನ್ನು ಮಾಡಿ, ಕಾನೂನಿನ ದುರ್ಬಳಕೆಯನ್ನು ತಡೆಯಬೇಕೆಂಬ ಕಾರಣವನ್ನು ನೀಡಿ, ತೀರ್ಪನ್ನು ನೀಡಿದೆ.

ಈ ತೀರ್ಪಿನ ವಿರುದ್ಧ ದಲಿತರು ದೇಶಾದ್ಯಂತ, ವಿಶೇಷವಾಗಿ, ಬಿಜೆಪಿ ಸರ್ಕಾರಗಳ ಆಳ್ವಿಕೆಯಿರುವ ಉತ್ತರ ಪ್ರದೇಶ, ಮಧ್ಯಪ್ರದೇಶ ಮತ್ತು ರಾಜಾಸ್ಥಾನಗಳಲ್ಲಿ ಪ್ರಬಲವಾದ ಪ್ರತಿಭಟನೆಯನ್ನು ಮಾಡಿತು. ತತ್ಪರಿಣಾಮವಾಗಿ, ಹತ್ತು ಜನ ಪ್ರಾಣ ತೆತ್ತರು. ಸಾರ್ವಜನಿಕ ಆಸ್ತಿ-ಪಾಸ್ತಿ ವ್ಯಾಪಕವಾಗಿ ನಷ್ಟವಾಯಿತು. ರಾಜಾಸ್ಥಾನದಲ್ಲಿ, ದಲಿತ ಬಿಜೆಪಿ ಶಾಸಕ ಮತ್ತು ದಲಿತ ಮಾಜಿ ಕಾಂಗ್ರೆಸ್ ಪಕ್ಷದ ಶಾಸಕರ ಮನೆಗಳನ್ನು ಸುಟ್ಟು ಹಾಕಲಾಯಿತು. ಪ್ರತಿಭಟನೆಯ ಕಾವು ತೀವ್ರವಾದಾಗ, ಕೇಂದ್ರ ಸರ್ಕಾರ ತೀರ್ಪನ್ನು ಮರುಪರಿಶೀಲಿಸುವಂತೆ, ಸರ್ವೋಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿದೆ.

ಸ್ವಾತಂತ್ರ್ಯ ಪಡೆದ ನಂತರದ ಅವಧಿಯಲ್ಲಿ ದಲಿತರ ಮೇಲಿನ ದೌರ್ಜನ್ಯ ಈ ಮಟ್ಟಕ್ಕೆ ಹಿಂದೆಂದೂ ಏರಿರಲಿಲ್ಲ. ನರೇಂದ್ರ ಮೋದಿ ನೇತೃತ್ವದ ಸರ್ಕಾರದ ಆಳ್ವಿಕೆ ಆರಂಭವಾದಾಗಿಂದ ದಲಿತರ ಮೇಲಿನ ದೌರ್ಜನ್ಯದ ಪ್ರಕರಣಗಳು ಹೆಚ್ಚಾಗಿವೆ. ಹೈದರಾಬಾದ್ ವಿಶ್ವವಿದ್ಯಾಲಯದ ಸಂಶೋಧನಾ ವಿದ್ಯಾರ್ಥಿ ರೋಹಿತ್ ವೇಮುಲ ಆತ್ಮಹತ್ಯೆ, ಗುಜರಾತ್‌ನ ಊನಾದಲ್ಲಿ ದಲಿತರನ್ನು ಥಳಿಸಿದ ಪ್ರಕರಣ, ಇತ್ತೀಚೆಗೆ ನಡೆದ ಲೆನಿನ್, ಅಂಬೇಡ್ಕರ್ ಮತ್ತು ಪೆರಿಯಾರ್ ಮೂರ್ತಿಗಳ ನಾಶ, ಈ ಬಗ್ಗೆ ನರೇಂದ್ರ ಮೋದಿ ಸರ್ಕಾರ ಮೌನ ತಳೆದು, ಪರೋಕ್ಷವಾಗಿ ದಲಿತರ ಮೇಲಿನ ಧಾಳಿಗೆ ಉತ್ತೇಜನ ನೀಡಿದೆ. ರೋಹಿತ್ ವೇಮುಲ ದಲಿತನೇ ಅಲ್ಲ ಎನ್ನಲಾಯಿತು. ಹೈದರಾಬಾದ್ ಮತ್ತು ಜೆ.ಎನ್.ಯು. ವಿಶ್ವವಿದ್ಯಾಲಯದ ಉಪ ಕುಲಪತಿಗಳು ಪ್ರಾಮಾಣಿಕ, ನಿಷ್ಪಕ್ಷಪಾತ ತನಿಖೆ ನಡೆಸುವ ಬದಲು ದೆಹಲಿಯ ತಮ್ಮ ಧಣಿಗಳನ್ನು ಮೆಚ್ಚಿಸಲು ಮುಂದಾದರು.

ದಲಿತರು ಕೇಂದ್ರದ ಮೋದಿ ಸರ್ಕಾರ ಮತ್ತು ರಾಜ್ಯಮಟ್ಟದ ಬಿಜೆಪಿ ಸರ್ಕಾರಗಳ ವಿರುದ್ಧ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ. ಬಿಜೆಪಿ ರಾಷ್ಟ್ರಾಧ್ಯಕ್ಷ ಅಮಿತ್ ಶಾರವರು ತಮ್ಮ ಪಕ್ಷದ ಸರ್ಕಾರವು ದಲಿತರ ಹಿತರಕ್ಷಣೆಗೆ, ಏಳಿಗೆಗಾಗಿ ಕೈಗೊಂಡ ಕ್ರಮಗಳನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ೧೯೯೦ರಲ್ಲಿ




ವಿ.ಪಿ.ಸಿಂಗ್ ಸರ್ಕಾರವು ಪಾರ್ಲಿಮೆಂಟ್ ಭವನದಲ್ಲಿ ಅಂಬೇಡ್ಕರ್ ಭಾವಚಿತ್ರ ಅನಾವರಣಮಾಡಿತು ಮತ್ತು ಅವರಿಗೆ 'ಭಾರತರತ್ನ' ಪ್ರಶಸ್ತಿ ನೀಡಿತು. ಆದರೆ, ಅಮಿತ್‌ಷಾ ಇವುಗಳನ್ನು ಮೋದಿ ಸರ್ಕಾರದ ಸಾಧನೆಗಳೆಂದು ಅಪ್ಪಟ ಸುಳ್ಳನ್ನು ಹೇಳಿದ್ದಾರೆ.

ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ ನಿಯತಕಾಲಿಕದಲ್ಲಿ ಪ್ರಕಟವಾದ ಸಮೀಕ್ಷೆಯ ಪ್ರಕಾರ, ದಾಖಲಾದ ಪ್ರಕರಣಗಳ ಶೇಕಡ ೫೦ಭಾಗದಷ್ಟು ಪ್ರಕರಣಗಳನ್ನು ಪೊಲೀಸ್ ಠಾಣೆಗಳಲ್ಲಿ ಮುಚ್ಚಿಹಾಕಲಾಗುತ್ತಿದೆ. ತನಿಖಾಧಿಕಾರಿಗಳಲ್ಲಿ ಹುದುಗಿರುವ ಜಾತೀಯ ಪಕ್ಷಪಾತ ಅನೇಕ ಪ್ರಕರಣಗಳನ್ನು ದಾರಿ ತಪ್ಪಿಸುತ್ತದೆ. ರಾಷ್ಟ್ರೀಯ ಅಪರಾಧ ಸಂಶೋಧನಾ ವಿಭಾಗದ ಪ್ರಕಾರ ದಾಖಲಾದ ಶೇಕಡ ೭೫ ಪ್ರಕರಣಗಳಲ್ಲಿ ಆರೋಪಿಗಳ ಬಿಡುಗಡೆಯಾಗಿದೆ. ಅಂತೆಯೇ ಪ್ರಕರಣಗಳನ್ನು ಹಿಂಪಡೆಯಲಾಗಿದೆ. ಸಂಸ್ಥೆಯ ವಾರ್ಷಿಕ ವರದಿ ಪ್ರಕಾರ ೨೦೧೬ರಲ್ಲಿ ೪೦,೮೦೧ ಪ್ರಕರಣಗಳು ದಾಖಲಾಗಿವೆ.

ಅಪರಾಧ ತಡೆಗಟ್ಟುವ ಕಾಯಿದೆಯಲ್ಲಿ ಕೆಲವು ಲೋಪ ದೋಷಗಳು ಮತ್ತು ನ್ಯೂನತೆಗಳಿರುವುದು ಸತ್ಯ. ಅಂತೆಯೇ, ಕಾನೂನಿನ ದುರುಪಯೋಗ ಪಡೆದುಕೊಂಡು ಸರ್ಕಾರಿ ಅಧಿಕಾರಿಗಳಿಗೆ ಕಿರುಕುಳ ಕೊಟ್ಟ ಸಂದರ್ಭಗಳೂ ನಡೆದಿರಬಹುದು. ಆದರೆ ಕೆಲವು ಪ್ರಕರಣಗಳನ್ನು ಮುಂದೊಡ್ಡಿ, ಅಪರಾಧ ತಡೆಗಟ್ಟುವ ಕಾನೂನನ್ನೇ ದುರ್ಬಲಗೊಳಿಸುವುದು ಪರಿಶಿಷ್ಟ ಜಾತಿ, ಪಂಗಡಗಳಿಗೆ ಎಸಗುವ ಅನ್ಯಾಯವಾಗುತ್ತದೆ. ಕಾನೂನು ರಚನೆ ಸಂಸತ್ತಿನ ಹೊಣೆಗಾರಿಕೆಯಾಗಿದೆ. ಸರ್ವೋಚ್ಚ ನ್ಯಾಯಾಲಯ ಈ ಕೆಲಸಕ್ಕೆ ಇಳಿಯಬಾರದು. ಸರ್ವೋಚ್ಚ ನ್ಯಾಯಾಲಯದ ಮಾರ್ಗದರ್ಶಿ ಸೂಚನೆಗಳ ದುರುಪಯೋಗ ಕೂಡ ನಡೆಯಬಹುದು. ಮೇಲ್ಜಾತಿಗೆ ಸೇರಿದ ಪೊಲೀಸ್ ಅಧಿಕಾರಿಗಳು, ದೋಷಪೂರಿತ ಪ್ರಾಥಮಿಕ ತನಿಖಾ ವರದಿಗಳನ್ನು ನ್ಯಾಯಾಲಯಗಳಿಗೆ ಸಲ್ಲಿಸಿ ಪ್ರಕರಣಗಳು ವಜಾ ಆಗುವಂತೆ ಮಾಡಬಹುದು.

ಕೇಂದ್ರ ಗೃಹ ಸಚಿವಾಲಯ ತನ್ನ ೨೦೧೭ರ ವಾರ್ಷಿಕ ವರದಿಯಲ್ಲಿ ಅಪರಾಧ ತಡೆಗಟ್ಟುವ ಕಾನೂನನ್ನು ಬಲಪಡಿಸುವ ಅಗತ್ಯವಿದೆಯೆಂದು ಒಪ್ಪಿಕೊಂಡಿದೆ. ಕಾನೂನಿನ ಅನುಷ್ಠಾನ ಕೂಡ ಹೆಚ್ಚು ಪರಿಣಾಮಕಾರಿಯಾಗಿ ಆಗಬೇಕಾಗಿದೆ. ಕಾನೂನಿನ ದುರುಪಯೋಗವನ್ನು ಸಹಿತ ತಡೆಯಬೇಕಾಗಿದೆ.

*(ಸಾದಾರ)*

*ಬೆಂಗಳೂರು* — ***ಶಂಕರನಾರಾಯಣ***

ಮಾನ್ಯ ಸುಭಾಶ್ಚಂದ್ರ ಹೆಗಡೆಯವರು (ಪ್ರಜಾವಾಣಿ ವಾಚಕರ ವಾಣಿ ೧೬.೦೪.೨೦೧೮) ಮತಾಂತರವನ್ನು ತಡೆಗಟ್ಟಬೇಕೆಂಬ ಆಶಯವನ್ನು ವ್ಯಕ್ತಪಡಿಸಲು ಭಗವದ್ಗೀತೆಯ 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ಎಂಬ ಶ್ಲೋಕವನ್ನು ಸ್ಮರಿಸಿದ್ದಾರೆ. ಅಲ್ಲಿ ಸ್ವ-ಧರ್ಮ ಎಂಬುದು ವ್ಯಕ್ತಿಗಳ ಆಯಾ ವರ್ಣಧರ್ಮಗಳನ್ನು ಸೂಚಿಸುತ್ತದೆಯೇ ವಿನಾ ಸಂಕೀರ್ಣಾರ್ಥದ ಹಿಂದು ಧರ್ಮವನ್ನಲ್ಲ. ಗೀತೆಯ ಹಲವು ಅಧ್ಯಾಯಗಳಲ್ಲಿ ಇದನ್ನು ಸ್ಪಷ್ಟಪಡಿಸಲಾಗಿದೆ. ಕಡೆಯ ೧೮ನೆಯ ಅಧ್ಯಾಯದಲ್ಲಿ ಅದನ್ನು ಸ್ವಭಾವನಿಯತ ಕರ್ಮವೆಂದೂ ಕರೆಯಲಾಗಿದೆ (ಶ್ಲೋಕ ೪೭).ಆಯಾ ವರ್ಣಗಳಿಗೆ ನಿಗದಿತವಾದ ಕೆಲಸಗಳನ್ನು ಮಾಡುತ್ತಿದ್ದು ಶ್ರೇಯೋಮಾರ್ಗವನ್ನು ಕಂಡುಕೊಳ್ಳಬೇಕೆಂಬುದು ಗೀತೆಯ ಮೂಲಸ್ರೋತ. ಶಂಕರಾಚಾರ್ಯರು ಈ ಶ್ಲೋಕದ ಮೇಲಿನ ತಮ್ಮ ಭಾಷ್ಯದಲ್ಲಿ ಹೇಳುತ್ತಾರೆ, "ವಿಷದಲ್ಲಿ ಹುಟ್ಟಿರುವ ಕ್ರಿಮಿಗೆ ವಿಷವು ದೋಷಕರವಲ್ಲ; ಅಂತೆಯೇ ಆಯಾ ವರ್ಣಗಳ ನಿಗದಿತ ಕರ್ತವ್ಯಗಳು ಆ ವರ್ಣಗಳಿಗೆ ಬಾಧೆಯಾಗಲಾರವು" (ಯಥಾ ವಿಷಜಾತಸ್ಯ ಇವ ಕೃಮೇಃ ವಿಷಂ ನ ದೋಷಕರಂ ತಥಾ ಸ್ವಭಾವನಿಯತಂ ಕರ್ಮ ಕುರ್ವನ್ನ ಆಪ್ನೋತಿ ಕಿಲ್ಬಿಷಂ). ಇದಕ್ಕೆ ಮುಂಚಿನ ೪೪ನೆಯ ಶ್ಲೋಕದಲ್ಲಿ "ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ" (ಬೇರೆಯವರ ಸೇವೆ ಮಾಡುವುದು ಶೂದ್ರನ ಕರ್ಮ) ಎಂದು ಹೇಳಲಾಗಿದೆ. ಮಾನ್ಯ ಶ್ರೀ. ಹೆಗಡೆಯವರು ಮತಾಂತರದ ವಿರೋಧ ಮಾಡಲು ಅಡ್ಡಿಯಿಲ್ಲ, ಆದರೆ ಅದಕ್ಕೆ ಗೀತೆಯ ವಾಕ್ಯವನ್ನು ಆಶ್ರಯಿಸುವುದು ಬೇಡ; ಏಕೆಂದರೆ ಗೀತೆಯು 'ಸ್ವಧರ್ಮ'ವೆಂದರೆ ವರ್ಣಧರ್ಮವೆಂದಷ್ಟೇ ಬಗೆಯುತ್ತದೆ. ಶೂದ್ರನಿಗೆ ಒಂದು ತುಂಡು ಭೂಮಿಯ ಆಸ್ತಿಯೂ ಕೂಡದೆಂಬುದು ನಮ್ಮ ಧರ್ಮಶಾಸ್ತ್ರಗಳ ಮತ್ತು ಗೀತೆಯ ಆಣತಿ. ಅವರ ಸ್ವಭಾವ ಧರ್ಮಕ್ಕೆ ಅದು ವಿರುದ್ಧವಾದದ್ದು. ಆದರೆ ಅದು ಬೇರೆಯ ಮಾತು. ಮತಾಂತರಕ್ಕೂ ಗೀತೆಯ ಸ್ವಧರ್ಮಕ್ಕೂ ಸಂಬಂಧವಿಲ್ಲವೆಂಬುದಷ್ಟೇ ಇಲ್ಲಿ ಪ್ರಸ್ತುತ.

*ಬೆಂಗಳೂರು* — ***ಜಿ. ರಾಮಕೃಷ್ಣ***

# ನೀತಿಸಂಹಿತೆ ಎಂಬ ಪ್ರಹಸನ

**ಡಾ॥ ಬಿ. ಆರ್. ಮಂಜುನಾಥ**



**ಮೊ**ನ್ನೆ ಬೆಂಗಳೂರಿನ ಎಸ್. ಆರ್. ಕಾಲೋನಿಯಲ್ಲಿ ಪ್ರಗತಿಪರ ಸಂಘಟನೆಗಳು, ಬುದ್ಧಿಜೀವಿಗಳು ದೇಶದಲ್ಲಿ ಹೆಚ್ಚುತ್ತಿರುವ ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ಖಂಡಿಸಿ ಪ್ರತಿಭಟನೆಯನ್ನು ಹಮ್ಮಿಕೊಂಡಿದ್ದರು. ಹೀಗೆ ಕಾರ್ಯಕ್ರಮ ಹಮ್ಮಿಕೊಂಡಿದ್ದೇವೆ ಎಂದು ಪೊಲೀಸರಿಗೆ ತಿಳಿಸಿದರೆ ಅವರು ನೀವು ಇದಕ್ಕೆ ಚುನಾವಣಾ ಆಯೋಗದಿಂದ ಅನುಮತಿ ತೆಗೆದುಕೊಳ್ಳಬೇಕು ಎಂದು ಜಾರಿಕೊಂಡರು. ಆಯೋಗದವರು 'ನಾವು ಅನುಮತಿ ಕೊಡುವುದಿಲ್ಲ' ಎಂದು ಠೇಂಕಾರದ ಮಾತುಗಳನ್ನಾಡಿದರು. ಇದಾದ ಮೂರು ದಿನಗಳ ನಂತರ ಇನ್ನಷ್ಟು ಪ್ರಗತಿಪರ ಸಂಘಟನೆಗಳು ಮೈಸೂರು ಬ್ಯಾಂಕ್ ವೃತ್ತದಲ್ಲಿ ಕಠುವಾ ಮತ್ತು ಉನ್ನಾವ್ ದೌರ್ಜನ್ಯಗಳ ವಿರುದ್ಧವೇ ಪ್ರತಿಭಟನೆ ಹಮ್ಮಿಕೊಂಡಿದ್ದವು. ಮತ್ತೆ ಪೊಲೀಸರು ಮತ್ತು ಚುನಾವಣಾ ಆಯೋಗದವರದ್ದು ಅದೇ ರಾಗ, ಅದೇ ವರಾತ. ಎರಡು ಕಡೆಯೂ ಇವರ ಗೊಡ್ಡು ಬೆದರಿಕೆಗಳಿಗೆ ಮಣಿಯದೆ ಹೋರಾಟಗಾರರು ಪ್ರತಿಭಟಿಸಿದರೆಂಬುದು ಖುಷಿಯ ಸಂಗತಿ! 'ಹೊಳೆ ನೀರಿಗೆ ದೊಣೆ ನಾಯಕನ ಅಪ್ಪಣೆಯೇ?'

ಜನತಂತ್ರದಲ್ಲಿ ಪ್ರತಿಭಟನೆಗೆ ಅನುಮತಿ ಬೇಕು ಎಂಬುದೇ ತಪ್ಪುಕಲ್ಪನೆ. ಯಾವ ಸರ್ಕಾರವನ್ನು ವಿರೋಧಿಸಿ ಪ್ರತಿಭಟಿಸಬೇಕೋ ಅವರದೇ ಕೃಪೆಯಿಂದ ಹೋರಾಟ ನಡೆಯಬೇಕು ಎಂದರೆ ಅದಕ್ಕೆ ಅರ್ಥವಿದೆಯೇ. ಒಂದು ನಿರಂಕುಶ ಸರ್ಕಾರ ತನ್ನ ವಿರುದ್ಧದ ಎಲ್ಲ ದನಿಗಳನ್ನೂ ಹತ್ತಿಕ್ಕಲು ಹೋರಾಟಗಳಿಗೆ ಒಂದಲ್ಲ ಒಂದು ಕುಂಟುನೆಪ ನೀಡಿ ಅನುಮತಿ ನಿರಾಕರಿಸುತ್ತಾ ಹೋದರೆ ಆಗ ಜನತಂತ್ರದ ಭವಿಷ್ಯ ಎಷ್ಟು ಕರಾಳವಾಗುತ್ತದೆ. ನಿಜ ಹೋರಾಟಗಾರರು ಸಾಧ್ಯವಿದ್ದರೆ ಹೋರಾಟದ ಸ್ಥಳ, ಮೆರವಣಿಗೆ ಮಾರ್ಗ ಇವುಗಳನ್ನು ಪೊಲೀಸರಿಗೆ ತಿಳಿಸಬಹುದು. ಅದು ಪೊಲೀಸರು ಮಾಡಿಕೊಳ್ಳುವ ಬಂದೋಬಸ್ತ್, ಸಂಚಾರ ನಿಯಂತ್ರಣ ಇವುಗಳಿಗೆ ಅನುಕೂಲವಾಗಲಿ ಎಂಬ ಸೌಜನ್ಯ, ಸಾರ್ವಜನಿಕರಿಗೆ ಸಾಧ್ಯವಾದಷ್ಟು ತೊಂದರೆಯಾಗದಿರಲಿ ಎಂಬ ಎಚ್ಚರ. ಆದರೆ 'ಅನುಮತಿ' ಕೊಡಬಹುದು ಅಥವಾ ಇಲ್ಲ ಎಂಬಂಥ ಧೋರಣೆ ಜನತಂತ್ರದ ಲಕ್ಷಣವಲ್ಲ. ಜಗತ್ತಿನ ಯಾವ ಮಹಾನ್ ಹೋರಾಟಕ್ಕೂ, ಬಲಿದಾನಕ್ಕೂ 'ಪೊಲೀಸರ ಪರ್ಮಿಶನ್' ಇರಲಿಲ್ಲ! ಸೆಕ್ಷನ್ ೧೪೪ ಅಥವಾ ೩೫ ಮುಂತಾದ ಕಾಯ್ದೆಗಳಡಿ ನಿಷೇಧಾಜ್ಞೆ ಇಲ್ಲದಿದ್ದರೆ ಪೊಲೀಸರು ಯಾವ ಪ್ರತಿಭಟನೆಯನ್ನೂ ಅಡ್ಡಿಪಡಿಸುವಂತಿಲ್ಲ.

**ಆಯೋಗದ ಅಧಿಕ ಪ್ರಸಂಗ**

ಇನ್ನು ಚುನಾವಣಾ ಆಯೋಗ ಈ ಅಧಿಕಾರವನ್ನು ಕೈಗೆತ್ತಿಕೊಳ್ಳುವುದು ಹೇಗೆ? ಅವರಿಗೆ ಆ ಅಧಿಕಾರವನ್ನು ಕೊಟ್ಟವರು ಯಾರು? ಚುನಾವಣಾ ಸಭೆ, ಮೆರವಣಿಗೆ ಇವುಗಳ ಕುರಿತು ಆಯೋಗ ಯಾವುದಾದರೂ ಜನತಾಂತ್ರಿಕವಾಗಿ ಒಪ್ಪಿತವಾದ, ತರ್ಕಬದ್ಧವಾದ ವಿಧಿ–ನಿಷೇಧಗಳನ್ನು ರೂಪಿಸಲಿ. ಆದರೆ ಇಡೀ ಸಮಾಜ ಕುದಿಯುತ್ತಿರುವಂಥ ವಿಷಯದ ಬಗ್ಗೆ ಸಾರ್ವಜನಿಕರು ದನಿ ಎತ್ತಬಾರದು ಎಂದು ಹೇಳಲು ಆಯೋಗ ಯಾರು? ಅದೇ ಸಮಯದಲ್ಲಿ ಬೆಂಗಳೂರಿನಾದ್ಯಂತ ರಾಮನವಮಿ, ಮಾರಮ್ಮ–ಅಣ್ಣಮ್ಮ ಉತ್ಸವಗಳು, ಶನಿಮಹಾತ್ಮನ ನಾಟಕಗಳು ನಡೆಯುತ್ತಿರುತ್ತವೆ. ಇದಕ್ಕೆ ಸಂಬಂಧಪಟ್ಟಂತೆ ಯಾರೂ ಆಯೋಗವನ್ನು 'ಕ್ಯಾರೆ' ಎಂದು ಮಾತನಾಡಿಸುವುದಿಲ್ಲ. ಅಲ್ಲೆಲ್ಲಾ ಪುಡಾರಿಗಳು ಗುಪ್ತವಾಗಿ ಖರ್ಚುಮಾಡುತ್ತಾ, ಮತ ಬೇಟೆಯಾಡುತ್ತಾ, ಪೋಸು ಕೊಡುತ್ತಾ ಓಡಾಡಿಕೊಂಡಿರುತ್ತಾರೆ. ಇದನ್ನೆಲ್ಲಾ ನಿಷೇಧಿಸುವ ತಾಖತ್ತು, ಗೈರತ್ತು ಆಯೋಗಕ್ಕಿದೆಯೇ?

**ಶೇಷನ್ ಎಂಬ 'ಅವತಾರ ಪುರುಷ'**

ಚುನಾವಣಾ ಆಯೋಗದ ಎಲ್ಲ ಅಧಿಕಪ್ರಸಂಗ, ತರಲೆ ಆರಂಭವಾದದ್ದು ಟಿ. ಎನ್. ಶೇಷನ್‌ರವರು ಚುನಾವಣಾ ಆಯೋಗದ ಮುಖ್ಯಸ್ಥರಾಗಿ ವಿಜೃಂಭಿಸಿದ ನಂತರ. ದೇಶದ ಮುಖ್ಯ ಚುನಾವಣಾ ಅಧಿಕಾರಿಯಾಗುವವರೆಗೂ ಯಾರಿಗೂ ಗೊತ್ತಿಲ್ಲದಿದ್ದ ಈ ವ್ಯಕ್ತಿ ದೇಶದ ಚುನಾವಣಾ ಕಮಿಷನರ್ ಆದಕೂಡಲೇ ದುರ್ಬಲ ಸರ್ಕಾರ ಅಸ್ತಿತ್ವದಲ್ಲಿದ್ದ ಹೊತ್ತಿನಲ್ಲಿ ವಿಪರೀತ ಆರ್ಭಟ ಮಾಡಿದರು. ಇದ್ದಕ್ಕಿದ್ದಂತೆ ಅವರು ಬೀಸಿದ ಚಾಟಿಗೆ ಬೆಚ್ಚಿಬಿದ್ದು ಕುಳಿತ ಎಲ್ಲಾ ಅಧಿಕಾರಿಗಳೂ ತಮ್ಮ ಕೆಳಗಿನ ಅಧಿಕಾರಿಗಳಿಗೆ ಒದೆ ಕೊಡಲಾರಂಭಿಸಿದರು. ಈ ಕೆಳಗಿನವರುಗಳು ಸ್ಥಿಮಿತ ತಪ್ಪಿದವರಂತೆ ಅಭ್ಯರ್ಥಿಗಳಿಗೆ, ಕಾರ್ಯಕರ್ತರುಗಳಿಗೆ ಚಿಟುಗು ಮುಳ್ಳಾಡಿಸಲು ಶುರು ಮಾಡಿದರು. ಅಲ್ಲಿಯವರೆಗೂ ಎಗ್ಗುಸಿಗ್ಗಿಲ್ಲದೆ ಬೀದಿಬೀದಿಗಳಲ್ಲಿ ಮೆರವಣಿಗೆ

ಒಂದು ನಿರಂಕುಶ ಸರ್ಕಾರ ತನ್ನ ವಿರುದ್ಧದ ಎಲ್ಲ ದನಿಗಳನ್ನೂ ಹತ್ತಿಕ್ಕಲು ಹೋರಾಟಗಳಿಗೆ ಒಂದಲ್ಲ ಒಂದು ಕುಂಟುನೆಪ ನೀಡಿ ಅನುಮತಿ ನಿರಾಕರಿಸುತ್ತಾ ಹೋದರೆ ಆಗ ಜನತಂತ್ರದ ಭವಿಷ್ಯ ಎಷ್ಟು ಕರಾಳವಾಗುತ್ತದೆ. ನಿಜ ಹೋರಾಟಗಾರರು ಸಾಧ್ಯವಿದ್ದರೆ ಹೋರಾಟದ ಸ್ಥಳ, ಮೆರವಣಿಗೆ ಮಾರ್ಗ ಇವುಗಳನ್ನು ಪೊಲೀಸರಿಗೆ ತಿಳಿಸಬಹುದು. ಅದು ಪೊಲೀಸರು ಮಾಡಿಕೊಳ್ಳುವ ಬಂದೋಬಸ್ತ್, ಸಂಚಾರ ನಿಯಂತ್ರಣ ಇವುಗಳಿಗೆ ಅನುಕೂಲವಾಗಲಿ ಎಂಬ ಸೌಜನ್ಯ, ಸಾರ್ವಜನಿಕರಿಗೆ ಸಾಧ್ಯವಾದಷ್ಟು ತೊಂದರೆಯಾಗದಿರಲಿ ಎಂಬ ಎಚ್ಚರ. ಆದರೆ 'ಅನುಮತಿ' ಕೊಡಬಹುದು ಅಥವಾ ಇಲ್ಲ ಎಂಬಂಥ ಧೋರಣೆ ಜನತಂತ್ರದ ಲಕ್ಷಣವಲ್ಲ. ಜಗತ್ತಿನ ಯಾವ ಮಹಾನ್ ಹೋರಾಟಕ್ಕೂ, ಬಲಿದಾನಕ್ಕೂ 'ಪೊಲೀಸರ ಪರ್ಮಿಶನ್' ಇರಲಿಲ್ಲ! ಸೆಕ್ಷನ್ ೧೪೪ ಅಥವಾ ೩೫ ಮುಂತಾದ ಕಾಯ್ದೆಗಳಡಿ ನಿಷೇಧಾಜ್ಞೆ ಇಲ್ಲದಿದ್ದರೆ ಪೊಲೀಸರು ಯಾವ ಪ್ರತಿಭಟನೆಯನ್ನೂ ಅಡ್ಡಿಪಡಿಸುವಂತಿಲ್ಲ.

ಮಾಡುತ್ತಾ, ಕುಡಿದು-ಕುಣಿದು ಕುಪ್ಪಳಿಸುತ್ತಿದ್ದ ರಾಜಕೀಯ ಗೂಂಡಾಗಳು ಈ ಹೊಸ ದಿಗ್ಬಂಧನದಿಂದ ಕೆಲಕಾಲ ಕಂಗೆಟ್ಟರು. ರಸ್ತೆಗಳಲ್ಲಿ ರಾರಾಜಿಸುತ್ತಿದ್ದ ಪೋಸ್ಟರ್‌ಗಳು, ಗೋಡೆಬರಹಗಳು ಕಾಣದಾದವು. ಇಡೀ ದಿನ ಅರಚುತ್ತಿದ್ದ ಮೈಕುಗಳು ನಿಯಂತ್ರಣಕ್ಕೆ ಬಂದವು. ಅರಿಶಿಣ, ಕುಂಕುಮ, ಬಾಗಿನ, ಎಂಬ ಹೆಸರುಗಳಲ್ಲಿ ಶೇಷನ್ ಮೂಗಿನಡಿಯೇ ಸಹಸ್ರಾರು ರೂಪಾಯಿಗಳ ವಿತರಣೆ ನಡೆಯಿತು. ಇದು ಎಲ್ಲರಿಗೂ ತಿಳಿದ ವಿಷಯ. ಆದರೆ ಶೇಷನ್ ಒಳಗೊಂಡಂತೆ ಇದನ್ನು ಯಾರೂ ಬಹಿರಂಗವಾಗಿ ಮಾತನಾಡಲಿಲ್ಲ. ಅದೇ ಶೇಷನ್‌ರ ಮಹಾ ಬುದ್ಧಿವಂತಿಕೆ!

## ಹೀಗಿರೋಣವೇ?!

ಎಷ್ಟೇ ಬೆಳೆದರೂ ಮಗುವಿನ ಮನಸ್ಸಿನಂತೆ ಸ್ಲೇಟಾಗಿರೋಣ
ಬಗೆ ಬಗೆ ತಿನಿಸುಗಳ ನಿರ್ವಿಕಾರ ಬಡಿಸಿಕೊಳ್ಳುವ ಪ್ಲೇಟಾಗಿರೋಣ
ಒಳ್ಳೆಯ ಸಂಗತಿಗಳು ಒಳಬರಲೆಂದು ತೆರೆದ ಗೇಟಾಗಿರೋಣ
ಬೆರೆಯದ ಮನದ ಮಂಜುಗೆಡ್ಡೆಗಳ ಕರಗಿಸುವಷ್ಟು ಹಾಟಾಗಿರೋಣ

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪

ಸರಿ, ನಮ್ಮ ಮಾಧ್ಯಮಗಳು ಅತ್ಯಂತ ಭ್ರಷ್ಟವಾಗಿದ್ದ, ಜನರಿಗೆ ಕಿರುಕುಳ ನೀಡುತ್ತಿದ್ದ ದೊಡ್ಡ ದೊಡ್ಡ ಪಕ್ಷಗಳ ಚುನಾವಣಾ ಪ್ರಚಾರದ ಭರಾಟೆಯಿಂದ ಮುಕ್ತಿ ಸಿಕ್ಕಿತು ಎಂದು ಶೇಷನ್‌ರನ್ನು ಕೊಂಡಾಡಲಾರಂಭಿಸಿದವು. ಚುನಾವಣೆಗಳು 'ಅತ್ಯಂತ ಶುಚಿಯಾಗಿ ನಡೆಯುತ್ತಿವೆ' ಎಂದು ಕೀರ್ತನೆ ಮಾಡಲಾರಂಭಿಸಿದವು. ಇಂದಿಗೂ ವಿಕಿಪಿಡಿಯಾದಲ್ಲಿ ಶೇಷನ್‌ರನ್ನು ಭಾರತದ ಚುನಾವಣೆಯನ್ನು ಶುಚಿಗೊಳಿಸಿದ ಕೀರ್ತಿಶಾಲಿ ಎಂದೇ ಬಣ್ಣಿಸಲಾಗಿದೆ. ಮಾಧ್ಯಮದ ಪ್ರಚಾರಕ್ಕೆ ಎಂದಿನಂತೆ ಬಲಿಯಾದ ನಮ್ಮ ಮೇಲ್ವರ್ಗ, ಮಧ್ಯಮವರ್ಗದ ಜನ ಶೇಷನ್‌ರನ್ನು ಕೊಳೆತ ವ್ಯವಸ್ಥೆಯನ್ನು ಹೋಗಲಾಡಿಸಲು ಹೋರಾಡುತ್ತಿರುವ ಏಕಾಂಗಿ ವೀರ, 'ಹೊಳೆಯುವ ಕವಚ ಧರಿಸಿ ಬಂದ ವೀರಾಗ್ರಣಿ' ಎಂದೇ ಭಾವಿಸಿದರು. ಆದರೆ ವಾಸ್ತವವೇನು? ಒಂದಿಷ್ಟು ಪೋಸ್ಟರ್ ಕಡಿಮೆಯಾಯಿತು. ಮೈಕುಗಳ ಅಬ್ಬರ ತಗ್ಗಿತು. ಆದರೆ ಹಣ ಮತ್ತು ಹೆಂಡದ ಪ್ರಭಾವ ನಿಂತಿತೇ? ಕಳೆದ ಇಪ್ಪತ್ತೈದು ವರ್ಷದಲ್ಲಿ ಯಾವುದೂ ಕಡಿಮೆಯಾಗಿಲ್ಲ. ಬದಲಿಗೆ ನಾಲ್ಕು ಪಟ್ಟು ಹೆಚ್ಚಾಗಿದೆ.

**ಜನತಂತ್ರಕ್ಕೆ ಬಿತ್ತು ಕೊಡಲಿ ಪೆಟ್ಟು**

ಚುನಾವಣಾ ಆಯೋಗದ ನಿರಂಕುಶಾಧಿಕಾರ ಜಾರಿಯಾದೊಡನೆ ಹುಳಗಳಂತಿದ್ದ ಅಧಿಕಾರಿಗಳು ಏಳು ಹೆಡೆ ಸರ್ಪಗಳಂತೆ ಭುಸುಗುಟ್ಟಲಾರಂಭಿಸಿದರು. ಆದರೆ ದೊಡ್ಡ ಪಕ್ಷಗಳ ಬೂರ್ಷ್ವಾ ರಾಜಕಾರಣಿಗಳಿಗೆ ಗೊತ್ತು ಇವು ಕಚ್ಚುವ ಹಾವುಗಳಲ್ಲ ಎಂದು. ಕುತ್ತಿಗೆಯಲ್ಲಿ, ಮುಂಗೈಯಲ್ಲಿ ಸೇದುವ ಹಗ್ಗಗಳ ಗಾತ್ರದ ಬಂಗಾರದ ಚೈನು, ಕಪ್ಪಗಳನ್ನು ಧರಿಸಿದ 'ವೈಟ್‌ಅಂಡ್ ವೈಟ್' ರಾಜಕಾರಣಿಗಳು ಬೆರಳಾಡಿಸಿದರೆ ಸಾಕು, ಮಂತ್ರದಂಡ ನೋಡಿದ ನಾಗರಗಳಂತೆ ಈ ಹಾವುಗಳು ವಾಪಸ್ ಬಿಲಕ್ಕೆ ಹೋಗುತ್ತವೆ. ಚುನಾವಣೆ ಮುಗಿದರೆ ವರ್ಗಾವಣೆಗಾಗಿ, ಆಯಕಟ್ಟಿನ ಜಾಗಗಳಿಗಾಗಿ ಅಧಿಕಾರಸ್ಥರ ಎದುರು ಹಲ್ಲು ಕಿರಿಯುತ್ತಾ ನಿಲ್ಲುವ ಅಧಿಕಾರಿಗಳಿಗೆ ಚುನಾವಣಾ ಸಮಯದಲ್ಲಿ ದಂಡಿಸುವ ಪರಾಕ್ರಮ ಬರುವುದು ಸಾಧ್ಯವೇ?

ಆದರೆ ಇದರ ನಿಜವಾದ ಏಟು ಬೀಳುವುದು ಸಣ್ಣ ಪಕ್ಷಗಳಿಗೆ, ಬಡವರಾದ, ಅಧಿಕಾರ ಕಾಣದ ಎಡವಾದಿಗಳಿಗೆ, ಸ್ವತಂತ್ರ ಅಭ್ಯರ್ಥಿಗಳಿಗೆ. ಅವರಿಗೆ ಬೀಳುವ ಏಟು ನಿಜಕ್ಕೂ ಜನತೆಗೆ ಬೀಳುವ ಕೊಡಲಿ ಏಟು. ರಾಜಕೀಯವನ್ನು ಅರಿಯಲೆತ್ನಿಸುವ ಜನತೆಯ ಹಕ್ಕಿಗೆ ಬೀಳುವ ಕೊಡಲಿ ಏಟು. ಪ್ರಚಾರಕ್ಕೆ ಕಡಿವಾಣ ಬೀಳುತ್ತಿದ್ದಂತೆ ಚುನಾವಣಾ ರಂಗದಿಂದ ನೈಜ ರಾಜಕೀಯ ಚರ್ಚೆ ಮಾಯವಾಗುತ್ತದೆ. ಎಲ್ಲ ಪ್ರಚಾರವೂ ಮಾಧ್ಯಮಗಳ ಮೂಲಕ ಮಾತ್ರ ನಡೆಯುತ್ತದೆ. 'ಪೇಯ್ಡ್ ನ್ಯೂಸ್' ಹಾವಳಿ ವಿಪರೀತವಾಗುತ್ತದೆ.

**ಶುರುವಾಯಿತು ಪ್ರಹಸನ**

ಅಧಿಕಾರಿಗಳ ಅಧಿಕ ಪ್ರಸಂಗ ಚುನಾವಣಾ ಘೋಷಣೆಯ ದಿನದಿಂದ ಶುರುವಾಗುತ್ತದೆ. ಆ ಸುಮುಹೂರ್ತ ಪ್ರಕಟವಾಗುತ್ತಿದ್ದಂತೆ ಯಾರೂ ರಾಜಕೀಯ ಸಭೆ ನಡೆಸಬಾರದಂತೆ! ಬೀದಿ ಬದಿ ಸಭೆಗೆ ನಿಯಂತ್ರಣ ಬಂತು, ಆದರೆ ಟಿ.ವಿ. ಚಾನೆಲ್‌ಗಳಲ್ಲಿ ನಡೆಯುವ ಹುಚ್ಚಾ ಹುರುಳಾ ಮಾತುಗಳಿಗೆ ಕಡಿವಾಣ ಯಾರು ಹಾಕಿದರು? ಕಡಿ, ಬಡಿ, ಕೊಲ್ಲು ಎಂಬ ಘೋಷಣೆಯಿಂದ ಹಿಡಿದು, ಕೋಮುವಾದಿ – ಜಾತಿವಾದಿ ಉದ್ರೇಕಕಾರಿ ಮಾತುಗಳು, ಅಸಹ್ಯವಾದ ವೈಯಕ್ತಿಕ ಟೀಕೆಗಳು ಎಗ್ಗುಸಿಗ್ಗಿಲ್ಲದೇ ನಡೆಯುತ್ತಿವೆ. ಬಡ ಪಕ್ಷಗಳ ಪ್ರಚಾರಕ್ಕೆ ಕತ್ತರಿ, ದೊಡ್ಡವರ ಅಪಪ್ರಲಾಪಕ್ಕೆ ಬೆಂಬಲ. ಆಯೋಗದ ಜಾಣಕುರುಡು-ಜಾಣಕಿವುಡಿಗೆ ಇದು ಉತ್ತಮ ನಿದರ್ಶನ.

ಒಂದು ಕರಪತ್ರ ಮುದ್ರಿಸಿ ಹಂಚಲು ಎಷ್ಟು ನಿರ್ಬಂಧ ಗೊತ್ತೇ! ಮುದ್ರಿಸುವ ಪ್ರೆಸ್ಸಿಗೆ ಲೈಸೆನ್ಸ್ ಇರಬೇಕು. ಅದರ ಪ್ರತಿಯನ್ನು ದೊರಕಿಸಿಕೊಳ್ಳಬೇಕು. ಪ್ರಿಂಟರ್ ಒಂದು ಘೋಷಣಾ ಪತ್ರಕ್ಕೆ ಸಹಿ ಹಾಕಬೇಕು. ಪ್ರಕಟಿಸುವ ನಾವೂ ಸಹ ಡಿಕ್ಲರೇಶನ್ ಕೊಡಬೇಕು. ಮುದ್ರಿತ ಕರಪತ್ರದ ಮೂರು ಪ್ರತಿಗಳನ್ನು ಆಯೋಗಕ್ಕೆ, ಜಿಲ್ಲಾಧಿಕಾರಿಗೆ ಸಲ್ಲಿಸಬೇಕು ಇತ್ಯಾದಿ ಇತ್ಯಾದಿ. ಈ ತರಲೆಯನ್ನು ನೋಡಿ ಅನೇಕ ಮುದ್ರಕರು, 'ಸ್ವಾಮಿ ನಾವು ಚುನಾವಣಾ ಸಂಬಂಧಿ ಮುದ್ರಣ ಮಾಡುವುದಿಲ್ಲ' ಎಂದು ನನಗೆ ಮುಖಕ್ಕೆ ಹೊಡೆದಂತೆ ಹೇಳಿದ ಅನುಭವವಿದೆ. ಒಬ್ಬ ಅಧಿಕಾರಿಯಂತೂ ನೀವು ಮುದ್ರಿಸುವ ಕರಪತ್ರದ ಪಠ್ಯವನ್ನು ನನಗೆ ತೋರಿಸಬೇಕು ಎಂದು ಹಠ ಹಿಡಿದಿದ್ದ. ಆತನಿಗೆ 'ನೀನು ಸೆನ್ಸಾರ್ ಬೋರ್ಡ್ ಅಲ್ಲ ಕಣಯ್ಯ. ಅದರಲ್ಲಿ ತಪ್ಪು ಮಾಡಿದ್ದರೆ ನನ್ನ ಮೇಲೆ ನೀವು ಕೇಸ್ ಹಾಕಬಹುದು ಅಷ್ಟೇ' ಎಂದು ಅರ್ಥ ಮಾಡಿಸಲು ಹರಸಾಹಸ ಮಾಡಬೇಕಾಯಿತು.

ಇನ್ನು ಬ್ಯಾನರ್ ಕಟ್ಟುವ ಬವಣೆ. ಒಂದು ಬ್ಯಾನರ್ ಬರೆಸಲು ಮುನ್ನೂರು ರೂ. ಆದರೆ ಅದನ್ನು ಕಟ್ಟಲು ಅನುಮತಿಗೆ ಚದರ ಅಡಿಗೆ ಇಷ್ಟು ಎಂಬ ಲೆಕ್ಕದಲ್ಲಿ ಐನೂರು ಆಗುತ್ತಿತ್ತು. ನಾವೆಲ್ಲಾ ಬ್ಯಾನರ್ ಕಟ್ಟುವುದನ್ನು ಬಿಟ್ಟೆವು. ದೊಡ್ಡ ಪಕ್ಷದ ಸ್ನೇಹಿತರೊಬ್ಬರು ನೂರಾರು ಬ್ಯಾನರ್ ಕಟ್ಟಿದರು. ಬಹಳ ವೆಚ್ಚವಾಯಿತೇ ಎಂದು ಕೇಳಿದೆ. ಅವರು "ಐವತ್ತು ಬ್ಯಾನರ್‌ಗೆ ಅನುಮತಿ ತಗೊಂಡೆ, ಉಳಿದದ್ದಕ್ಕೆ ಬಾಳೆಕಂದನ್ನು ಕಪ್ಪು ಇಂಕ್‌ನಲ್ಲಿ ಅದ್ದಿ ಒತ್ತಿದ್ದೇನೆ, ಅದು ಬಿಬಿಎಂಪಿ ಮುದ್ರೆಯಂತೆಯೇ ಇದೆ. ಅಧಿಕಾರಿ ನನಗೆ ಭಾಳಾ ಖಾಸಾ ದೋಸ್ತ್, ತೊಂದರೆ ಇಲ್ಲ" ಎಂದು ನಕ್ಕರು!

ನೀವು ಪ್ರಚಾರಕ್ಕೆ ಆಟೋ ಓಡಿಸಲು ಪ್ರಯತ್ನಿಸಿದರೆ ಸಹ ಇದೇ ರಗಳೆ. ಆಟೋದವನ ಆರ್.ಸಿ. ಬುಕ್ ಬೇಕು, ಡಿ.ಎಲ್. ಬೇಕು. ಎಲ್ಲವನ್ನೂ ಕೊಟ್ಟು ಅನುಮತಿ ತೆಗೆದುಕೊಂಡು ಆದಮೇಲೆ ನಿಮ್ಮ ಆಟೋ ಆ ದಿನ ಪಂಕ್ಚರ್ ಆಯಿತೆಂದರೆ ಮತ್ತೆ ಕಂಬ ಸುತ್ತುವ ಕೆಲಸ ಶುರು. ಇನ್ನು ಸಾರ್ವಜನಿಕ ಸಭೆ, ಅದರ ಗೋಳಂತೂ ಹೇಳತೀರದು. ರಸ್ತೆಬದಿಯಲ್ಲಿ ಅಥವಾ ಮನೆಯ ಮಾಡಿನ ಮೇಲಿನಿಂದ ಸಭೆ ನಡೆಸುವ ಹಾಗಿಲ್ಲ. ಹುಡುಗರು ಆಡುವ ಮೈದಾನ ಇತ್ಯಾದಿಗಳಲ್ಲೂ ಅನುಮತಿ ಸುಲಭವಲ್ಲ. ಕಡೆಗೆ ಯಾವುದಾದರೂ ಲಕ್ಷ ಜನ ಸೇರುವ ಮೈದಾನದಲ್ಲಿ ಅನುಮತಿ ಕೊಡುತ್ತಾರಂತೆ. ಅಲ್ಲಿಗೆ ಲಾರಿಗಳಲ್ಲಿ ಜನರನ್ನು ಕರೆದುಕೊಂಡು ಹೋಗುವವರು ಮಾತ್ರ ಸಭೆ ಮಾಡಲು ಸಾಧ್ಯ!




ಆದರೆ ಈ ಎಲ್ಲ ನಿಯಮಗಳೂ ಕ್ಷೇತ್ರದಿಂದ ಕ್ಷೇತ್ರಕ್ಕೆ ಅಧಿಕಾರಿಯಿಂದ ಅಧಿಕಾರಿಗೆ ಬದಲಾಗುವುದೂ ಉಂಟು. ಒಬ್ಬಾತ ನೀವು ರಸ್ತೆಗೆ ಬಾಡಿಗೆ ಕಟ್ಟಿದರೆ ಅನುಮತಿ ಕೊಡುತ್ತೇವೆ ಎಂದ! ಕಟ್ಟಲು ಹೋದರೆ ಅಡಿಗಿಷ್ಟು ಎಂದು ಮನೆ ಮಾರಿಸುವ ದಲ್ಲಾಳಿಯಂತೆ ಮಾತನಾಡಿ, ೧೦ ಅಡಿ ೧೫ ಅಡಿ ವೇದಿಕೆಗೆ ಎರಡೂವರೆ ಸಾವಿರ ಬಾಡಿಗೆ

ಕೇಳಿದ! ಇನ್ನೊಂದು ಕಡೆ ಅವನು ಹೇಳಿದ್ದಕ್ಕಿಂತ ವೇದಿಕೆ ಒಂದು ಅಡಿ ಹೆಚ್ಚು ಉದ್ದ ಇತ್ತು ಎಂದು ಕೇಸು ಹಾಕಿ ಎರಡು ಸಾವಿರದಂಡ ವಸೂಲಿ ಮಾಡಿದ್ದೂ ಉಂಟು. ನಿಮ್ಮ ಮನೆಯ ಕಾರು ಸ್ಕೂಟರ್‌ನಲ್ಲೂ ನೀವು ಪ್ರಚಾರಕ್ಕೆ ಹೋಗುವಂತಿಲ್ಲ, ಬಾವುಟ ಹಾಕುವಂತಿಲ್ಲ, ಅದಕ್ಕೆಲ್ಲಾ ಅನುಮತಿ ಇರಬೇಕು. ಒಮ್ಮೆ ಒಂದು ಸಾರ್ವಜನಿಕ ಸಭೆಗೆ ಬಂದ ಅಧಿಕಾರಿಗಳು, 'ನೀವು ಶಬ್ದ ಮಾಲಿನ್ಯ ಮಾಡುತ್ತಿದ್ದೀರೋ ಇಲ್ಲವೋ ಎಂಬುದನ್ನು ಮೀಟರ್ ಹಾಕಿ ಪರೀಕ್ಷೆ ಮಾಡುತ್ತೇವೆ ಆಮೇಲೆ ಸಭೆ ಮಾಡಿ' ಎಂದರು. ದೇಶದಾದ್ಯಂತ ಒಬ್ಬ ದೊಡ್ಡ ತುಘಲಕ್ ಕೆಳಗೆ ಸಾವಿರಾರು ತುಘಲಕ್‌ಗಳು ಪಿತಪಿತನೆ ಹರಿದಾಡುತ್ತಿರುವಂತೆ ಅನಿಸಿದರೆ ಜನತಂತ್ರ ಉಸಿರಾಡುವುದು ಹೇಗೆ?

**ಅಸಂಬದ್ಧತೆಯ ಉತ್ತುಂಗ**

ಇನ್ನು ಚುನಾವಣೆ ಲೆಕ್ಕ ಒಪ್ಪಿಸುವುದಂತೂ ಅತ್ಯಂತ ಕೆಟ್ಟ ತರಲೆ ವ್ಯವಹಾರ. ಶೇಷನ್‌ರ ಕಾಲದಲ್ಲಿ ದಿನಾ ಲೆಕ್ಕ ಒಪ್ಪಿಸಿ ಎಂದರು. ಒಪ್ಪಿಸಲು ಹೋದರೆ ಅಧಿಕಾರಿಗಳೇ ಪತ್ತೆ ಇರುತ್ತಿರಲಿಲ್ಲ. ಸಾರ್ವಜನಿಕ ಸಭೆಯೊಂದನ್ನು ಸಂಘಟಿಸಿ ನಾನು ಲೆಕ್ಕ ಒಪ್ಪಿಸಲು ಹೋಗಿದ್ದೆ. ಅವನ 'ಕೊಟೇಶನ್' ಪ್ರಕಾರ ೨೫ ವರ್ಷಗಳ ಹಿಂದೆ ಒಂದು ಪ್ಲಾಸ್ಟಿಕ್ ಕುರ್ಚಿಗೆ ೧೦ ರೂ. ಬಾಡಿಗೆ ಎಂದು ನಿಗದಿ ಮಾಡಿದ್ದ, ಮೈಕ್‌ಗೆ ಇಪ್ಪತ್ತು ಸಾವಿರ ಎಂದು ಅವನ ಲೆಕ್ಕ. 'ಮಾರಾಯ ನಮ್ಮ ಇಡೀ ಸಭೆ ಮೂರು ಸಾವಿರ ರೂಪಾಯಿಯಲ್ಲಿ ಆಗಿದೆ' ಎಂದರೆ ಆ ಭೂಪತಿ ಒಪ್ಪಲಿಲ್ಲ. ಅವನ ಪ್ರಕಾರ ನಮ್ಮ ಸಭೆಯ ವೆಚ್ಚ ಅರವತ್ತು ಸಾವಿರ ರೂ. ಅಷ್ಟು ಆಗಿಲ್ಲಪ್ಪ ಎಂದರೆ, ಬರೆಯಿರಿ ನಿಮ್ಮ ಗಂಟೇನು ಹೋಗುತ್ತದೆ? ಎಂದ. ನಾನು, 'ಸುಳ್ಳು ಬರೆಯುವುದಿಲ್ಲ. ಇದೆಲ್ಲಾ ನಿಮ್ಮ ಡಿಪಾರ್ಟ್‌ಮೆಂಟಿನ ಕಳ್ಳ ಲೆಕ್ಕ. ಈ ದರದಲ್ಲಿ ನಿಮ್ಮ ನಗರ ಪಾಲಿಕೆ ಅಧಿಕಾರಿಗಳು ನಿಮ್ಮ ಕಾರ್ಯಕ್ರಮದಲ್ಲಿ ಚೆನ್ನಾಗಿ ಹಣ ನುಂಗುತ್ತಿರಬೇಕು. ಅದನ್ನೇ ಪಟ್ಟಿ ಮಾಡಿದ್ದಾರೆ. ಏನು ಮಾಡಿದರೂ ಕಳ್ಳ ಲೆಕ್ಕ ಬರೆಯುವುದಿಲ್ಲ. ಏನು ಮಾಡಿಕೊಳ್ಳುತ್ತೀಯೋ ಮಾಡಿಕೋ' ಎಂದೆ. ಅವನು ಅಷ್ಟಕ್ಕೇ ಸುಮ್ಮನಾಗಲಿಲ್ಲ. ಚುನಾವಣಾ ದಿನ ಕಾರ್ಯಕರ್ತರಿಗೆ ಕೊಟ್ಟ ತಿಂಡಿ ಲೆಕ್ಕ, ಕೂಲಿ ನಮೂದಿಸಿ ಎಂದ. ನಮ್ಮವರು ಕೂಲಿ ಕಾರ್ಯಕರ್ತರಲ್ಲ, ಅವರೇ ಪಕ್ಷಕ್ಕೆ ಹಣ ಕೊಡುವಂಥವರು ಎಂದರೆ ಆ ಬೃಹಸ್ಪತಿಯ ತಲೆಗೆ ಅದೆಲ್ಲಾ ಹೋಗುವುದೇ ಇಲ್ಲ! ನಾವು ಕಡೆಗೆ "ತತ್ವ, ಆದರ್ಶ, ತ್ಯಾಗ ಇವುಗಳಿಗೆ ನಿಮ್ಮ ಇಲಾಖೆಯಲ್ಲಿ ಅರ್ಥವಿಲ್ಲ. ಒಟ್ಟಿನಲ್ಲಿ ನಾವಂತೂ ಈ ಅಪಮಾನಕರ ಕಾಲಂ ಅನ್ನು ಭರ್ತಿ ಮಾಡುವುದಿಲ್ಲ. ಬೇಕಿದ್ದರೆ ನೋಟೀಸ್ ಕೊಡು. ಉತ್ತರ ಕೊಡುತ್ತೇವೆ" ಎಂದು ಬೈದು ಬಂದೆವು.

**ಪಕ್ಷಪಾತ**

ಆದರೆ ಚುನಾವಣೆ ದಿನ ಹತ್ತಿರವಾದಂತೆ ದೊಡ್ಡ ಪಕ್ಷಗಳವರು ಎಲ್ಲ ಕಾನೂನು–ಕಟ್ಟಳೆಗಳನ್ನು ಮುರಿದರೂ ಕೇಳುವವರಿರಲಿಲ್ಲ. ಇಂದೂ ನಡೆಯುತ್ತಿರುವುದು ಅದೇ.



## ನಮನ

ಕನ್ನಡ ನಾಡಿನ ಶ್ರೇಷ್ಠ ವಿದ್ವಾಂಸರೆಂದು ಖ್ಯಾತಿಗಳಿಸಿದ್ದ ಹಿರಿಯ ಸಾಹಿತಿ ಪ್ರೊ॥ ಪ್ರಭುಶಂಕರ ಅವರು ತಮ್ಮ ೮೯ನೇ ವಯಸ್ಸಿನಲ್ಲಿ ಕಳೆದ ೮-೪-೨೦೧೮ರಂದು ನಿಧನ ಹೊಂದಿದ್ದಾರೆ. ಅವರು ವಯೋ ಸಹಜ ಆರೋಗ್ಯ ಸಮಸ್ಯೆಗಳಿಂದ ಬಳಲುತ್ತಿದ್ದು ಯಾವುದೇ ಚಿಕಿತ್ಸೆಗೂ ದೇಹ ಸ್ಪಂದಿಸಲಿಲ್ಲ. ಇವರು ಕುವೆಂಪು ಅವರ ಶಿಷ್ಯರಾಗಿದ್ದು ಅಂದಿನ ಹಲವು ಶ್ರೇಷ್ಠ ಸಾಹಿತಿಗಳೊಂದಿಗೆ ಒಡನಾಟ ಹೊಂದಿದ್ದರು. ಮೈಸೂರು ವಿ.ವಿ.ಯ ಪ್ರಸಾರಾಂಗ ನಿರ್ದೇಶಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕ ಮುಂತಾಗಿ ಹಲವು ಹುದ್ದೆಗಳನ್ನು ನಿರ್ವಹಿಸಿದ್ದರು. ನಾಡಿನ ಕೆಲವು ಪ್ರಶಸ್ತಿಗಳಿಗೂ ಭಾಜನರಾಗಿದ್ದ ಪ್ರಭುಶಂಕರ ಅತ್ಯುತ್ತಮ ಲೇಖಕ ಹಾಗೂ ವಾಗ್ಮಿ. ನವಕರ್ನಾಟಕ ಪ್ರಕಾಶನ ಹಾಗೂ ಹೊಸತು ಪತ್ರಿಕೆ ಬಳಗ ಇವರ ನಿಧನಕ್ಕೆ ಸಂತಾಪ ವ್ಯಕ್ತಪಡಿಸುತ್ತದೆ.

ಅನೇಕ ಅಭ್ಯರ್ಥಿಗಳು ಆಗಲೇ ಮತದಾರರಿಗೆ ತಮ್ಮ ಖರ್ಚಿನಲ್ಲಿ ತೀರ್ಥಯಾತ್ರೆ ಮಾಡಿಸಿ ಮುಗಿಸಿದ್ದಾರೆ. ಕಡೆಯ ದಿನ 'ತೀರ್ಥಸ್ನಾನ' ಮಾಡಿಸಿ, 'ದಾನ' ಕೊಡುತ್ತಾರೆ. ಹೆಂಡದ ಗಂಗೆ ಗಲ್ಲಿಗಲ್ಲಿಗಳಲ್ಲೂ ಹರಿದು ಶುದ್ಧ ಮಾಡುತ್ತಾಳೆ. ಈಗಾಗಲೇ ಅನೇಕ ಮನೆಗಳಿಗೆ ಕುಕ್ಕರ್, ಸೀರೆ, ಪಂಚೆ, ಮೂಗುಬೊಟ್ಟು ತಲುಪಿದೆ. ಚುನಾವಣೆಯ ಪಾವಿತ್ರ್ಯತೆ, ಶುಚಿಯಾದ ಮತದಾನ ಇವೆಲ್ಲಾ ಬೊಗಳೆ ಅಷ್ಟೇ. ಚುನಾವಣಾ ಆಯೋಗದ ಕಟ್ಟಳೆಯನ್ನು ಮುರಿದಿದ್ದಾರೆ ಎಂದು ದೊಡ್ಡ ದೊಡ್ಡ ಪಕ್ಷಗಳಿಗೆ ಲಕ್ಷಾಂತರ ರೂಪಾಯಿ ಜುಲ್ಮಾನೆ ವಿಧಿಸಿದ ಸುದ್ದಿ ಏನೋ ಪತ್ರಿಕೆಯಲ್ಲಿ ಬಂದಿರುತ್ತದೆ. ಆದರೆ ಅಂತಿಮವಾಗಿ ಯಾರಿಗೂ ದಂಡ ವಿಧಿಸಿರುವುದಿಲ್ಲ, ಶಿಕ್ಷೆಯಾಗಿರುವುದಿಲ್ಲ. ಅಷ್ಟೇಕೆ ಚುನಾವಣಾ ಸಮಯದಲ್ಲಿ ಹಿಡಿದ ಕೋಟಿ ಕೋಟಿ ಅಕ್ರಮ ಹಣ ಸಹ ಕಡೆಗೆ ಏನಾಗುತ್ತದೋ ಗೊತ್ತಾಗುವುದೇ ಇಲ್ಲ.

**ಬರಬೇಕಾಗಿದೆ – ನೈಜ ಜನತಾಂತ್ರಿಕ ಹಬ್ಬ**

ನಿಜವಾಗಲೂ ಚುನಾವಣಾ ಆಯೋಗದ ಕಾರ್ಯವೈಖರಿಯಿಂದಾಗಿ ಒಂದು ಜನತಾಂತ್ರಿಕ ಹಬ್ಬವಾಗಬೇಕಾಗಿದ್ದ ಚುನಾವಣೆಯ ಜೀವಂತಿಕೆಗೆ ಧಕ್ಕೆ ಬಂದಿದೆ. ನಮ್ಮ ತಲೆಮಾರಿನವರು ೧೯೭೭ರಿಂದ ಸಕ್ರಿಯವಾಗಿ ಚುನಾವಣೆಗಳಲ್ಲಿ ಕೆಲಸ ಮಾಡಿದವರು. ಆಗ ಶಕ್‌ದರ್ ಆಯೋಗದ ಮುಖ್ಯಸ್ಥರು. ತುರ್ತುಪರಿಸ್ಥಿತಿ ಇದ್ದಾಗ ಅವರು ನಡೆಸಿದ ಚುನಾವಣೆಯಲ್ಲೂ ಇಂಥ ಅಂಕುಶ ಪ್ರಯೋಗ ಇರಲಿಲ್ಲ. ಇಂದಿರಾ ಗಾಂಧಿ ೧೯೭೮ರಲ್ಲಿ ಚಿಕ್ಕಮಗಳೂರು ಉಪಚುನಾವಣೆಗೆ ಸ್ಪರ್ಧಿಸಿದಾಗಲೂ ಯುವಕರು ತಾವೇ ಬರೆದ ಭಿತ್ತಿಪತ್ರಗಳನ್ನು ಆಕೆಯ ವಿರುದ್ಧ ಅಂಟಿಸಿದರು. ಅದಕ್ಕೆ ಯಾವ ಅನುಮತಿಯೂ ಬೇಕಿರಲಿಲ್ಲ. ಚುನಾವಣೆ ಒಂದು ಗಂಭೀರ ಆಂದೋಲನದಂತಿತ್ತು. ಬೇಕಾದಷ್ಟು ಬೀದಿನಾಟಕ ಆಡಿದ್ದೆವು. ಇಂದು ಚುನಾವಣೆ ಬಗ್ಗೆ ನಾಟಕ ಆಡಲು ನಾಟಕದ ಸ್ಕ್ರಿಪ್ಟ್ ಕೊಟ್ಟು ಕಬ್ಬನ್ ಪಾರ್ಕಿನ ಕಛೇರಿಯಲ್ಲಿ ಅನುಮತಿ ಕೇಳಬೇಕಾದ ಕಾಲ ಬಂದಿದೆ. ಒಟ್ಟಿನಲ್ಲಿ ನೈಜ ಹೋರಾಟ ನಡೆಸುವ ಪಕ್ಷಗಳಿಗೆ, ಸ್ವತಂತ್ರ ಅಭ್ಯರ್ಥಿಗಳಿಗೆ ಎಲ್ಲಾ ರೀತಿಯ ಪ್ರಚಾರ ಸ್ವಾತಂತ್ರ್ಯದ ಹಕ್ಕು ಮೊಟಕಾಗಿದೆ. ಚುನಾವಣಾ ಆಯೋಗ ಸಂವಿಧಾನದತ್ತ ಹಕ್ಕುಗಳನ್ನು ಕತ್ತರಿಸುವ ಧಾರ್ಷ್ಟ್ಯವನ್ನು ತೋರಿಸುತ್ತಿದೆ. ಆದರೆ ದೊಡ್ಡ ಬಂಡವಾಳಶಾಹಿ ಪಕ್ಷಗಳು, ಜನರಿಗೆ ಮುಖ ತೋರಿಸಲು ಧೈರ್ಯ ಇಲ್ಲದವರು, ಹೇಳಲಿಕ್ಕೆ ವಿಷಯ ಇಲ್ಲದವರು ಕೋಟ್ಯಂತರ ಹಣ ವೆಚ್ಚಮಾಡಿ, ಟಿ.ವಿ.ಯಲ್ಲಿ ಮಾತ್ರ ಕಾಣಿಸಿಕೊಂಡು ಚುನಾವಣೆ ಗೆಲ್ಲುತ್ತಿದ್ದಾರೆ.

ಇದಕ್ಕಿಂತ ದೊಡ್ಡ ಜನತಂತ್ರದ ಅಣಕ ಇನ್ನೊಂದಿಲ್ಲ !

**ಡಾ॥ ಬಿ. ಆರ್. ಮಂಜುನಾಥ**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ, ಎನ್. ಆರ್. ಕಾಲೋನಿ ಹತ್ತಿರ
ಬೆಂಗಳೂರು – ೫೬೦ ೦೫೦



## ಸಿರಿಯಾದ ದುರಂತಕ್ಕೆ ಕೊನೆ ಎಂದು?

**ಒಂ**ದು ಕಾಲದಲ್ಲಿ ಪುರಾತನ ನಾಗರಿಕತೆಗೆ ಹೆಸರುವಾಸಿಯಾಗಿದ್ದ ಪಶ್ಚಿಮ ಏಶಿಯದ ಪ್ರಮುಖ ರಾಷ್ಟ್ರ ಸಿರಿಯ ಈಗ ಸ್ಮಶಾನ ಸದೃಶ. ಯುದ್ಧದಿಂದ ಜಂಜಾಟಕ್ಕೆ ಸಿಲುಕಿರುವ ಈ ದೇಶ ಸರ್ವನಾಶದ ಅಂಚಿನಲ್ಲಿದೆ. ಏಳು ವರ್ಷ ಕಳೆದು ಎಂಟನೇ ವರ್ಷಕ್ಕೆ ಕಾಲಿರಿಸಿರುವ ಈ ಯುದ್ಧದಿಂದಾಗಿ ನೂರಾರು ಸಹಸ್ರ ಸಿರಿಯನ್ ನಾಗರಿಕರು ಅಸು ನೀಗಿದ್ದಾರೆ. ಲಕ್ಷಾಂತರ ಮಂದಿ ನಿರಾಶ್ರಿತರಾಗಿ ಅಲೆಮಾರಿಗಳಾಗಿದ್ದಾರೆ. ಕಠಿಣವಾದ ಆರ್ಥಿಕ ದಿಗ್ಬಂಧನ, ಅಂತರ್ಯುದ್ಧ, ಅಮೆರಿಕದ ಬಾಂಬು ದಾಳಿ ಇವುಗಳಿಂದ ತತ್ತರಿಸುತ್ತಿರುವ ಈ ದೇಶ ಚೇತರಿಸಿಕೊಳ್ಳುವುದು ದುಸ್ತರ. ಸಿರಿಯಾದ ನಗರಗಳು, ಪಟ್ಟಣಗಳು ಹಾಳು ಸುರಿಯುತ್ತಿವೆ. ಸಿರಿಯ – ಇರಾಕ್ ಗಡಿಯಲ್ಲಿ ಇಸ್ಲಾಮಿಕ್ ರಾಜ್ಯ ಸ್ಥಾಪನೆಯ ಉಗ್ರರ ವಶದಲ್ಲಿದ್ದ ಪ್ರದೇಶಗಳು ಮುಕ್ತಗೊಂಡಿದ್ದರೂ ಉಗ್ರರ ಉಪಟಳ ಮಾತ್ರ ಮುಂದುವರಿದಿದೆ. ಏಳು ವರ್ಷಗಳ ಹಿಂದೆ ಮಾರ್ಚ್ ೧೫, ೨೦೧೧ರಂದು ರಾಜಕೀಯ ಸುಧಾರಣೆಗಳಿಗಾಗಿ ಜನರಿಂದ ಪ್ರತಿಭಟನೆ ಪ್ರಾರಂಭವಾಯಿತು. ಅದು ಅಸ್ಸಾದ್ ಆಡಳಿತೆಯ ವಿರುದ್ಧವಾದ ಪ್ರತಿಭಟನೆಯಾಗಿತ್ತು. ಪೊಲೀಸರಿಂದ ಗೋಲಿಬಾರು ಆಗಿ, ಕೆಲವರ ಬಂಧನವಾದದ್ದೇ ಕಾರಣವಾಗಿ ಅಂತರ್ಯುದ್ಧದ ಪರಿಸ್ಥಿತಿ ಉದ್ಭವಿಸಿತು. ಇದನ್ನೇ ನೆಪವಾಗಿರಿಸಿಕೊಂಡು ಅಸ್ಸಾದ್ ಆಡಳಿತವನ್ನು ಅಂತ್ಯಗೊಳಿಸಲು, ತನಗೆ ಬೇಕಾದ ಸರಕಾರವನ್ನು ಗದ್ದುಗೆಗೇರಿಸಲು ಅಮೆರಿಕ ಮಧ್ಯಪ್ರವೇಶಿಸಿತು. ಅಸ್ಸಾದ್ ಬೆಂಬಲಕ್ಕೆ ರಷ್ಯ ನಿಂತಿತು. ಇರಾಕ್‌ನಲ್ಲಿ ಸದ್ದಾಮ್ ಹುಸೇನ್ ಪತನ, ಅರಬ್ ದೇಶಗಳಲ್ಲಿ ಸರ್ವಾಧಿಕಾರದ ವಿರುದ್ಧ ಎದ್ದ ಪ್ರತಿಭಟನೆಯ ಬೆನ್ನಲ್ಲೇ ಸಿರಿಯಾದಲ್ಲಿ ಕೂಡ ಪರಿಸ್ಥಿತಿ ಉಲ್ಬಣಿಸಿದ್ದು.

ಈ ಮಧ್ಯೆ ಸಿರಿಯ – ಇರಾಕ್ ಗಡಿಯಲ್ಲಿ 'ಐಸಿಸ್' ಉಗ್ರರ ಹಾವಳಿ ಸಾಕಷ್ಟು ಅನಾಹುತವನ್ನುಂಟುಮಾಡಿತು. ಸಿರಿಯ, ಇರಾನ್ ಎರಡೂ ದೇಶಗಳ ಮೇಲೆ ಅಮೆರಿಕರ ಕೆಂಗಣ್ಣು, ಅಮೆರಿಕಾಗೆ ಅಪಥ್ಯವಾಗಿರುವ ದೇಶಗಳು ಇವು, ಉಳಿದವೆಲ್ಲ ಹೆಚ್ಚು ಕಡಿಮೆ ಅಮೆರಿಕದ ಪರವಾಗಿವೆ ಎನ್ನಬೇಕು. ಈಚೆಗೆ ಅಧ್ಯಕ್ಷ ಟ್ರಂಪ್ ಅಮೆರಿಕದಿಂದ ಸೇನೆಯನ್ನು ಹಿಂತೆಗೆದುಕೊಳ್ಳುವ ಇಂಗಿತ ವ್ಯಕ್ತಪಡಿಸಿದ್ದರು. ಆದರೆ ಅಷ್ಟರಲ್ಲೇ ಸಿರಿಯಾದಲ್ಲಿ ರಾಸಾಯನಿಕ ಅಸ್ತ್ರ ಪ್ರಯೋಗದಿಂದ ಅವಘಡ ಸಂಭವಿಸಿ ೪೯ ನಾಗರಿಕರು ಹತರಾದ ಸುದ್ದಿ ಬಂತು. ಅಧ್ಯಕ್ಷ ಟ್ರಂಪ್ ರಷ್ಯ ಮತ್ತು ಸಿರಿಯಾ ಸರಕಾರವೇ ಇದಕ್ಕೆ ಹೊಣೆ ಎಂದು ಆಪಾದಿಸಿದ್ದಾರೆ. ಕ್ಷಿಪಣಿದಾಳಿಯನ್ನು ನಡೆಸಿದ್ದಾರೆ. ಹಾಗಾಗಿ ಸದ್ಯಕ್ಕಂತೂ ಅಮೆರಿಕ ಕಾಲ್ತೆಗೆಯುವ ಸಂಭವ ಇಲ್ಲ. ಯುದ್ಧವೂ ಮುಂದುವರಿಯುತ್ತದೆ.

ಒಂದು ರೀತಿಯಲ್ಲಿ ಸಿರಿಯಾದ ದುರಂತ ಇಸ್ರೇಲಿನ ಹುಟ್ಟಿನೊಂದಿಗೆ ಪ್ರಾರಂಭವಾಯಿತು ಎನ್ನಬಹುದು. ೧೯೬೭ರಲ್ಲಿ ಇಸ್ರೇಲಿನೊಂದಿಗೆ ಜರುಗಿದ ಅರಬ್ ಯುದ್ಧದಲ್ಲಿ ಸೋಲನ್ನಪ್ಪಿದ ಸಿರಿಯ ಗೋಲನ್ ಹೈಟ್ಸ್ ಪ್ರದೇಶವನ್ನು ಕಳೆದುಕೊಂಡಿತು. ಟರ್ಕಿಯ ಗಡಿಯಲ್ಲಿ ತಕರಾರು ಯಾವತ್ತೂ ಇದ್ದದ್ದೆ. ಇರಾಕ್ – ಸಿರಿಯಾಗಳಿಂದ ನೂರಾರು ಸಾವಿರ ಮಂದಿ ಭಾರತಕ್ಕೆ ಹಿಂದಿರುಗಿದ್ದಾರೆ. ಇವರೆಲ್ಲ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿದ್ದವರು. ಹಾಗಿದ್ದರೂ, ಈಚೆಗೆ ೩೯ ಮಂದಿ ಭಾರತೀಯ ನಾಗರಿಕರು 'ಐಸಿಸ್' ಉಗ್ರರ ದಾಳಿಯಿಂದ ಹತರಾಗಿದ್ದ ಸುದ್ದಿ ಹೊರಬಂತು ಮೂರು ತಿಂಗಳ ನಂತರ. ಮೋದಿ ಸರಕಾರ ಮಾತ್ರ ಇದುವರೆಗೆ ಅವರು ಬದುಕುಳಿದಿದ್ದಾರೆ ಎಂದೇ ಹೇಳಿಕೊಂಡು ಬಂದಿತ್ತು. ಇದೊಂದು ರಾಜತಾಂತ್ರಿಕ ವೈಫಲ್ಯ. ಮೃತರ ಕುಟುಂಬಗಳ ಆಕ್ರಂದನ ಹೃದಯ ವಿದ್ರಾವಕವಾಗಿತ್ತು. ಮಡಿದವರಲ್ಲಿ ಹೆಚ್ಚಿನವರು ಪಂಜಾಬ್ ಪ್ರಾಂತದವರು, ಸದ್ಯಕ್ಕಂತೂ ಸಿರಿಯಾದ ಪರಿಸ್ಥಿತಿ ಬದಲಾಗುವಂತೆ ಕಾಣುತ್ತಿಲ್ಲ. 'ಶೀತಯುದ್ಧದ' ವಾತಾವರಣ ಸೃಷ್ಟಿಯಾಗಿರುವುದರಿಂದ ಅಂತೂ ನರಕಯಾತನೆ ಸಿರಿಯಾದ ಜನತೆಗೆ ತಪ್ಪಲಿಲ್ಲ.

## ರಾಜತಾಂತ್ರಿಕ ಮತ್ತು ವಾಣಿಜ್ಯ ಸಮರ

**ಎ**ರಡನೇ ಮಹಾಯುದ್ಧದ ನಂತರ ಪ್ರಾರಂಭವಾದ 'ಶೀತಯುದ್ಧ' ಅಂತ್ಯಗೊಂಡು ಕಾಲು ಶತಮಾನದ ಮೇಲೆ ಅದು ಪುನರಾವರ್ತನೆಯಾಗುತ್ತಿದೆಯೇ ಎಂಬ ಅನುಮಾನ ದಿನೇ ದಿನೇ ಹೆಚ್ಚುತ್ತಿದೆ, ಅಂತರರಾಷ್ಟ್ರೀಯ ವಿದ್ಯಮಾನಗಳನ್ನು ಗಮನಿಸಿದಾಗ. ಎಪ್ಪತ್ತರ ದಶಕದಲ್ಲಿ ಅನುಸರಿಸಲಾದ ಉದಾರವಾದ, ಆರ್ಥಿಕ ಪುನರ್ ಸಂಘಟನೆ, ಮುಕ್ತಮಾರುಕಟ್ಟೆ, ಮೊದಲಾದ ನೀತಿಗಳು ಕಳೆಗುಂದುತ್ತಿವೆ ಎನ್ನುವ ಸಂದೇಹ ಉಂಟಾಗುತ್ತಿದೆ. ಅಮೆರಿಕ ಮತ್ತು ಯೂರೋಪಿನ ರಾಷ್ಟ್ರಗಳು (ನ್ಯಾಟೋ ಕೂಟಕ್ಕೆ ಸೇರಿದವು) ಒಂದು ಕಡೆಯಾದರೆ, ರಷ್ಯ – ಚೀಣ ಇನ್ನೊಂದೆಡೆಯಾಗಿ ಹಳೆಯ ವೈರತ್ವ ಮರುಕಳಿಸುತ್ತಿದೆ.

ರಾಜತಾಂತ್ರಿಕ ಕ್ಷೇತ್ರದಲ್ಲಿ ರಾಯಭಾರಿ ಕಚೇರಿಯ ಸಿಬ್ಬಂದಿಯನ್ನು ಗೂಢಚರ್ಯೆ ಅಪಾದನೆಯ ಮೇಲೆ ಹೊರಹಾಕುವ ಹಳೆಯ ಚಾಳಿ ಎರಡೂ ಕಡೆ ಪ್ರಾರಂಭವಾಗಿದೆ. ಸದ್ಯದಲ್ಲಿ ಅದು ರಷ್ಯಾಕ್ಕೆ ಮಾತ್ರ ಸೀಮಿತವಾಗಿದೆ. ರಷ್ಯಾದಲ್ಲಿ ಪುಟಿನ್, ಚೀನಾದಲ್ಲಿ ಕ್ಸಿ ಖಾಯಂ ಆಗಿ ಪ್ರತಿಷ್ಠಾಪನೆಯಾಗುತ್ತಿದ್ದಂತೆಯೇ ಪರಸ್ಪರ ಆರೋಪ ಪ್ರತ್ಯಾರೋಪಗಳು ಪ್ರಾರಂಭವಾಗಿವೆ. ಟ್ರಂಪ್ ಆಯ್ಕೆಯ ವಿಚಾರದಲ್ಲಿ ರಷ್ಯದ ಕೈವಾಡ ಇತ್ತು ಎಂಬ ಆರೋಪ ಈಗ ಸವಕಲು ನಾಣ್ಯ. ಗೂಢಚರ್ಯೆ ಆರೋಪದ ಮೇಲೆ ಪಶ್ಚಿಮ ಯೂರೋಪಿನಿಂದ ಸುಮಾರು ೬೦ ಮಂದಿ ರಾಜತಾಂತ್ರಿಕ ವರ್ಗದವರನ್ನು ಸ್ವದೇಶಕ್ಕೆ ರವಾನಿಸಲಾಗಿದೆ. ಅಮೆರಿಕದಲ್ಲಿದ್ದ ರಾಯಭಾರಿ ಕಚೇರಿಯನ್ನು ಮುಚ್ಚಲಾಗಿದೆ ಹಾಗೆಯೇ ಸಿಬ್ಬಂದಿಯನ್ನು ಹೊರಗಟ್ಟಲಾಗಿದೆ. ಇದೇನೂ ಹೊಸದಲ್ಲ. ಆದರೂ ಈ ಬೆಳವಣಿಗೆಗಳು ಅಹಿತಕರ ಅಂತರರಾಷ್ಟ್ರೀಯ ವಿದ್ಯಮಾನಗಳಲ್ಲಿ ಪ್ರತೀಕಾರವಾಗಿ ಇಂಥದೇ ಕ್ರಮವನ್ನು ರಷ್ಯ ಕೂಡ ತೆಗೆದುಕೊಂಡಿದೆ.

ಅದೇ ರೀತಿಯಲ್ಲಿ ಅಮೆರಿಕದ ಅಧ್ಯಕ್ಷ ಟ್ರಂಪ್ ಪ್ರಾರಂಭಿಸಿರುವ ವಾಣಿಜ್ಯ ಸಮರವೂ ಅಹಿತಕರ. ಅಧಿಕಾರ ವಹಿಸಿಕೊಂಡ ನಂತರ ಟ್ರಂಪ್ ನಡೆದುಕೊಳ್ಳುತ್ತಿರುವ ರೀತಿ, ಅನಿಶ್ಚಿತತೆಯ ವಾತಾವರಣವನ್ನು ಸೃಷ್ಟಿಸಿದೆ ಪ್ರಪಂಚದಲ್ಲಿ. ಅಮೆರಿಕ ಆರ್ಥಿಕವಾಗಿ, ಸೈನಿಕವಾಗಿ ಪ್ರಬಲ ರಾಷ್ಟ್ರವಾಗಿರುವುದು ಗಮನಿಸಬೇಕಾದ ಸಂಗತಿ. 'ಅಮೆರಿಕ ಮೊದಲು' ಎಂಬ ನೀತಿ ಅನುಸರಿಸುತ್ತಿರುವ ಟ್ರಂಪ್ ಹೊಯ್ದಾಟದ ನಿಲುವುಗಳು ದಿಗ್ಭ್ರಮೆ ಉಂಟುಮಾಡುತ್ತವೆ ಅನೇಕ ವೇಳೆ. ಪರಿಸರ ಕುರಿತ ಒಪ್ಪಂದದಿಂದ ಹಿಂದೆ ಸರಿದ ಅಮೆರಿಕದ ಅಧ್ಯಕ್ಷ ಟ್ರಂಪ್ ಇದೀಗ 'ವರ್ಲ್ಡ್ ಟ್ರೇಡ್ ಆರ್ಗನೈಸೇಷನ್' (ವಿಶ್ವವಾಣಿಜ್ಯ ಸಂಸ್ಥೆ)ನಿಂದ ಹೊರಬರುವ ಸೂಚನೆ ನೀಡಿದ್ದಾರೆ. ಸರಕುಗಳ ರವಾನೆ ಮೇಲೆ ಸುಂಕ ವಿಧಿಸುವ ರಂಪಾಟ ಪ್ರಾರಂಭಿಸಿದವರು ಅಮೆರಿಕ ಅಧ್ಯಕ್ಷ ಟ್ರಂಪ್. ಚೀಣಾದ ಹೆಚ್ಚುತ್ತಿರುವ ಪ್ರಾಬಲ್ಯವನ್ನು ಸಹಿಸದ ಅವರು ಅದನ್ನು ಪಡೆಯಲೂ ನಾನಾ ರೀತಿಯ ಪ್ರಯತ್ನ ನಡೆಸುತ್ತಿದ್ದಾರೆ. ತಮ್ಮ ಈ ಸಮರದಲ್ಲಿ ಭಾರತವನ್ನು ಎಳೆಯುತ್ತಿದ್ದಾರೆ. ಮೋದಿ ಸರಕಾರ ಕೂಡ ಅದಕ್ಕೆ ಮಣಿದಿದೆ. ಚೀಣೀ ಸರಕುಗಳ ಮೇಲೆ ಸುಂಕ ವಿಧಿಸುವುದರಿಂದ ಆರಂಭವಾದ ಈ ಮೇಲಾಟಕ್ಕೆ ಪ್ರತಿಯಾಗಿ ಚೀಣಾ ಕೂಡ ಅಮೆರಿಕದ ಸರಕುಗಳ ಮೇಲೆ ಸುಂಕ ವಿಧಿಸಿದೆ. ಇದು ಎಲ್ಲಿಗೆ ಕೊಂಡೊಯ್ಯುತ್ತದೆ ನೋಡಬೇಕು. ಪ್ರಾರಂಭವಾಗಿರುವ ಈ ವಾಣಿಜ್ಯ ಸಮರ ಅಭಿವೃದ್ಧಿಶೀಲ ರಾಷ್ಟ್ರಗಳ ಪಾಲಿಗೆ ಹೊಸ ತಲೆನೋವು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ಬಂಡವಾಳಶಾಹಿಯ ವ್ಯವಸ್ಥೆಯಡಿ ನಡೆಯುವ ಶೋಷಣೆಯ ಮರ್ಮ ಏನು? ಬ್ಯಾಂಕಿನ ಸಾಲವನ್ನು ತೀರಿಸದೆ ಒಂದೇ ಏಟಿಗೆ ನೀರವ ಮೋದಿಯು ೧೧,೦೦೦ ಕೋಟಿಗೂ ಹೆಚ್ಚು ಹಣವನ್ನು ತನ್ನದಾಗಿಸಿಕೊಳ್ಳುವುದು ಸರಕಿನ ವ್ಯಾಪಾರ ಮಾಡುವ ಬಂಡವಳಿಗನ ಶೋಷಣೆಗಿಂತಲೂ ಹೆಚ್ಚು ಹೀನವಾದ್ದು; ಏಕೆಂದರೆ, ಬಂಡವಳಿಗನು ತನ್ನ ಕೂಲಿಯಾಳುಗಳ ಬಿಟ್ಟಿ ಶ್ರಮದ ಲಾಭ ಪಡೆದರೆ, ಮೋದಿ ಮಹಾಶಯನು ದೇಶದ ಇಡೀ ಸಾರ್ವಜನಿಕರ ಶ್ರಮದಿಂದ ಶೇಖರಿಸಲ್ಪಟ್ಟ ಸಂಪತ್ತನ್ನು ಚಿಟಿಕೆ ಹೊಡೆದು ಪರದೇಶಕ್ಕೆ ಕೊಂಡೊಯ್ಯುತ್ತಾನೆ.



# ಕಾರ್ಲ್ ಮಾರ್ಕ್ಸ್ - ೨೦೦

ಕಳೆದ ಎರಡು ತಿಂಗಳು ನಮ್ಮ ದೇಶದಲ್ಲಿ ಬ್ಯಾಂಕುಗಳಿಂದ ಯಾರು ಯಾರು ಎಷ್ಟೆಷ್ಟು ಕೊಳ್ಳೆ ಹೊಡೆದಿದ್ದಾರೆಂಬ ಸುದ್ದಿಗಳು ಬೇರೆಲ್ಲವನ್ನೂ ಗೌಣವಾಗಿಸ ಬೇಕಾಗಿತ್ತು. ಆದರೆ ಇದೇ ಕೊಳ್ಳೆಬಾಕರು ಮಾಧ್ಯಮಗಳ ನಿಯಂತ್ರಕರೂ ಆಗಿರುವುದರಿಂದ ಸುದ್ದಿಗಳು ತುಣುಕು ತುಣುಕಾಗಿ ಹೊರಬಂದು ಕ್ರಮೇಣ ಅವು ಅಪ್ರಕೃತವೆಂಬಂತೆ ಮುಚ್ಚಿಹೋಗಿವೆ. ಕೇಂದ್ರ ಸರ್ಕಾರವು ಹಲವು ಲಕ್ಷ ಕೋಟಿ ರೂಪಾಯಿಗಳ ಬ್ಯಾಂಕು ಸಾಲಗಳನ್ನು ಒಂದು ಪುಟ್ಟ ಆಜ್ಞೆಯಿಂದ ರದ್ದುಪಡಿಸಿದೆ. ಫಲಾನುಭವಿಗಳು ಯಾರೂ ಸಾಮಾನ್ಯ ಜನರಲ್ಲ, ರೈತರಲ್ಲ, ವಿದ್ಯಾರ್ಥಿಗಳಲ್ಲ. ಎಲ್ಲಾ ದೊಡ್ಡ ಕುಳಗಳೇ, ಕೋಟ್ಯಾಧೀಶ್ವರರೇ. ಇವರೆಲ್ಲಾ ಅತಿಸಾಮಾನ್ಯರು ಬ್ಯಾಂಕುಗಳಲ್ಲಿಟ್ಟಿದ್ದ ಹಣವನ್ನು ದೋಚಿದ್ದಾರೆಂದರ್ಥ.

ಈ ಮಂದಿ ಕೋಟಿಗಟ್ಟಲೆ ಹಣ ಹೊಂದಿದ್ದಾರೆ, ಸರಿ. ಅದನ್ನವರು ಯಾವ ದುಡಿಮೆಯಿಂದಲೂ ಸಂಪಾದಿಸಿದ್ದಲ್ಲ. ಸಟ್ಟಾ ವ್ಯಾಪಾರ, ಬ್ಯಾಂಕುಗಳಿಂದ ಸಾಲ, ಮಾರುಕಟ್ಟೆ ಅವ್ಯವಹಾರ, ಮುಂತಾದುವೇ ಅವರ ಸಂಪತ್ತಿನ ಮೂಲ. ಬಂಡವಳಿಗರಾಗುವುದು ಹೀಗೆ, ಆಮೇಲೆ ದುಡಿಯುವವರ ಶ್ರಮಕ್ಕೆ ಸರಿಯಾದ ಕೂಲಿ ಕೊಡದೆ ಹಾಗೂ ಸಾರ್ವಜನಿಕ ಸಾಲಗಳನ್ನು ಮರುಪಾವತಿಸದೆ ಅಂತರರಾಷ್ಟ್ರೀಯ ಮಟ್ಟದ ಖ್ಯಾತಿ ಗಳಿಸುತ್ತಾರೆ. ಸರ್ಕಾರವು ಪೂರ್ತಿಯಾಗಿ ಇವರಂತಹ ಅಪರಾಧಿಗಳ ಬೆನ್ನಿಗೆ ನಿಲ್ಲದಿದ್ದರೆ ಅವ್ಯವಹಾರಗಳು ಊರ್ಜಿತವಾಗಲು ಸಾಧ್ಯವಿಲ್ಲ. ಚಂದಾ ಕೋಚರ್ ಎಂಬಾಕೆಯ ಉದಾಹರಣೆ ನೋಡೋಣ: ಇತ್ತೀಚಿನವರೆಗೆ ಆಕೆ ಖ್ಯಾತ ಅರ್ಥಶಾಸ್ತ್ರಜ್ಞೆ, ವಹಿವಾಟುಗಳನ್ನು ನಡೆಸುವ ನೈಪುಣ್ಯದ ಖನಿ, ಎಂಬಂತೆ ಬಿಂಬಿಸಲಾಗುತ್ತಿತ್ತು. ಯಾವ ಯೋಜನೆಯಾದರೂ ಸರಿಯೇ, ಆಕೆಯ ಅಭಿಪ್ರಾಯವು ಸದಾ ಮುಂಚೂಣಿಯಲ್ಲಿರುತ್ತಿತ್ತು. ಕೇಂದ್ರ ಮುಂಗಡ ಪತ್ರ ಮಂಡಿಸಿದ ತರುವಾಯದಲ್ಲಿ ತಜ್ಞರ ವ್ಯಾಖ್ಯಾನವೆಂದರೆ ಮೊದಲು ಈಕೆಯದೇ! ಚಂದಾ ಮಾಡಿದ್ದು ಯಾವುದೂ ಚಂದವಲ್ಲ ಎಂದು ಈಗ ಬಯಲಿಗೆ ಬಂದಿದೆ. ಅಂಬಾನಿ, ಅದಾನಿ, ರತನ್ ಟಾಟಾ, ಕುಮಾರಮಂಗಳಂ ಬಿರ್ಲ, ಮಿತ್ತಲ್, ಮುಂತಾದ ಮಹಾನುಭಾವರ ಕಡತಗಳು ಹೊರಬಂದರೆ ಅವರ ಯೋಗ್ಯತೆಯೂ ಚಂದಾ ಯೋಗ್ಯತೆಯೇ ಆಗಿರುತ್ತದೆ.

ಇದು ಬಂಡವಳಿಗರ ಮೂಲ ಲಕ್ಷಣ. ಮಾರ್ಕ್ಸ್ ಸುಮಾರು ೧೬೦ ವರ್ಷಗಳ ಹಿಂದೆ ಬರೆದಿದ್ದ ಒಂದು ಒಕ್ಕಣೆ ಇದು: " ಪ್ರಪಂಚದಲ್ಲಿ ಹಣವು ಮೊದಲ ಹೆಜ್ಜೆಗಳನ್ನಿರಿಸುತ್ತಾ ಬಂದಾಗಲೇ ಅದರ ಕೆನ್ನೆಗಳು ರಕ್ತದ ಕಲೆಗಳನ್ನು ಹೊಂದಿದ್ದವು. ಆದರೆ ಬಂಡವಾಳವು ಅಸ್ತಿತ್ವಕ್ಕೆ ಬರುವಾಗ ಮುಡಿಯಿಂದ ಪಾದದವರೆಗೂ, ಪ್ರತಿಯೊಂದು ರಂಧ್ರದಲ್ಲೂ ರಕ್ತ ಮತ್ತು ಹೊಲಸನ್ನು ಸುರಿಸುತ್ತಲೇ ಬರುತ್ತದೆ." ವಾಣಿಜ್ಯ, ಆಕ್ರಮಣ, ದರೋಡೆ, ಶೋಷಣೆ, ಇವೇ ಬಂಡವಳಿಗರ ಮೂಲ ಆಕರ. ಮನಮೋಹನ ಸಿಂಗ್ ಮತ್ತು ಅರುಣ್ ಜೇಟ್ಲಿ ಪರಿವಾರದಲ್ಲಿ ಶೋಭಿಸುವವರೆಲ್ಲಾ ಇಂತಹ ಹಿನ್ನೆಲೆಯವರೇ ಎಂಬುದು ಅತಿಶಯೋಕ್ತಿಯ ಮಾತಲ್ಲ.

**ಜಿ. ರಾಮಕೃಷ್ಣ**

ಇತ್ತೀಚಿನ ಒಂದು ವರದಿಯನ್ನು ಗಮನಿಸೋಣ: ಸೆಂಟ್ರಲ್ ಬ್ಯೂರೋ ಆಫ್ ಇನ್‌ವೆಸ್ಟಿಗೇಷನ್, ಐಸಿಐಸಿಐ ಬ್ಯಾಂಕಿನ ಕೆಲವು ಅಧಿಕಾರಿಗಳ ತನಿಖೆ ನಡೆಸಿದೆ. ಅದಕ್ಕೂ ಮುಂಚೆ ಒಂದು ಪೂರ್ವಭಾವಿ ವಿಚಾರಣೆ ನಡೆದಿತ್ತು. ಬ್ಯಾಂಕಿನ ಆಡಳಿತಾಧಿಕಾರಿ ಮತ್ತು ನಿರ್ದೇಶಕಿ ಚಂದಾ ಕೋಚರ್‌ಳ ಪತಿ ಮತ್ತು ವೀಡಿಯೋಕಾನ್ ಕಂಪನಿಯ ನಡುವಣ ವ್ಯವಹಾರ (ಅಥವಾ ಅವ್ಯವಹಾರ)ಕ್ಕೆ ಸಂಬಂಧಿಸಿದ್ದ ತನಿಖೆ ಅದು. ಐಸಿಐಸಿಐ ಬ್ಯಾಂಕ್ ನೀಡಿದ್ದ ಸಾಲದ ಮೊತ್ತ ೩೨೫೦ ಕೋಟಿ ರೂಪಾಯಿಗಳು, ಪಡೆದಿದ್ದುದು ವೀಡಿಯೋಕಾನ್ ಕಂಪನಿ. ಅದಕ್ಕೆ ಮಧ್ಯಸ್ಥಿಕೆಯು ಚಂದಾ ಅವರ ಪತಿಯದು. ಅವನ ಹೆಸರು ದೀಪಕ್ ಕೋಚರ್. ಈ ಸಿಬಿಐ ಎನ್ನುವುದು ಆಳುವ ಸರ್ಕಾರದ ಮತ್ತು ಪಕ್ಷದ ಕೈಗೊಂಬೆ. ಹಾಗಿದ್ದೂ ಕೆಲವೇಳೆ ಅನಿವಾರ್ಯವಾಗಿ ಅದು ಅಧಿಕಾರಾರೂಢರ ಅಯೋಗ್ಯತನವನ್ನು ಆಗಾಗ ಬಯಲುಗೊಳಿಸುವ ಪ್ರಸಂಗಗಳಿರುತ್ತವೆ. ವೀಡಿಯೋಕಾನ್ ಕಂಪನಿಯ ಮುಖ್ಯಸ್ಥ ವೇಣುಗೋಪಾಲ ಧೂತ್ ಎಂಬ ಧೂರ್ತ. ಇವನು ದೀಪಕ್ ಕೋಚರ್‌ನ ಒಂದು ಕಂಪನಿಯಲ್ಲಿ ಅದೆಷ್ಟೋ ಕೋಟಿ ಹಣ ತೊಡಗಿಸಿದ್ದಾನಾದ್ದರಿಂದ ದೀಪಕ್‌ನ ಪತ್ನಿಯು ನಿರ್ದೇಶಕಿಯಾಗಿರುವ ಐಸಿಐಸಿಐ ಬ್ಯಾಂಕ್ ಅವನಿಗೆ ೩೨೫೦ ಕೋಟಿ ಸಾಲ ನೀಡಿದೆಯೆಂಬುದು ಎದ್ದುತೋರುವ ಸಂಶಯ. ಆತ ಹೇಳುತ್ತಾನೆ, "ಬೇರೆಬೇರೆ ಬ್ಯಾಂಕುಗಳೆಲ್ಲಾ ಒಟ್ಟಾಗಿ ನಮ್ಮ ಕಂಪನಿಗೆ ನಲವತ್ತು ಸಾವಿರ ಕೋಟಿ ಸಾಲ ನೀಡಿವೆ" ಎಂದು. ಆ ಕಂಪನಿ ಸಾಲಗಳನ್ನು ಹಿಂದಿರುಗಿಸುತ್ತದೆಯೇ? "ಅದೇನು ಮಹಾ, ನಮ್ಮ ಕಂಪನಿಯು ತೈಲೋದ್ಯಮದಲ್ಲಿ ಪ್ರಮುಖ ಸ್ಥಾನ ಹೊಂದಿದೆ. ಅಲ್ಲಿ ನಮ್ಮ ಬಂಡವಾಳ ೪೦,೦೦೦ ಕೋಟಿ ಇದೆ" ಎನ್ನುತ್ತಾನೆ ಧೂರ್ತ ಧೂತ್. ಆ ಬಂಡವಾಳವೂ ಯಾವುದೋ ಬ್ಯಾಂಕುಗಳಿಂದ ಪಡೆದಿರುವ ಸಾಲವೇ ಆಗಿರಬೇಕು.

ಒಟ್ಟಿನಲ್ಲಿ, ಇವರೆಲ್ಲಾ ಆಟವಾಡುತ್ತಿರುವುದು

ದೇಶದ ಜನಸಾಮಾನ್ಯರು ಬ್ಯಾಂಕುಗಳಲ್ಲಿ ಇಟ್ಟಿರುವ ಠೇವಣಿಗಳಿಂದ. ಅದನ್ನು ಗುಳುಂ ಮಾಡಿ, ಕೇಂದ್ರ ಸರ್ಕಾರದ ನೆರವಿನಿಂದ, ಅವರೆಲ್ಲಾ ವಿದೇಶಗಳಿಗೆ ಹಾರಿಹೋಗುತ್ತಾರೆ; ಮುಂದೊಂದು ದಿನ ಬ್ಯಾಂಕುಗಳು ಠೇವಣಿದಾರರಿಗೆ ಹೇಳುತ್ತವೆ, " ಅಯ್ಯೋ, ಕ್ಷಮಿಸಿ; ನಿಮ್ಮ ಹಣವನ್ನು ಸಾಲವಾಗಿ ಪಡೆದಿದ್ದ ಬಂಡವಾಳಿಗರು ದೇಶಾಂತರಕ್ಕೆ ತೊಲಗಿಹೋಗಿದ್ದಾರೆ. ಆದ್ದರಿಂದ ನೀವು ಪಂಗನಾಮ ಹಾಕಿಕೊಂಡು ಯಾವುದಾದರೂ ನದಿಯ ತೀರದಲ್ಲಿ ಒಂದು ಗುಡಿಸಲು ಹಾಕಿಕೊಂಡು ಧರ್ಮಬೋಧನೆ ಮಾಡುವ ಸ್ವಾಮಿಗಳಾಗಿಬಿಡಿ; ಕಾವಿಬಟ್ಟೆಗೆ ಬೇಕಾದರೆ ನಾಲ್ಕು ಕಾಸು ಕೊಡುತ್ತೇವೆ", ಎಂದು.

ಬಂಡವಾಳದ ಬಹುಮುಖಗಳನ್ನು ವ್ಯಾಪಕವಾಗಿ ಮತ್ತು ನಿಖರವಾಗಿ ತೆರೆದಿಡುವ ಮಹತ್ವದ ಕೆಲಸ ಮಾಡಿದವನು ಕಾರ್ಲ್ ಮಾರ್ಕ್ಸ್. ಅವನು ಹುಟ್ಟಿದ್ದು ೧೮೧೮ರ ಮೇ ೫ರಂದು, ಅಂದರೆ ಇದೇ ಮೇ ೫ಕ್ಕೆ ಸರಿಯಾಗಿ ಇನ್ನೂರು ವರ್ಷಗಳ ಹಿಂದೆ. "ಬಂಡವಾಳ" ಎಂಬ ಮಾರ್ಕ್ಸ್‌ನ ಉದ್ಗ್ರಂಥದ ಮೊದಲ ಸಂಪುಟವು ಪ್ರಕಟವಾದ್ದು ೧೮೬೭ರಲ್ಲಿ, ಅಂದರೆ ನೂರೈವತ್ತು ವರ್ಷಗಳ ಹಿಂದೆ. ಆಗ ಮಾರ್ಕ್ಸ್‌ನ ವಯಸ್ಸು ಐವತ್ತು. ವಿಜಯ ಮಲ್ಯ, ಅದಾನಿ, ಚಂದಾ ಕೋಚರ್, ಅಂಬಾನಿ, ವೇಣುಗೋಪಾಲ ಧೂತ್, ದೀಪಕ್ ಕೋಚರ್, ಈಗ ದೇಶದಿಂದ ಪರಾರಿಯಾಗಿರುವ ವಜ್ರೋದ್ಯಮಿ ನೀರವ ಮೋದಿ, ಮುಂತಾದ ಬಂಡವಳಿಗರ ಚಾರಿತ್ರ್ಯ, ಹಣ ಲೂಟಿ ಮಾಡುವ ವಿಧಾನ, ಅವರ ತಂತ್ರಗಳು, ಅಮಾನವೀಯ ಕ್ರೌರ್ಯ, ಎಲ್ಲವನ್ನೂ ಆಮೂಲಾಗ್ರವಾಗಿ ಶೋಧಿಸಿ ತಿಳಿಯಬೇಕಾದರೆ ಮಾರ್ಕ್ಸ್‌ನ "ಬಂಡವಾಳ" ಎಂಬ ಗ್ರಂಥದ ವಿಶ್ಲೇಷಣಾ ವಿಧಾನವು ಅಪಾರವಾಗಿ ಸಹಾಯ ಮಾಡುತ್ತದೆ. "ಮುಡಿಯಿಂದ ಅಡಿಯವರೆಗೆ ರಕ್ತ ಸುರಿಸಿಕೊಂಡೇ ಬರುವ" ನರಭಕ್ಷಕನೆಂದರೆ ಬಂಡವಾಳ. ಈ ಸಿದ್ಧಾಂತಕ್ಕೆ ದೇಶ ಮತ್ತು ಕಾಲಗಳ ಮಿತಿಯಿಲ್ಲ. ಚಿಂತನೆ ಮತ್ತು ವಿಶ್ಲೇಷಣೆಗಳಿಗೆ ಅದ್ಭುತ ಪ್ರತೀಕವಾಗಿರುವ ಮಾರ್ಕ್ಸ್ ಕ್ರಿಯಾಶೀಲ ಹೋರಾಟ ಗಾರನೂ ಆಗಿದ್ದ. ಅವನು ಕೇವಲ "ಸಿದ್ಧಾಂತದ ಪಿಂಡ"ವಾಗಿದ್ದಿದ್ದರೆ ಬಂಡವಾಳಶಾಹಿಯು ಅವನನ್ನು ಅಷ್ಟೊಂದು ಕಡುವಾಗಿ ಬಹುಶಃ ದ್ವೇಷಿಸುತ್ತಿರಲಿಲ್ಲ. ದೆವ್ವಗಳಿಲ್ಲವೆಂಬುದು ಪರಮಸತ್ಯ, ಆದರೆ ಮಾರ್ಕ್ಸ್ ಬಂಡವಾಳಶಾಹಿ ವ್ಯವಸ್ಥೆಯನ್ನು ದೆವ್ವದಂತೆ ಕಾಡುತ್ತಾನೆ. ಆದ್ದರಿಂದಲೇ "ಮಾರ್ಕ್ಸ್ ಎಂದೋ ಅಸ್ತಂಗತನಾದ, ಅವನು ಅಪ್ರಸ್ತುತವಾಗಿಹೋಗಿದ್ದಾನೆ, ಅವನ ಕೃತಿಗಳು ಭತ್ತದ ಹೊಟ್ಟಿನಷ್ಟು ಹಗುರ" ಇತ್ಯಾದಿಯಾಗಿ ಅವನ ನಾಮಸ್ಮರಣೆ ಮಾಡಿಕೊಂಡೇ ಅವನ ಜೀವಂತಿಕೆಯನ್ನು ಕಂಡು ಹೌಹಾರಿ ಹೋಗುತ್ತದೆ ಬಂಡವಾಳಶಾಹಿ ವ್ಯವಸ್ಥೆ. ಮಾರ್ಕ್ಸ್‌ವಾದದ ಮೂಲಭೂತ ಗ್ರಹಿಕೆ, ವಿಶ್ಲೇಷಣಾ ವಿಧಾನ, ಅದರ ವಿಕಾಸ, ಇಂದಿನ ಅವಶ್ಯಕತೆ, ಮುಂತಾದುವನ್ನೆಲ್ಲಾ ಮನಮೋಹಕವಾಗಿ ತಿಳಿಸಿ ಕೊಡುವ ಒಂದು ಅಮೂಲ್ಯ ಗ್ರಂಥ ಲಿಯೋ ಹ್ಯೂಬರ್‌ಮನ್ ಬರೆದಿದ್ದ (೧೯೩೭) "ಮಾನವನ




ಐಹಿಕ ಸಂಪತ್ತು" (ಮ್ಯಾನ್ಸ್ ವರ್ಲ್ಡ್‌ಲೀ ಗುಡ್ಸ್). ಅದರ ಒಂದು ಅಧ್ಯಾಯದ ಸಾರವನ್ನು ಪ್ರಸ್ತುತ ಪಡಿಸುವ ಪ್ರಯತ್ನ ಇಲ್ಲಿದೆ.

ಕತಾರ್‌ನಲ್ಲಿ ಭಾರತ ಮೂಲದ ಒಬ್ಬ ಮೆಕ್ಯಾನಿಕ್‌ಗೆ ೨೦ ಕೋಟಿ ರೂಪಾಯಿಗಳ ಲಾಟರಿ ಹೊಡೆದು ಬಿಟ್ಟಿತಂತೆ. ಕೋಟಿ ಸಿಕ್ಕಿದರೆ ತಾವೆಷ್ಟು ಜನೋಪಯೋಗಿ ಯೋಜನೆಗಳನ್ನಿಟ್ಟುಕೊಂಡಿದ್ದೇವೆಂದು ವಾರಕ್ಕೊಂದು ಪುಟ್ಟಲೇಖನವು ನಮ್ಮ ಒಂದು ಕನ್ನಡ ದೈನಿಕದಲ್ಲಿ ಬರುತ್ತಿರುತ್ತದೆ. ಸಮಾಜದ ಪರಿವರ್ತನೆಗೆ ಇಂಥವರು ಹಗಲುಗನಸು ಕಾಣುತ್ತಾರೆ. ಕೋಟಿಯೇನಾದರೂ ಸಿಕ್ಕಿದರೆ ಹೆಚ್ಚೆಂದರೆ ಅವರು ಗ್ರಾಮಪಂಚಾಯಿತಿ ಯೊಂದರ ಸದಸ್ಯರಾಗಿ ಚುನಾಯಿತರಾಗಬಹುದೇನೊ! ಬಡತನದ ನಿರ್ಮೂಲನಕ್ಕೆ ಯೋಜನೆಗಳ ಅಭಾವವೇನೂ ಇಲ್ಲ. ಜನಪರವಾದ ನ್ಯಾಯಾಲಯ, ಉತ್ತಮ ಆಸ್ಪತ್ರೆ, "ಸ್ವಚ್ಛ ಭಾರತ", ಎಲ್ಲವೂ ಸಾಧ್ಯ. ಅಂತಹ ಕನಸುಗಳಲ್ಲಿ ಬಂಡವಾಳ ಶಾಹಿಯ ಉಚ್ಚಾಟನೆಯನ್ನೂ ಸೇರಿಸಬಹುದು. ಹೀಗೆ ಕನಸುಗಳನ್ನು ಕಾಣುತ್ತಿದ್ದ ೧೯ನೆಯ ಶತಮಾನದಲ್ಲಿ ಮಾರ್ಕ್ಸ್ ಹುಟ್ಟಿಬಂದ. ಅವನೂ ಸಮಾಜವಾದಿಯೇ ಆಗಿದ್ದ. ದುಡಿಯುವ ವರ್ಗದ ಜೀವನವನ್ನು ಸುಧಾರಿಸಬೇಕೆಂದು ಹಂಬಲಿಸಿದ್ದ. ಉತ್ಪಾದನಾ ಸಾಧನೆಗಳೆಲ್ಲಾ ಜನತೆಯ ಸ್ವಾಧೀನದಲ್ಲಿರಬೇಕು, ಇತ್ಯಾದಿಗಳೆಲ್ಲಾ ಅವನ ಕಾರ್ಯಸೂಚಿಯಲ್ಲಿ ಸೇರಿದ್ದವು. ನಾಳಿನ ಸಮಾಜದ ಬಗ್ಗೆ ಯೋಚಿಸುವಾಗ ಅವನು ನಿನ್ನೆಯ ಸಮಾಜವು ಉದ್ಭವಿಸಿದ್ದು ಹೇಗೆ, ಬೆಳೆದುಬಂದದ್ದು ಹೇಗೆ, ನಶಿಸಿದ್ದು ಏಕೆ ಮತ್ತು ಹೇಗೆ, ಎಂಬುದನ್ನೆಲ್ಲಾ ಯೋಚಿಸಹೊರಟ. ಸಮಾಜದಲ್ಲಿನ ನಿರ್ದಿಷ್ಟ ಶಕ್ತಿಗಳಿಂದ ಮಾತ್ರವೇ ಬದಲಾವಣೆ ಉಂಟಾಗುತ್ತದೆ. ಸಂಘಟಿತ ಕ್ರಾಂತಿಕಾರಿ ದುಡಿಯುವ ವರ್ಗವು ವರ್ತಮಾನದಲ್ಲಿ ನೂತನ ಯುಗದ ಹರಿಕಾರನಾಗಬಲ್ಲುದು, ಎಂದೆಲ್ಲಾ ತರ್ಕಿಸಿದ. ಅಂದರೆ, ಅವನ ಆರ್ಥಿಕ ಸಿದ್ಧಾಂತದಂತೆ ಬಂಡವಾಳಶಾಹಿ ವ್ಯವಸ್ಥೆಗೆ ದುಡಿಯುವವರ ಶೋಷಣೆಯು ಮೂಲಾಧಾರ.

ಇದೇನೋ ತಲೆಕೆಟ್ಟವನ ಯೋಚನೆಯೆಂದು ಹಲವರು ಹುಬ್ಬು ಗಂಟಿಕ್ಕಿಕೊಂಡರು. ಹಿಂದಿನ ಕಾಲದ ಗುಲಾಮನನ್ನು ಹಿಂಸಿಸುತ್ತಿದ್ದುದು ಅವರಿಗೆ ತಿಳಿದಿತ್ತು, ಅದು ಅಮಾನವೀಯವೆಂದು ಬರೆಯುತ್ತಿದ್ದರು, ಅದು ನಾಶವಾಗಿದ್ದನ್ನು ಸ್ವಾಗತಿಸಿದ್ದರು. ಊಳಿಗಮಾನ್ಯ ಪ್ರಭುತ್ವದ ಕಾಲದ ಊಳಿಗದವನ ಬಗ್ಗೆ ಅವರಿಗೆ ಅನುಕಂಪವಿದ್ದಿತು. ಆದರೆ ಬಂಡವಾಳಶಾಹಿಯಡಿ ಇದ್ದ ದುಡಿಮೆಗಾರನು ಅನ್ಯಾಯಕ್ಕೆ ಸಿಲುಕಿದ್ದಾನೆಂದು ಒಪ್ಪಿಕೊಳ್ಳಲು ಅವರಿಗೆ ಮುಜುಗರವಿತ್ತು. ಅವನಿಗೆ ಬೇರೆಡೆ ಹೋಗಿ ದುಡಿಯಲು ಸ್ವಾತಂತ್ರ್ಯವಿದೆಯಲ್ಲಾ, ಎಂಬುದು ಅವರ ಸಮರ್ಥನೆ. ದುಡಿಮೆ ಮಾಡದೆಯೂ ಜೀವಿಸುವ ಅವನ ಸ್ವಾತಂತ್ರ್ಯವನ್ನು ಯಾರೂ ಅಪಹರಿಸಿಲ್ಲವಲ್ಲಾ ಎಂದು ಕೊಂಕು ನುಡಿಯುತ್ತಿದ್ದರು. ಇದನ್ನು ಮಾರ್ಕ್ಸ್ ವ್ಯಾಖ್ಯಾನಿಸಿ ಹೇಳಬೇಕಾಯಿತು. ಅವನು ಹೇಳಿದ, "ಬಂಡವಾಳಶಾಹಿ ಸಮಾಜದಲ್ಲಿ ಶೋಷಣೆಯು ಮುಸುಕಿನಲ್ಲಿ ನಡೆಯುತ್ತದೆಯಾದ್ದರಿಂದ ಅದನ್ನು ಗುರುತಿಸಲಾಗುತ್ತಿಲ್ಲ" ಎಂದು. "ಮಿಗುತಾಯ ಮೌಲ್ಯ"ದ ರಹಸ್ಯವನ್ನು ಭೇದಿಸಿದ ನಂತರವೂ ಮಾರ್ಕ್ಸ್‌ನನ್ನು ಒಪ್ಪದವರಿದ್ದರು. ನಮ್ಮ ದೇಶದಲ್ಲಿ ಡಾ॥ ಕೆ. ಎನ್. ರಾಜ್ ಎಂಬ ಖ್ಯಾತ ಜನಪರ ಅರ್ಥಶಾಸ್ತ್ರಜ್ಞರಿದ್ದರು, ಅವರು ದೆಹಲಿ ವಿಶ್ವವಿದ್ಯಾ ನಿಲಯದ ಉಪಕುಲಪತಿಯಾಗಿದ್ದರು, ಸಮಾಜವಾದದ ಬೆಂಬಲಿಗರಾಗಿದ್ದರು; ಆದರೆ ಮಾರ್ಕ್ಸ್‌ನ ಮಿಗುತಾಯ ಮೌಲ್ಯದ ವಿವರಣೆಯನ್ನು ಅವರು ಮಾನ್ಯ ಮಾಡುತ್ತಿರಲಿಲ್ಲ. ಮಾರ್ಕ್ಸ್‌ಗೆ ಸ್ವಲ್ಪ ಮುಂಚಿನ ರಿಕಾರ್ಡೊ, ಆಡಂ ಸ್ಮಿತ್, ಮಿಲ್, ಮುಂತಾದವರು "ಮೌಲ್ಯವನ್ನು ದುಡಿಮೆಯ ಸಿದ್ಧಾಂತ"ದಡಿ ವಿಶ್ಲೇಷಿಸುತ್ತಿದ್ದರು. ಬೆಂಜಮಿನ್ ಫ್ರಾಂಕ್‌ಲಿನ್ ಹೇಳುತ್ತಿದ್ದ, "ವ್ಯಾಪಾರವೆಂದರೆ ದುಡಿಮೆಯನ್ನು ದುಡಿಮೆಗೆ ವಿನಿಮಯ ಮಾಡಿಕೊಳ್ಳುವುದಷ್ಟೇ; ಆದ್ದರಿಂದ ಎಲ್ಲವನ್ನೂ ದುಡಿಮೆಯಿಂದ ಅಳೆಯ ಬಹುದು," ಎಂದು.

ಮಾರ್ಕ್ಸ್ ಮೊದಲಿಗೆ ನಿರೂಪಿಸಿದ ವಿಚಾರ ಇದು: ದಿನನಿತ್ಯ ನಾವು ಬಳಸುವ ಪದಾರ್ಥಗಳಿಗೂ ವ್ಯಾಪಾರಕ್ಕಿಡಲಾಗುವ ಸರಕುಗಳಿಗೂ ವ್ಯತ್ಯಾಸವಿದೆ. ನಮ್ಮದು ಬಳಕೆ, ಆದರೆ ವ್ಯಾಪಾರದ್ದು ವಿನಿಮಯ. ನನ್ನ ಅಂಗಿಯು ನನ್ನ ಬಳಕೆಯ ವಸ್ತು; ಹಣ ಪಡೆದು ಮಾರಲಾಗುವ ಅಂಗಡಿಯ ಅಂಗಿಯು ವ್ಯಾಪಾರಿಯ ಬಳಕೆಯ ವಸ್ತುವಲ್ಲ. ಆದ್ದರಿಂದ ಅದನ್ನು ಸರಕು ಎನ್ನಲಾಗುತ್ತದೆ. ಸರಕುಗಳನ್ನು ವಿನಿಮಯ ಮಾಡಿಕೊಳ್ಳಲಾಗುತ್ತದೆ, ಅವನ್ನು ಕೊಂಡವರಿಗೆ ಅದು ಬಳಕೆಯ ವಸ್ತುವಾಗುತ್ತದೆ. ಯಾವುದನ್ನು ನೇರ ಬಳಕೆಗಲ್ಲದೆ ವಿನಿಮಯಕ್ಕಾಗಿ ಉತ್ಪಾದಿಸಲಾಗುತ್ತದೋ ಅದು ಸರಕು. ಇಂತಹ ಸರಕುಗಳ ಮೌಲ್ಯವನ್ನು ನಿರ್ಧರಿಸುವುದೆಂತು? ರೊಟ್ಟಿ, ತುಪ್ಪ, ಕಡುಬು, ಚಪ್ಪಲಿ, ಅಂಗಿ, ಎಲ್ಲಾ ನಮ್ಮ ಅಗತ್ಯಗಳನ್ನು ಪೂರೈಸುವಂತಹ ವಸ್ತುಗಳು, ಆದರೆ ಅವುಗಳಲ್ಲಿ ಹೋಲಿಕೆ ಇಲ್ಲ. ಅವು ಮಾರಾಟದ ಸರಕುಗಳಾದಾಗ ಒಂದು ಹೋಲಿಕೆಯುಂಟು. ಯಾವುದದು



ಸಾಮಾನ್ಯಾಂಶ? "ಅವೆಲ್ಲವೂ ದುಡಿಮೆಯ ಉತ್ಪನ್ನಗಳು" ಎಂಬುದು ಸಾಮಾನ್ಯಾಂಶ. ಅವುಗಳ ಮೌಲ್ಯವನ್ನು ಅವುಗಳ ಉತ್ಪಾದನೆಗೆ ತಗಲುವ ಶ್ರಮ–ಸಮಯದಿಂದ ಮಾಪನ ಮಾಡಲಾಗುತ್ತದೆ. ಎಲ್ಲ ತರಹದ ದುಡಿಮೆಗಳನ್ನೂ ಮಾಪನ ಮಾಡಲು ಸಾಧ್ಯ. ಪರಿಣತಿಯ ಅಗತ್ಯವಿರುವ ದುಡಿಮೆಯು ಅದರ ಅಗತ್ಯವಿಲ್ಲದಿರುವ ದುಡಿಮೆಗಿಂತ ಹೆಚ್ಚು ಶ್ರಮ – ಸಮಯವನ್ನು ತೆಗೆದುಕೊಳ್ಳುತ್ತದೆ. ಪರಿಣತಿ ಹೊಂದಲು ಮುಂಚೆಯೇ ಒಂದಷ್ಟು ಸಮಯವು ವ್ಯಯವಾಗಿರುತ್ತದೆ. ಉತ್ಪಾದನೆಗೆ ಬೇಕಾದ ಸಮಯವನ್ನು "ಉತ್ಪಾದನೆಗೆ ಅಗತ್ಯವಾದ ಸಾಮಾಜಿಕ ಶ್ರಮ – ಸಮಯ ಎನ್ನುತ್ತಾರೆ." ಇಲ್ಲಿ 'ಸಾಮಾಜಿಕ' ಎಂದರೇನು? ಸೋಮಾರಿಯು ಸೋಮಾರಿಯಲ್ಲದವನಿಗಿಂತಲೂ ಉತ್ಪಾದನೆಗೆ ಹೆಚ್ಚು ಸಮಯ ತೆಗೆದುಕೊಳ್ಳುತ್ತಾನೆ. ಆದ್ದರಿಂದ ಉತ್ಪಾದನೆಗೆ ಸಾಮಾನ್ಯವಾಗಿ ಬೇಕಾಗುವ ಸರಾಸರಿ ಸಮಯವನ್ನು "ಸಾಮಾಜಿಕ ಶ್ರಮ – ಸಮಯ" ಎನ್ನುತ್ತಾರೆ. ಸಾಮಾಜಿಕ ರಚನೆ ಎಂಥದು, ಉತ್ಪಾದನೆಯ ಸನ್ನಿವೇಶ ಹೇಗಿದೆ, ಅಗತ್ಯವಾದ ನೈಪುಣ್ಯ ಯಾವ ಮಟ್ಟದ್ದು, ಇತ್ಯಾದಿ ಪ್ರಶ್ನೆಗಳೆಲ್ಲಾ "ಸಾಮಾಜಿಕ" ಶ್ರಮ–ಸಮಯದಲ್ಲಿ ಲೆಕ್ಕಕ್ಕೆ ಬರುತ್ತವೆ. ಸರಾಸರಿ ಹತ್ತು ಗಂಟೆಯ ಕೆಲಸವನ್ನು ಮಾಡಲು ಕೆಲವರು ಹನ್ನೆರಡು ಗಂಟೆ ತೆಗೆದುಕೊಳ್ಳಬಹುದು, ಆದರೆ "ಸಾಮಾಜಿಕ ಶ್ರಮ – ಸಮಯವು" ಹತ್ತು ಗಂಟೆಗೆ ಸೀಮಿತವಾದ್ದು. ಅಂತೆಯೇ, ಉತ್ಪಾದನೆಗೆ ಬಳಸಲಾಗುವ ಯಂತ್ರವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಒಂದು ನಿರ್ದಿಷ್ಟ ಗುಣಮಟ್ಟದ ಯಂತ್ರದಿಂದ ಸಾಮಾನ್ಯವಾದ ಸರಾಸರಿ ಶ್ರಮ–ಸಮಯದಲ್ಲಿ ದುಡಿಮೆ ಮಾಡುವುದು "ಸಾಮಾಜಿಕ ಶ್ರಮ–ಸಮಯ" ಎನಿಸಿಕೊಳ್ಳುತ್ತದೆ.

ದುಡಿಮೆಗಾರರಲ್ಲಿ ಮಾರಾಟಕ್ಕೆ ಒಂದು ಸರಕಿದೆ; ಅದು ಅವರ ದುಡಿಮೆಯ ಶಕ್ತಿ. ಅದನ್ನು ಮಾರಾಟಕ್ಕಿಡಲಾಗುತ್ತದೆ. ಅದಕ್ಕೆ ದೊರೆಯುವ ಬೆಲೆಯು ಅವನ ಕೂಲಿ ಅಥವಾ ವೇತನ. ಅದು ಸಮಾಧಾನಕರವಾಗಿಲ್ಲದಿದ್ದರೆ ತನ್ನ ದುಡಿಮೆ – ಶಕ್ತಿಯನ್ನು ಮಾರಲು ನಿರಾಕರಿಸುವ ಸ್ವಾತಂತ್ರ್ಯ ಅವನಿಗಿದೆ, ಆದರೆ ಮಾರಾಟ ಮಾಡುವವರ ನಡುವೆ ಸ್ಪರ್ಧೆ ಏರ್ಪಟ್ಟಾಗ ನಿಗದಿಗೊಳಿಸಲಾಗುವ ಕೂಲಿಯು ಕಡಿಮೆ ಮಟ್ಟದ್ದಾಗಿರುತ್ತದೆ. ಹಾಗೆಂದು ದುಡಿಮೆ–ಶಕ್ತಿಯನ್ನು ಮಾರದಿರಲು ಸಾಧ್ಯವಿಲ್ಲ, ಏಕೆಂದರೆ ಜೀವನ ಹೊರೆಯಲು ದುಡಿಮೆಗಾರನಲ್ಲಿರುವ ಒಂದೇ ಸರಕು ಅವನ ದುಡಿಮೆಯ ಶಕ್ತಿ. ಅದಕ್ಕೆ ಬೆಲೆ ಕಟ್ಟುವುದು ಹೇಗೆ? ದುಡಿಮೆಯ ಶಕ್ತಿಯ ಮಾರಾಟ ಮಾಡುವವರ ಕನಿಷ್ಠ ಜೀವನ ಮಟ್ಟಕ್ಕೆ ಏನೆಲ್ಲಾ ಅಗತ್ಯಗಳಿವೆಯೋ ಅವುಗಳ ಪೂರೈಕೆಯಾಗಬೇಕು, ಅವರ ಕುಟುಂಬಗಳನ್ನು ಹೊರೆಯಲು ಸಾಧ್ಯವಾಗಬೇಕು. ಇಲ್ಲದಿದ್ದರೆ ಅವರ ನಂತರ ದುಡಿಮೆ–ಶಕ್ತಿಯ ಮಾರಾಟ ಮಾಡಿ ಬದುಕುವವರು ಇಲ್ಲವಾಗಿ ಹೋಗಬಹುದು. ಅಂಥವರ "ಅಗತ್ಯಗಳು" ಸ್ಥಿರವಲ್ಲ, ಏಕಪ್ರಕಾರವಲ್ಲ. ಆಯಾ ದೇಶ–ಕಾಲಗಳ ನಾಗರಿಕತೆಯ ಮಟ್ಟಕ್ಕೆ ಸರಿಹೊಂದುವ ಅಗತ್ಯಗಳು ದುಡಿಮೆಯ ಶಕ್ತಿಯ ಮಾರಾಟದ ಸಂದರ್ಭಗಳಲ್ಲಿ ಗಣನೆಗೆ ಬರುತ್ತವೆ. ಇದನ್ನು ಮಾರ್ಕ್ಸ್ ಪ್ರತಿಪಾದಿಸಿರುವುದು ಹೀಗೆ: "ದುಡಿಮೆಯ–ಶಕ್ತಿಯ ಮೌಲ್ಯವೆಂದರೆ ದುಡಿಮೆಗಾರನ ದಿನನಿತ್ಯದ ಜೀವನಕ್ಕೆ ಅಗತ್ಯವಾದ ಎಲ್ಲ ಸಾಧನಗಳ ಮೌಲ್ಯ. ....ಅಂದರೆ, ದುಡಿಯುವ ವ್ಯಕ್ತಿಯ ಸಹಜ ಅವಶ್ಯಕತೆಗಳಾದ ಆಹಾರ, ಬಟ್ಟೆ, ಮನೆ, ಅಡಿಗೆ ಇಂಧನ, ಇತ್ಯಾದಿಗಳು. ಆಯಾ ಪ್ರದೇಶಗಳ ಹವಾಮಾನಕ್ಕೆ ಅನುಗುಣವಾಗಿ ಇವೆಲ್ಲಾ ಹೆಚ್ಚು ಅಥವಾ ಕಡಿಮೆ ಆಗಬಹುದು... ದುಡಿಯುವ ವ್ಯಕ್ತಿಯ ತಥಾಕಥಿತ ಅಗತ್ಯತೆಗಳು ಚಾರಿತ್ರಿಕ ಅಭಿವೃದ್ಧಿಯ ವಿವಿಧ ಹಂತಗಳ ಉತ್ಪನ್ನಗಳು; ಆದ್ದರಿಂದ ಆಯಾದೇಶದ ನಾಗರಿಕತೆಯ ಮಟ್ಟಕ್ಕನುಸಾರವಾಗಿ ಅಗತ್ಯಗಳು ಭಿನ್ನವಾಗಿರಲು ಸಾಧ್ಯ. ...ದುಡಿಮೆ–ಶಕ್ತಿ ಇರುವ ವ್ಯಕ್ತಿಯು ಚಿರಂಜೀವಿಯಲ್ಲ. ಆದ್ದರಿಂದ ವ್ಯಕ್ತಿಯ ವೃದ್ಧಾಪ್ಯ, ಕಾಯಿಲೆ–ಕಸಾಲೆ, ಮರಣ, ಮುಂತಾದವುಗಳಿಂದಾಗಿ ದುಡಿಮೆಯ–ಶಕ್ತಿಯು ಒಂದೇ ಪ್ರಮಾಣದಲ್ಲಿ ಲಭ್ಯವಿರುವುದಿಲ್ಲ. ಆದ್ದರಿಂದ ಅದನ್ನು ಸದಾ ತುಂಬಿಸಬೇಕಾಗಿರುತ್ತದೆ. .... ಅಂದರೆ ದುಡಿಮೆಯ – ಶಕ್ತಿಯ ಮಾಲಿಕರಾದ ಸರಕನ್ನು (ದುಡಿಮೆಗಾರರನ್ನು) ಉತ್ಪನ್ನಗೊಳಿಸುತ್ತಿರಬೇಕು; ಇಲ್ಲವಾದರೆ ಮಾರುಕಟ್ಟೆಯಲ್ಲಿ ಆ ಸರಕು ದೊರೆಯದಂತಾಗಿಬಿಡುತ್ತದೆ."

## ಜಗತ್ತಿನ ಕಾರ್ಮಿಕರೇ ಒಂದಾಗಿ....

ಜಗತ್ತಿನ ಕಾರ್ಮಿಕರೇ ಒಂದಾಗಿ
ಎಂದು ಕರೆ ಕೊಟ್ಟವರು ಕಾರ್ಲ್ ಮಾರ್ಕ್ಸ್
ಕಾರ್ಮಿಕರೇ, ನೀವು ಒಗ್ಗೂಡಿದರೆ
ಕೈ – ಬೇಡಿ ಕಳಚುವುದು
ಎಂದು ಕಹಳೆ ಊದಿದವರು ಕಾರ್ಲ್ ಮಾರ್ಕ್ಸ್.

ದುಡಿಯೋರ್ಗೆ ಅನ್ನ ಕೊಡಿ
ದುಡಿಯೋರ್ಗೆ ಬಟ್ಟೆ ಕೊಡಿ
ದುಡಿಯೋರ್ಗೆ ವಸತಿ ಕೊಡಿ
ದುಡಿಯೋರ್ಗೆ ಗೌರವ ಕೊಡಿ
ಎಂದವರು ಕಾರ್ಲ್ ಮಾರ್ಕ್ಸ್.

ದುಡಿಯೋದೆ ನೀತಿ ಕಣೋ
ದುಡಿಯೋದೆ ಧರ್ಮ ಕಣೋ
ದುಡಿಯೋನೆ ದೇವರು ಕಣೋ
ದುಡಿಯೋದೆ ಪೂಜೆ ಕಣೋ
ಎಂದವರು ಕಾರ್ಲ್ ಮಾರ್ಕ್ಸ್.

ಕಾರ್ಮಿಕನ ರಕ್ತ ಹೀರಿ
ಬಡವನ ಮೂಳೆ ಮುರಿದು
ಬದುಕುವುದೇ ಬಂಡವಾಳಶಾಹಿ
ಇಂಥ ಶ್ರೀಮಂತರ ಅಟ್ಟಹಾಸ
ಸದೆ ಬಡಿದು ಕ್ರಾಂತಿ ಮಾಡಿ ಎಂದವನೇ ಕಾರ್ಲ್ ಮಾರ್ಕ್ಸ್.

ದೇವರು ಅನ್ನೋದು ನಶೆ
ಧರ್ಮ ಎನ್ನೋದು ನಿಶೆ
ಈ ಅಮಲಿನಲಿ ಬದುಕೋನೇ ಬಡವ
ಈ ನಶೆಯಿಂದ ಹೊರಗೆ ಬನ್ನಿ
ಜ್ಞಾನಿಗಳಾಗಿ ಎಂದವನೇ ಕಾರ್ಲ್ ಮಾರ್ಕ್ಸ್.

ದುಡಿಯೋರ್ಗೆ ರಾಜ್ಯ ಕೊಡಿ
ಜಾತಿಗೆ ವಿದಾಯ ಹೇಳಿ
ದೇವರು – ಧರ್ಮ ಶೋಷಣೆಗೆ ಮೂಲ
ಕಾರ್ಮಿಕರ ರಾಜ್ಯ ವಿಜೃಂಭಿಸಲಿ
ದುಡಿಯೋನು ಸುಖವಾಗಿರಲಿ ಎಂದವನೇ ಕಾರ್ಲ್ ಮಾರ್ಕ್ಸ್.

**ರಚನೆ : ಎಸ್. ಸಿ. ರಂಗನಾಥ್**
ನಿವೃತ್ತ ಉಪನ್ಯಾಸಕರು, ಲೇಖಕರು

ಶ್ರೀ ಎಸ್. ಸಿ. ರಂಗನಾಥ್ ಅವರು ಹೊಸತು ಪತ್ರಿಕೆಗೆ ಆರಂಭದಿಂದಲೂ ಹಲವಾರು ಲೇಖನಗಳನ್ನು ಬರೆದಿದ್ದಾರೆ. ಮೇ ತಿಂಗಳ ಸಂಚಿಕೆಗಾಗಿ ಕಾರ್ಲ್ ಮಾರ್ಕ್ಸ್ ಕುರಿತು ಬರೆದು ಕಳಿಸಿದ ಕವಿತೆ ಕೊನೆಯದು. ೦೫–೦೪–೨೦೧೮ ರಂದು ಹೃದಯಾಘಾತದಿಂದ ನಿಧನರಾಗಿದ್ದಾರೆ. ಬದುಕಿನ ಕೊನೆಯ ದಿನಗಳವರೆಗೂ ಪತ್ರಿಕೆ ಕುರಿತು ಅವರಿಟ್ಟುಕೊಂಡಿದ್ದ ಪ್ರೀತಿ, ಅಭಿಮಾನವನ್ನು 'ಹೊಸತು' ಬಳಗ ಸ್ಮರಿಸುತ್ತಲೇ, ಅವರ ಕುಟುಂಬದವರ ದುಃಖದಲ್ಲಿ ಭಾಗಿಯಾಗುತ್ತದೆ.

– ಸಂ.

ಇದರ ತಾತ್ಪರ್ಯವೇನು? ದುಡಿಮೆಗಾರನು ತನ್ನ ಕುಟುಂಬವನ್ನು ಪೊರೆಯಲು ಸಾಧ್ಯವಾಗುವಷ್ಟು ಕೂಲಿ ಪಡೆಯಬೇಕು, ರೇಡಿಯೋ, ಟೆಲಿವಿಷನ್, ಸಿನಿಮಾ, ನಾಟಕ, ಮದುವೆ, ಪ್ರವಾಸ, ಸಾಹಿತ್ಯ, ಸಂಗೀತ, ಕ್ರೀಡೆ, ಇವುಗಳಲ್ಲಿ ಆಸಕ್ತಿ ಪೂರೈಸಿಕೊಳ್ಳುವಷ್ಟು ಆದಾಯ ಹೊಂದಬೇಕು.

ದುಡಿಯುವ ವ್ಯಕ್ತಿಯು ಒಂದು 'ಅನನ್ಯವಾದ ಸರಕಿನ ಮಾಲಿಕ'. ಅವನು ಹೇಗೆ ಅನನ್ಯ? ಬೇರೆ ಸರಕುಗಳಂತಲ್ಲದೆ, ಈ ಸರಕುದಾರನು ತನ್ನ ಮೌಲ್ಯವನ್ನು ಮೀರಿದ ಮೌಲ್ಯವನ್ನು ಸೃಜಿಸಬಲ್ಲ. ಒಂದು ಟನ್ ಕಬ್ಬಿಣವೂ ಸರಕೇ; ಆದರೆ ಅದರ ಮೌಲ್ಯವನ್ನು ಮೀರಿದ ಏನನ್ನೂ ಅದು ಸೃಜಿಸಲಾರದು. ದುಡಿಮೆಗಾರನು ತನ್ನ ದುಡಿಮೆ – ಶಕ್ತಿಯೆಂಬ ಸರಕನ್ನು ಮಾರಿಕೊಂಡಾಗ ಅವನ ಕೂಲಿಗಾಗಿ ಎಷ್ಟು ಸಮಯ ದುಡಿಯಬೇಕೋ ಅದಕ್ಕಿಂತಲೂ ಹೆಚ್ಚು ಸಮಯದ ದುಡಿಮೆಯನ್ನು ನೀಡುತ್ತಾನೆ (೪). ಎಂಟೋ, ಹತ್ತೋ ಗಂಟೆ ದುಡಿಮೆಯಲ್ಲಿ ಅವಳ ಕೂಲಿಯ ಮೊತ್ತವು ಐದಾರು ಗಂಟೆಗಳಲ್ಲೇ ದೊರೆತುಬಿಡುತ್ತದೆ. ಇನ್ನು ಮಿಕ್ಕ ಮೂರ್‍ನಾಲ್ಕು ಗಂಟೆ ದುಡಿಮೆಯು ದುಡಿಮೆಗಾರಳಿಗಾಗಿ ಅಲ್ಲ, ಅದು ಉದ್ಯೋಗ ಕೊಟ್ಟಿರುವ ಯಜಮಾನನಿಗಾಗಿ. ಮೊದಲ ಐದಾರು ಗಂಟೆಯು "ಅಗತ್ಯವಾದ ದುಡಿಮೆ – ಸಮಯ" ಮತ್ತು ಮುಂದಿನ ಮೂರ್‍ನಾಲ್ಕು ಗಂಟೆಗಳು "ಮಿಗುತಾಯ ದುಡಿಮೆ – ಸಮಯ." ಕೂಲಿ ಕಳೆದು ಬಾಕಿ ಉತ್ಪನ್ನವು "ಮಿಗುತಾಯ ಮೌಲ್ಯ" ಎನಿಸಿಕೊಳ್ಳುತ್ತದೆ. ಉತ್ಪಾದನಾ ಸಾಧನಗಳ (ಭೂಮಿ, ಯಂತ್ರ, ಕುಲುಮೆ, ನೇಗಿಲು, ಮಗ್ಗ, ಇತ್ಯಾದಿ) ಮಾಲಿಕನಿಗೆ ಆ ಮಿಗುತಾಯ ಮೌಲ್ಯವು ಲಾಭವಾಗಿ ದೊರೆಯುತ್ತದೆ. ಉತ್ಪಾದನಾ ಸಾಧನಗಳು ಖಾಸಗಿ ಮಾಲಿಕತ್ವದಲ್ಲಿ ಇರದಿದ್ದರೆ ಆ ಮಿಗುತಾಯ ಮೌಲ್ಯವು ಸಾರ್ವಜನಿಕರ ಪಾಲಿಗೆ ಸೇರಿರುತ್ತಿತ್ತು. ಒಟ್ಟಿನಲ್ಲಿ ದುಡಿಮೆಗಾರನ ದುಡಿಮೆಯ – ಶಕ್ತಿಯ ಒಂದು ಭಾಗಕ್ಕೆ ಕೂಲಿ ನೀಡಲಾಗಿದೆ, ಇನ್ನೊಂದು ಭಾಗವು ಬಿಟ್ಟಿ ಕೂಲಿಯಾಗಿರುತ್ತದೆ. ಮಾಲಿಕನ ದೃಷ್ಟಿಯಿಂದ ನೋಡಿದರೆ ಸರಕಿನ ಮಾರುಕಟ್ಟೆ ಬೆಲೆ ಮತ್ತು ಅದರ ಉತ್ಪಾದನೆಗೆ ತಗುಲಿರುವ ಬೆಲೆ ಬೇರೆಬೇರೆ.

ಬಂಡವಾಳಶಾಹಿಯ ವ್ಯವಸ್ಥೆಯಡಿ ನಡೆಯುವ ಶೋಷಣೆಯ ಮರ್ಮ ಇದೇ. ಬ್ಯಾಂಕಿನ ಸಾಲವನ್ನು ತೀರಿಸದೆ ಒಂದೇ ಏಟಿಗೆ ನೀರವ ಮೋದಿಯು ೧೦,೦೦೦ ಕೋಟಿಗೂ ಹೆಚ್ಚು ಹಣವನ್ನು ತನ್ನದಾಗಿಸಿಕೊಳ್ಳುವುದು ಸರಕಿನ ವ್ಯಾಪಾರ ಮಾಡುವ ಬಂಡವಳಿಗನ ಶೋಷಣೆಗಿಂತಲೂ ಹೆಚ್ಚು ಹೀನವಾದ್ದು; ಏಕೆಂದರೆ, ಬಂಡವಳಿಗನು ತನ್ನ ಕೂಲಿಯಾಳುಗಳ ಬಿಟ್ಟಿ ಶ್ರಮದ ಲಾಭ ಪಡೆದರೆ, ಮೋದಿ ಮಹಾಶಯನು ದೇಶದ ಇಡೀ ಸಾರ್ವಜನಿಕರ ಶ್ರಮದಿಂದ ಶೇಖರಿಸಲ್ಪಟ್ಟ ಸಂಪತ್ತನ್ನು ಚಿಟಿಕೆ ಹೊಡೆದು ಪರದೇಶಕ್ಕೆ ಕೊಂಡೊಯ್ಯುತ್ತಾನೆ.

ಬಂಡವಾಳಶಾಹಿ ಪ್ರಕ್ರಿಯೆಯ ಹೆಜ್ಜೆಗಳನ್ನು ಕ್ರಮವಾಗಿ ಹೀಗೆ ಗುರುತಿಸೋಣ: ಬಂಡವಾಳಶಾಹಿ ವ್ಯವಸ್ಥೆಯು ಮಾರಾಟದ ವಸ್ತುಗಳಾದ ಸರಕುಗಳನ್ನು ಉತ್ಪಾದಿಸುತ್ತದೆ; ಸರಕಿನ ಮೌಲ್ಯವನ್ನು ಅದರ ಉತ್ಪಾದನೆಗೆ 'ಸಾಮಾಜಿಕವಾಗಿ ಅಗತ್ಯವಾದ ದುಡಿಮೆಯ – ಕಾಲದ' ಆಧಾರದ ಮೇಲೆ ನಿರ್ಧರಿಸಲಾಗುತ್ತದೆ; ದುಡಿಮೆಗಾರಳು ಉತ್ಪಾದನಾ ಸಾಧನಗಳ (ಭೂಮಿ, ಕಾರ್ಖಾನೆ, ಯಂತ್ರ, ಇತ್ಯಾದಿ) ಒಡೆತನ ಹೊಂದಿರುವುದಿಲ್ಲ; ಜೀವನ ಹೊರೆಯಲು ದುಡಿಮೆಗಾರಳು ತನ್ನ ಒಂದೇ ಸರಕಾದ ದುಡಿಮೆಯ – ಶಕ್ತಿಯನ್ನು ಮಾರಿಕೊಳ್ಳಬೇಕು; ಸರಕುಗಳ ಮೌಲ್ಯವಿದ್ದಂತೆ ತನ್ನ ದುಡಿಮೆ – ಶಕ್ತಿಯ ಮೌಲ್ಯವು ಅದರ ಪುನರುತ್ಪತ್ತಿಗೆ, ಅಂದರೆ ಅವಳ ಜೀವನೋಪಾಯಕ್ಕೆ, ಆಗುವಷ್ಟಿರಬೇಕು; ಆದ್ದರಿಂದ ಅವಳಿಗೆ ದೊರೆಯುವ ಕೂಲಿಯು ಅವಳ ಜೀವನ ಹೊರೆಯಲು ಎಷ್ಟು ಅಗತ್ಯವೋ ಅದಕ್ಕೆ ಸಮನಾಗಿರುತ್ತದೆ; ಆದರೆ ನಿಜಕ್ಕೂ ಈ ಮೊತ್ತವನ್ನು ಅವಳ ದಿನದ ದುಡಿಮೆಯ ಒಂದು ಭಾಗದಲ್ಲೇ ಉತ್ಪಾದಿಸಿರುತ್ತಾಳೆ; ಅಂದರೆ, ಒಂದು ಭಾಗದ ದುಡಿಮೆ ಅವಳಿಗಾಗಿ ಮತ್ತು ಮಿಕ್ಕಿದ್ದು ಯಜಮಾನನಿಗಾಗಿ; ತಾನು ಪಡೆಯುವ ಕೂಲಿ ಮತ್ತು ತಾನು ಉತ್ಪಾದಿಸುವ ಸರಕಿನ ಮೌಲ್ಯದ ನಡುವಿನ ಮೊತ್ತವು ಮಿಗುತಾಯ ಮೌಲ್ಯವಾಗಿರುತ್ತದೆ; ಆ ಮಿಗುತಾಯ ಮೌಲ್ಯವು ಉತ್ಪಾದನಾ ಸಾಧನಗಳ ಮಾಲಿಕನಾದ ಯಜಮಾನನಿಗೆ ಸಂದಾಯವಾಗುತ್ತದೆ; ಈ ಮಿಗುತಾಯ ಮೌಲ್ಯವು ಮಾಲಿಕನ ಲಾಭ, ಬಡ್ಡಿ ಮತ್ತು ಬಾಡಿಗೆಗಳಿಗೆಲ್ಲಾ ಆಕರ; ಒಟ್ಟಿನಲ್ಲಿ, ಮಿಗುತಾಯ ಮೌಲ್ಯವು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ದುಡಿಯುವವರ ಶೋಷಣೆಯ ಮಾಪಕಸಾಧನವಾಗಿದೆ.

ಅಬ್ರಹಾಂ ಲಿಂಕನ್ ಎಂದಾದರೂ ಮಾರ್ಕ್ಸ್ ಬರಹವನ್ನು ಓದಿದ್ದನೋ ಇಲ್ಲವೋ ತಿಳಿಯದು; ಮಾರ್ಕ್ಸ್ ಸಹ ಲಿಂಕನ್‍ನ ಬರಹಗಳನ್ನು ಓದಿದ್ದನೆಂಬುದು ಅನುಮಾನ. ಆದರೆ ಅವರ ಪ್ರತಿಪಾದನೆಗಳಲ್ಲಿ ಸ್ವಲ್ಪ ಸಾಮ್ಯವಿದೆ. ಲಿಂಕನ್‍ನ ಬರಹಗಳಲ್ಲಿ ಕಾಣಬರುವ ಒಂದು ಭಾಗ ಹೀಗಿದೆ: " ದುಡಿಮೆಯ ಬೆಲೆಯನ್ನು ನೀಡದೆ ನಾವು ಯಾವ ಒಳ್ಳೆಯ ಸುಖವನ್ನೂ ಅನುಭವಿಸಲಾರೆವು. ಇರುವ ಎಲ್ಲ ಒಳ್ಳೆಯ ವಸ್ತುಗಳ ಉತ್ಪನ್ನವೂ ದುಡಿಮೆಯ ಫಲವೇ ಆಗಿರುತ್ತದೆ. ಹಾಗಿದ್ದಾಗ ಆ ವಸ್ತುಗಳ ಹಕ್ಕುದಾರರು ದುಡಿಮೆಗಾರರೇ ಆಗಿರಬೇಕೆಂಬುದು ಸಹಜ. ಆದರೆ ಪ್ರಪಂಚದಲ್ಲಿ ಏನು ಆಗಿಹೋಗಿದೆ, ನೋಡಿ. ಪ್ರಪಂಚದ ಎಲ್ಲ ಕಾಲಘಟ್ಟಗಳಲ್ಲೂ ಕೆಲವರು ದುಡಿಮೆ ಮಾಡಿದ್ದಾರೆ ಮತ್ತು ಅದರ ಬಹುಭಾಗದ ಫಲವನ್ನು ಯಾವ ದುಡಿಮೆಯನ್ನೂ ಮಾಡದವರು ಅನುಭೋಗಿಸುತ್ತಾ ಬಂದಿದ್ದಾರೆ. ಇದು ಶುದ್ಧ ತಪ್ಪು ಮತ್ತು ಅದು ಹಾಗೆ ಮುಂದುವರಿಯಕೂಡದು. ತನ್ನ ದುಡಿಮೆಯ ಎಲ್ಲ ಉತ್ಪನ್ನವನ್ನೂ ಪ್ರತಿಯೊಬ್ಬ ದುಡಿಮೆಗಾರನೂ ಪಡೆಯುವಂತಿರಬೇಕು; ಇಲ್ಲವೇ, ಕನಿಷ್ಠವೆಂದರೆ ಉತ್ಪನ್ನದ ಬಹುಭಾಗವನ್ನು ದುಡಿಮೆಗಾರನು ಪಡೆಯುವಂತೆ ಮಾಡುವುದು ಸರ್ಕಾರಗಳ ಉದ್ದೇಶವಾಗಿರಬೇಕು."

ಅಮೆರಿಕಾದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಒಂದು ವಿಶಿಷ್ಟ ಬಗೆಯ ಅನಕ್ಷರಸ್ಥ; ಆತ ಲಿಂಕನ್‍ನನ್ನು ಓದಿರುವುದಿಲ್ಲವೆಂದು ಪ್ರಮಾಣ ಮಾಡಬಹುದು. ಓದಿದರೂ ಅದನ್ನವನು ಒಪ್ಪಲಾರ, ಏಕೆಂದರೆ ಆತನ ದೇಶವು ಒಂದು ಶತಮಾನಕ್ಕೂ ಹೆಚ್ಚು ಕಾಲದಿಂದ ಪ್ರಪಂಚದ ಎಲ್ಲ ದೇಶಗಳ ಸಂಪತ್ತನ್ನೂ ಲೂಟಿ ಮಾಡುತ್ತಾ ಬಂದಿದೆ, ಅದಕ್ಕಾಗಿ ಹಲವು ದೇಶಗಳ ಸರ್ಕಾರಗಳನ್ನು ಉರುಳಿಸಿದೆ, ಎಷ್ಟೋ ದೇಶಗಳ ಚುನಾಯಿತ ಅಧ್ಯಕ್ಷರುಗಳನ್ನು ಕೊಂದಿದೆ, ಹತ್ತಾರು ದೇಶಗಳ ಮೇಲೆ ಕಾಲು ಕೆರೆದುಕೊಂಡು ಹೋಗಿ ಯುದ್ಧ ಮಾಡಿ ಆ ದೇಶಗಳನ್ನು ಭಗ್ನಗೊಳಿಸಿದೆ. ಆ ಪರಂಪರೆಯನ್ನು ಮುಂದುವರಿಸಲು ಟ್ರಂಪ್ ಬದ್ಧನಾಗಿರುವುದು ಜಗತ್ತಿಗೆ ತಿಳಿದಿದೆ.

ಮಾರ್ಕ್ಸ್‍ನ ಕಾಲದಲ್ಲಿ ಕಲ್ಪನಾ ಲೋಕದಲ್ಲಿ ವಿಹರಿಸುತ್ತಾ, ಸದ್ಯದಲ್ಲೇ ಎಲ್ಲವೂ ನ್ಯಾಯಬದ್ಧವಾಗಿ ನಡೆದು ಜಗತ್ತು ಸ್ವಚ್ಛ ಬೆಳದಿಂಗಳಲ್ಲಿ ನಳನಳಿಸುವುದೆಂದು ಭಾವಿಸಿದ್ದ ಕೆಲವು ಚಿಂತಕರಿದ್ದರು. ರಾಬರ್ಟ್ ಓವೆನ್ ಎಂಬಾತ ಬ್ರಿಟನ್ನಿನ ಅಂದಿನ ದೊರೆಗೆ ಒಂದು ಪತ್ರ ಬರೆದು "ಅನೂಚಾನವಾಗಿ ಪ್ರಪಂಚದಲ್ಲಿ ಅನ್ಯಾಯವು ತಾಂಡವವಾಡಿದೆ, ನಿನ್ನ ಆಳ್ವಿಕೆಯಲ್ಲಿ ಸರ್ವತ್ರ ಸುಖ–ಶಾಂತಿಗಳು ನೆಲೆಸುತ್ತವೆಂದು ಆಶಿಸುತ್ತೇನೆ" ಎಂದು ಭ್ರಮಿಸಿದ್ದ. ಇನ್ನೊಬ್ಬನಿದ್ದ, ಶಾರ್ಲ್ ಫೂರ್ಯೆ ಎಂದು ಅವನ ಹೆಸರು. ಫ್ರಾನ್ಸಿನವನು. ತಾನು ಮನೆಯಲ್ಲಿ ಕೂತಿರುವಾಗ ಯಾವುದೋ ಒಂದು ದಿನ ಧರ್ಮಪ್ರವರ್ತಕನೊಬ್ಬನು ಬಂದು ಹೇರಳ ಹಣವನ್ನು ದಾನ ಮಾಡಿ ಅವನ (ಅಂದರೆ, ಫೂರ್ಯೆಯ) ಕನಸಿನ ತತ್ವಗಳ ಆಧಾರದ ಮೇಲೆ ಸುಖೀ ಸಾಮ್ರಾಜ್ಯವನ್ನು ಸ್ಥಾಪಿಸಲು ನೆರವಾಗುತ್ತಾನೆಂಬ ಭಾವನೆಯಲ್ಲೇ ಮುಳುಗಿ ಜೀವನ ಸವೆಸಿದ. ನಮ್ಮ ಗಾಂಧೀಜಿ ಬಂಡವಳಿಗರೆಲ್ಲಾ ಸಮಾಜದ ಧರ್ಮದರ್ಶಿಗಳಾಗಿ ಸಮ – ಸಮಾಜದ ಸ್ಥಾಪನೆಗೆ ಕೈಜೋಡಿಸಬೇಕೆಂದು ಉಪನ್ಯಾಸಗಳನ್ನು ನೀಡಿದರು ಹಾಗೂ ಲೇಖನಗಳನ್ನು ಬರೆದರು. ಯಾವ ಧರ್ಮದರ್ಶಿಯೂ ಅವರ ಆಶಯಕ್ಕೆ ಸೊಪ್ಪು ಹಾಕಲಿಲ್ಲ. ಬಿರ್ಲಾ ಮತ್ತು ಬಜಾಜ್‍ಗಳು ಗಾಂಧೀಜಿಯ ವಾಸಕ್ಕೆ ಭವನಗಳನ್ನು ಬಿಟ್ಟುಕೊಡುವ ದೊಡ್ಡ ಮನಸ್ಸು ಮಾಡಿದರೇ ವಿನಾ ಮಿಗುತಾಯ ಮೌಲ್ಯದ ಒಂದು ಚಿಕ್ಕ ಕಾಸನ್ನು ದುಡಿಮೆಗಾರರಿಗೆ ಬಿಟ್ಟುಕೊಡಲಿಲ್ಲ. ಫ್ರಾನ್ಸಿನಲ್ಲಿ

## ನಾಳೆಯ ನೆಮ್ಮದಿಗಾಗಿ

ಸೂರ್ಯ ಜಾರಿದ
ಚಂದ್ರ ಕಾಣದ
ಕತ್ತಲ ಬದುಕಿನಲಿ
ಕುಂತು, ಕನಸುಗಳ ಕಟ್ಟಿ;
ಬಾಳಿನ ಬೆಳಕಿಗೆ
ದಾರಿ ಹುಡುಕುತ್ತಿರುವ ಮುದುಕ !

ಬೆಳಕಿಗಾಗಿ ಶ್ರಮಿಸಿ – ಶ್ರಮಿಸಿ
ಮುಪ್ಪು ಆವರಿಸಿದ್ದರೂ
ಕೋಲೂರಿ, ಮೇಲೆ ಏಳಲು
ಆಗಾಗ ಪ್ರಯತ್ನಿಸಿ ಬೀಳುತ್ತಿರುವ !!

ಸೋಲೊಪ್ಪದ ಮುದುಕ
ಛಲ ಬಿಡದೆ
ನಾಳೆಯ ನೆಮ್ಮದಿಗಾಗಿ
ತನ್ನ ಕಾಯಕ ಮಾಡುತ್ತಲೇ ಇರುವ !!!

**ಎಚ್. ಕೆ. ಕೊಟ್ರಪ್ಪ**, ಹರಿಹರ

ಸೇನ್ ಸಿಮೋನ್ ಎಂಬ ಇನ್ನೊಬ್ಬ ಕನಸುಗಾರನಿದ್ದ. ಅವನು ತಾನು ಪ್ರಕಟಿಸುತ್ತಿದ್ದ "ಗ್ಲೋಬ್" ಪತ್ರಿಕೆಯಲ್ಲಿ ೧೮೩೧ರ ನವೆಂಬರ್ ೨೮ರಂದು ಬರೆದ: "ಉನ್ನತ ವರ್ಗದ ಮಂದಿ ಕೈಚಾಚಿ ಆಸರೆ ನೀಡುವವರೆಗೆ ದುಡಿಯುವ ಮಂದಿ ಮೇಲ್‌ಸ್ತರಕ್ಕೆ ಏರಲಾರರು. ಈ ಉನ್ನತ ವರ್ಗದವರು ಕಾರುಣ್ಯಮೂರ್ತಿಗಳಾಗಿ ಸರಿಯಾದ ದಿಕ್ಕಿನಲ್ಲಿ ಹೆಜ್ಜೆಗಳನ್ನಿಡಬೇಕು."

ಅದಾನಿ, ಅಂಬಾನಿ, ಮಲ್ಯ, ಮಿತ್ತಲ್, ನೀರವ ಮೋದಿ, ಮುಂತಾದವರಿಗೆ ಸ್ವಾಮಿಗಳಿಂದ ಇಂತಹ ಉಪದೇಶ ಕೊಡಿಸಿ ನೋಡೋಣವೆ? ಉಪದೇಶ ನೀಡುವ ನೂರು ಮಂದಿ ಒಂದು ನಿಮಿಷದಲ್ಲಿ ಸಿಗುತ್ತಾರೆ: ಜಗ್ಗಿ ವಾಸುದೇವ, ರವಿಶಂಕರ ಗುರೂಜಿ, ನಿತ್ಯಾನಂದ, ಆದಿತ್ಯನಾಥ, ರಾಮಕೃಷ್ಣಾನಂದ, ಆಸಾರಾಂ ಬಾಪು, ಸಾಧ್ವಿ ಋತಂಭರಾ, ಯಾರು ಬೇಕೋ ಅವರನ್ನು ನರೇಂದ್ರ ಮೋದಿ ಆಯ್ದುಕೊಳ್ಳ ಬಹುದು. ಅವರೆಲ್ಲಾ ಅದಾನಿ ಮುಂತಾದವರಿಂದ ಕಸಿದುಕೊಂಡಾರು, ಆದರೆ ದುಡಿಯುವ ಜನರಿಗಂತೂ ಅದನ್ನು ಮುಟ್ಟಿಸುವುದಿಲ್ಲ. ಅಂತಹ ಮಹಾನ್ ಧರ್ಮ ಧುರಂಧರರು ಅವರೆಲ್ಲಾ. ಅಂಥವರೆಲ್ಲರ ಬಗ್ಗೆ ಮಾರ್ಕ್ಸ್ ೧೮೪೮ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಕಮ್ಯುನಿಸ್ಟ್ ಮ್ಯಾನಿಫೆಸ್ಟೋದಲ್ಲಿ ಬರೆದ: "ಸಮಾಜದ ಎಲ್ಲರನ್ನೂ ಉದ್ಧಾರ ಮಾಡುವ ತವಕ ಈ ಕನಸುಗಾರರಿಗೆ ಇದೆ. ಆದ್ದರಿಂದ ಎಲ್ಲರಲ್ಲೂ ಅವರು ತಮ್ಮ ನಿವೇದನೆ ಸಲ್ಲಿಸುತ್ತಾರೆ, ಆಳುವ ವರ್ಗಕ್ಕೆ ಸಹ ಅವರು ಮನವಿ ಮಾಡಿಕೊಳ್ಳುತ್ತಾರೆ; ಹೊಸ ಸಮಾಜವೇದದ ಘೋಷಣೆಗಾಗಿ ಕಾದು ಕುಳಿತುಕೊಳ್ಳುತ್ತಾರೆ. ಆದರೆ ರಾಜಕೀಯ, ವಿಶೇಷತಃ ಕ್ರಾಂತಿಕಾರಿ ರಾಜಕೀಯ ಕ್ರಿಯೆ, ಅವರ ನಿಷೇಧಕ್ಕೆ ಗುರಿಯಾಗುತ್ತದೆ. ಶಾಂತಿಯಿಂದ ಎಲ್ಲವನ್ನೂ ಸಾಧಿಸಬೇಕೆಂಬ ಆಶಯ ಅವರದು. ಅಲ್ಲೊಂದು ಇಲ್ಲೊಂದು ಪ್ರಯೋಗ ನಡೆಸಿ ಆಮೂಲಾಗ್ರ ಬದಲಾವಣೆ ತರಬಹುದೆಂಬ ಹುಸಿ ನಂಬಿಕೆ ಅವರದು." ನಮ್ಮಲ್ಲಿ ಈ ವಿಧದ ಹುಲುಸು ಬೆಳೆಯ ಪರಿಚಯ ಯಾರಿಗಿಲ್ಲ? ಎಲ್ಲಿ ದುಡಿಯುವ ಜನ ಹಿಂಸೆಯ ಹಾದಿ ಹಿಡಿದುಬಿಡುತ್ತಾರೋ ಎಂಬ ಅವರ ಅಪ್ರಕೃತ ಭಯವನ್ನು ಸದಾ ಹಂಚಿಕೊಳ್ಳುತ್ತಿರುತ್ತಾರೆ. ದುಡಿಯುವ ವರ್ಗವು ಹಿಂಸೆಗೆ ಗುರಿಯಾಗಿದೆಯೇ ವಿನಾ ಹಿಂಸೆಯನ್ನು ಯಾರ ಮೇಲೂ ಚಲಾಯಿಸುತ್ತಿಲ್ಲ. ಅಸ್ಪೃಶ್ಯತೆಗಿಂತಲೂ ಭೀಕರ ಹಿಂಸೆಯುಂಟೆ? ಬಾಲಿಕೆಯರ ಮೇಲಿನ ಲೈಂಗಿಕ ಹಿಂಸೆಯನ್ನು ಉತ್ತರ ಪ್ರದೇಶದ ಒಬ್ಬ ನಾಯಕ ಮಾಡಿದ್ದಾನೆಂದರೆ ಅದು ದುಡಿಯುವ ವರ್ಗವು ಎಸಗಿದ ಹಿಂಸೆಯಾಗುತ್ತದೆಯೇ? ಗುಲಾಮಗಿರಿಯನ್ನು ರೋಮ್‌ನಲ್ಲಿ ಉತ್ಪಾಟಿಸಿದ ಸ್ಪಾರ್ಟಕಸ್ ಹಿಂಸೆಯನ್ನು ಪ್ರಚೋದಿಸಲಿಲ್ಲ. ಸ್ವಾತಂತ್ರ್ಯಕ್ಕಾಗಿ ಕ್ರಾಂತಿಕಾರಿ ಹೋರಾಟ ನಡೆಸಲು ಮುಂದಾದ ಭಗತ್ ಸಿಂಗ್ ಮತ್ತು ಅವನ ಸಂಗಾತಿಗಳು ಹಿಂಸೆಗೆ ಮುಂದಾಗಲಿಲ್ಲ, ಬದಲಾಗಿ ಹಿಂಸೆಗೆ ತುತ್ತಾದರು. ಇಂತಹ ಪ್ರಸಂಗಗಳನ್ನು ಯೂರೋಪಿನಲ್ಲಿ ಹೇರಳವಾಗಿ ಕಂಡಿದ್ದ ಮಾರ್ಕ್ಸ್ ಒಮ್ಮೆ ಅವರ ಸಂಗಾತಿಗಳಿಗೆ ಬರೆದಿದ್ದ ಒಂದು ಪತ್ರದಲ್ಲಿ ಹೇಳಿದರು: "...ದುಡಿಯುವ ಜನ ತಮ್ಮ ಬಿಡುಗಡೆಗಾಗಿ ಮುಂದಾಗಲು ಸಾಕಷ್ಟು ಶಿಕ್ಷಣ ಮತ್ತು ಪರಿಣತಿ ಪಡೆದಿಲ್ಲವೆಂದು ಲಪಲಪಿಸುವವರೊಡನೆ ಕೈಜೋಡಿಸಲು ನಾವು ಮುಂದಾಗುವಂತಿಲ್ಲ. ಮೇಲ್‌ಸ್ತರದ ಬಂಡವಳಿಗರಿಂದ ಅಂತಹ ಯಾವ ನಿರೀಕ್ಷೆಯನ್ನೂ ನಾವು ಇಟ್ಟುಕೊಳ್ಳುವುದು ಸಾಧುವಲ್ಲ." ಮಾರ್ಕ್ಸ್ ಮತ್ತು ಏಂಗೆಲ್ಸ್ ದುಡಿಯುವ ವರ್ಗವನ್ನು "ಇತಿಹಾಸವನ್ನು ನಿರ್ಮಾಣ ಮಾಡುವ ಪಡೆ" ಎಂದು ಬಣ್ಣಿಸಿದ್ದರು. ಆಧುನಿಕ ಸಾಮಾಜಿಕ ಕ್ರಾಂತಿಗೆ ದುಡಿಯುವ ಜನರೇ ಹರಿಕಾರರೆಂಬುದು ಅವರ ನಿಶ್ಚಿತ ನಿಲುವಾಗಿತ್ತು.

ಹಾಗಿದ್ದರೆ, ಇತಿಹಾಸದ ತತ್ವಶಾಸ್ತ್ರ ಯಾವುದಾಗಬೇಕು? ಆಕಸ್ಮಿಕವಾಗಿ ಮನುಕುಲದ ವಿಮೋಚನೆ ನಡೆದೀತೆ? ಅಥವಾ ಚಾರಿತ್ರಿಕ ಬದಲಾವಣೆಗಳು ಯಾವುವೋ ಚಿಂತನ ಮುಕ್ತಾಫಲಗಳಿಂದ ಉಂಟಾಗುತ್ತವೆಯೋ? ಉಪನಿಷತ್ತು ಹೀಗೆ ಹೇಳಿದೆ, ಗೀತೆ ಹಾಗೆ ಹೇಳಿದೆ, ಬಸವಣ್ಣ ಗಂಭೀರವಾಗಿ ನುಡಿದಿದ್ದಾರೆ: ಆದ್ದರಿಂದ ದುಡಿಯುವ ಜನರಿಗೆ ಸ್ವರ್ಗ ಮೂರು ಗೇಣಿನಷ್ಟು ಮಾತ್ರ ಉಳಿದಿದೆ ಎನ್ನೋಣವೆ? ಅವರು ಹೇಳಿರುವುವೆಲ್ಲಾ ಮನನೀಯ, ಆದರೆ ಅದಷ್ಟರಿಂದಲೇ ಬದಲಾವಣೆ ಆಗಲಾರದು, ಅಥವಾ ಯಾರೋ ಧೀರೋದಾತ್ತ ವ್ಯಕ್ತಿಯೊಬ್ಬ ಅವತರಿಸಿ ಬಂದು ಹೊಸ ಸಮಾಜದ ಇತಿಹಾಸ ನಿರ್ಮಿಸಬಹುದೆ? ಧರ್ಮಕ್ಕೆ ಗ್ಲಾನಿಯುಂಟಾದಾಗೆಲ್ಲಾ ಅವತರಿಸಿ ಬಂದು ದುಷ್ಟರನ್ನು ಬಡಿದುಹಾಕಿ ಶಿಷ್ಟರನ್ನು ರಕ್ಷಿಸುವುದಾಗಿ ಗೀತೆಯಲ್ಲಿ ಆಶ್ವಾಸನೆ ನೀಡಿದ ಶ್ರೀ ಭಗವಾನನು ಇಂದು ಥಟಕ್ಕನೆ ಬಂದು ಫ್ಯಾಸಿಸ್ಟ್ ದುರಾತ್ಮರನ್ನು ಸದೆಬಡಿಯುತ್ತಾನೆಂದು ಕೈಕಟ್ಟಿ ಜಪ ಮಾಡುವುದು



ಹಿತವೇ? ಇಂಗ್ಲೆಂಡಿನ ಕಾರ್ಲೈಲ್ ಪ್ರಕಾರ ಚರಿತ್ರೆಯ ನಿರ್ಮಾತೃಗಳು ಯಾರೋ ಕೆಲವು ಧೀರೋದಾತ್ತ ಜೀವಿಗಳು ಅಥವಾ ಹೀರೋಗಳು.

ಇಂತಹ ಕಟ್ಟುಕತೆಗಳಿಗೆ ಮತ್ತು ಭ್ರಾಂತಿಗಳಿಗೆ ಮಾರ್ಕ್ಸ್ ಎಂದೂ ಸೊಪ್ಪು ಹಾಕಲಿಲ್ಲ. ಇತಿಹಾಸದಲ್ಲಿ ಚಲನೆಗೆ ಮೂಲ ಆಸರೆ ದೊರೆಯುವುದು ಸಮಾಜದ ಆರ್ಥಿಕ ಶಕ್ತಿಗಳಿಂದಲೇ, ಎಂಬುದು ಅವನ ತೀರ್ಮಾನ. ಬಂಡವಾಳಶಾಹಿಯ ಉಗಮದ ಮುಂಚಿನ ಎಲ್ಲ ಸಾಮಾಜಿಕ ರಚನೆಗಳೂ, ಬುಡಕಟ್ಟು ವ್ಯವಸ್ಥೆ – ಗುಲಾಮಗಿರಿ – ಊಳಿಗಮಾನ್ಯ ಪ್ರಭುತ್ವ, ಇತ್ಯಾದಿ, ಅಂದಂದಿನ ಆರ್ಥಿಕ ಶಕ್ತಿಗಳ ನಡುವಿನ ಸಂಘರ್ಷಗಳಿಂದಲೇ ಗುಣಾತ್ಮಕ ಬದಲಾವಣೆ ಹೊಂದಿದವು. ಇನ್ನು ಮುಂದೆಯೂ ಬದಲಾವಣೆ ಜರುಗುವುದು ಹಾಗೆಯೇ. ಯಾವುದೇ ನಾಗರಿಕತೆಯಲ್ಲೂ ಅರ್ಥಶಾಸ್ತ್ರ, ರಾಜಕೀಯ, ಕಾನೂನು, ಮತಧರ್ಮ, ಶಿಕ್ಷಣ, ಇತ್ಯಾದಿಗಳು ಪೂರ್ಣವಾಗಿ ಸ್ವತಂತ್ರವಾದ ಘಟಕಗಳಲ್ಲ. ಅವುಗಳ ನಡುವೆಲ್ಲಾ ಪರಸ್ಪರ ಸಂಬಂಧಗಳಿವೆ. ಅವೆಲ್ಲವೂ ಒಂದರಮೇಲೊಂದು ಪ್ರಭಾವ ಬೀರುತ್ತವೆ ಮತ್ತು ಆರ್ಥಿಕ ಸಂಬಂಧಗಳು ಮಹತ್ತರ ಪ್ರಭಾವ ಬೀರುತ್ತವೆ. ಉತ್ಪಾದಕರಾಗಿ ಮಾನವ ಸಂಬಂಧಗಳು ಎಂಥವು ಎಂಬುದು ಮೂಲಭೂತ ವಿಚಾರ. ಅಂದರೆ, ಉತ್ಪಾದನೆಯ ವಿಧಾನ ಯಾವುದು, ಉತ್ಪಾದನಾ ಸಾಧನಗಳು ಎಂಥವು, ಆ ಸಾಧನಗಳು ಯಾರ ಒಡೆತನದಲ್ಲಿವೆ, ಎಂಬುವೆಲ್ಲಾ ಸಮಾಜದ ಆರ್ಥಿಕ ಸಂರಚನೆಯಲ್ಲಿನ ಪ್ರಧಾನ ಅಂಶಗಳು. ನನ್ನ ಕೈಮಗ್ಗ ನನ್ನದೋ ಅಥವಾ ನಾನು ಬೇರೆಯವರ ಮಾಲಿಕತ್ವದಲ್ಲಿರುವ ಕೈಮಗ್ಗದಲ್ಲಿ ದುಡಿಯುತ್ತೇನೋ? ಆ ಕೈಮಗ್ಗವು ಒಬ್ಬ ವ್ಯಕ್ತಿಗೆ ಸೇರಿದೆಯೋ ಅಥವಾ ಅದು ಸಮುದಾಯದ ಆಸ್ತಿಯೋ? ಇಂತಹ ಹತ್ತಾರು ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡಾಗ 'ಸಾಮಾಜಿಕ ಪ್ರಜ್ಞೆ' ಎಂಬುದರ ಲಕ್ಷಣವು ತಿಳಿಯುತ್ತದೆ. ಅದು ಸ್ಥಗಿತಗೊಂಡ ಪ್ರಜ್ಞೆಯಲ್ಲ. "ನಮ್ಮ ಅಸ್ತಿತ್ವವು ನಮ್ಮ ಪ್ರಜ್ಞೆಯಿಂದ ರೂಪುಗೊಂಡಿಲ್ಲ, ಬದಲಾಗಿ ನಮ್ಮ ಪ್ರಜ್ಞೆಯು ನಮ್ಮ ಅಸ್ತಿತ್ವದಿಂದ ರೂಪುಗೊಂಡಿದೆ." ಸಾಮಾನ್ಯತಃ ಈ ನಿರೂಪಣೆಯು ಎಲ್ಲ ನಾಗರಿಕತೆಯ ಹಂತಗಳಿಗೂ ಅನ್ವಯವಾಗುತ್ತದೆ ಮತ್ತು ಈ ತತ್ವವು ಇತಿಹಾಸದ ಯಾವುದೇ ಹಂತದ ವಿಶ್ಲೇಷಣೆ ಮತ್ತು ಅರ್ಥೈಸುವಿಕೆಗೆ ಸಹಾಯ ಒದಗಿಸುತ್ತದೆ. ಚಿಂತನೆ, ಆಕಾಂಕ್ಷೆ, ವ್ಯಗ್ರತೆ, ಸಹನೆ, ರೋಷ, ಇತ್ಯಾದಿಗಳು ಒಬ್ಬ ವ್ಯಕ್ತಿಯ ಪ್ರಜ್ಞೆಯ ಲಕ್ಷಣಗಳೆಂಬುದರಲ್ಲಿ ಸಂಶಯವಿಲ್ಲ. ಅವುಗಳ ಪ್ರಭಾವವು ಬೃಹತ್ ಸಮಾಜದ ಮೇಲೆ ಕಿಂಚಿತ್ ಆಗಿ ವ್ಯಕ್ತವಾಗಬಹುದೇ ವಿನಾ ಅದರ ಆಮೂಲಾಗ್ರ ಬದಲಾವಣೆಗೆ ಪೂರ್ಣ ಸಾಮಗ್ರಿಯಲ್ಲ. ಸರ್ವವ್ಯಾಪಕವಾದ್ದು ಆರ್ಥಿಕ ಸಂರಚನೆ ಮತ್ತು ಸಂಬಂಧಗಳ ಸ್ವರೂಪ; ಸಮಾಜದ ಗುಣಾತ್ಮಕ ಬದಲಾವಣೆಗೆ ಅವೇ ಮೂಲಭೂತ ಸಾಮಗ್ರಿ. ಇರುವ ವ್ಯವಸ್ಥೆಯಲ್ಲೇ ಒಂದಷ್ಟು ಸುಧಾರಣೆಗಳನ್ನು ತಂದು ಜೀವನವನ್ನು ತುಸು ಹಸನಾಗಿಸಬಹುದು ಇಲ್ಲವೇ ಇರುವುದನ್ನು ಇನ್ನೂ ಹಿಂದಕ್ಕೆ ಕೊಂಡೊಯ್ದು ಸಮುದಾಯಕ್ಕೆ ಹಿಂಸೆಯ ಅನುಭವವನ್ನು ಹೆಚ್ಚಿಸಬಹುದು. ಅದು ಪರಿಮಾಣಾತ್ಮಕ ಬದಲಾವಣೆ. ಒಂದು ಶಾಲೆ, ಒಂದು ಸೈಕಲ್, ಒಪ್ಪತ್ತಿನೂಟ, ಇವು ದೊರೆತರೆ ಸ್ವಾಗತಾರ್ಹವಾದ ಬೆಳವಣಿಗೆಯೇ ಸರಿ. ಆದರೆ ಯಾರ ಮರ್ಜಿಯೂ ಇಲ್ಲದೆ ಸಮಾನ ಅವಕಾಶ ಮತ್ತು ಸಮಾನ ಸೌಲಭ್ಯ ಪಡೆಯುವುದು ಗುಣಾತ್ಮಕ ಬದಲಾವಣೆ, ಕ್ರಾಂತಿಕಾರಿ ಬದಲಾವಣೆ. ಉತ್ಪಾದನಾ ಸಾಧನಗಳು ಕೆಲವು ವ್ಯಕ್ತಿಗಳಲ್ಲಿ ಕೇಂದ್ರೀಕೃತ ವಾಗಿರುವುದರ ಜಾಗದಲ್ಲಿ ಅವೆಲ್ಲಾ ಇಡೀ ಸಮುದಾಯದ ಸ್ವಾಧೀನದಲ್ಲಿರುವುದು ಸಹ ಕ್ರಾಂತಿಕಾರಿ ಬದಲಾವಣೆಯೇ. ಅದನ್ನು ಸಾಧಿಸಿ ನೂತನ ಇತಿಹಾಸದ ಮೊದಲ ಅಧ್ಯಾಯವನ್ನು ಬರೆಯುವ ಸಾಮರ್ಥ್ಯ ಮತ್ತು ಜವಾಬ್ದಾರಿ ಇರುವುದು ದುಡಿಯುವ ವರ್ಗಕ್ಕೆ.

ಕ್ರಾಂತಿಯೆಂದರೆ ಒಂದು ಗುಣಾತ್ಮಕ ಬದಲಾವಣೆಯೇ ವಿನಾ ಹಿಂಸೆಯ ಪ್ರಕರಣವಲ್ಲ. ಇನ್ನೂ ನಿಖರವಾಗಿ ಹೇಳಬೇಕೆಂದರೆ ದುಡಿಯುವ ವರ್ಗದ ಮೇಲಿನ ಹಿಂಸೆಯ ಪರಿಸಮಾಪ್ತಿಯತ್ತ ದಾಪುಗಾಲು ಹಾಕಲು ಕ್ರಾಂತಿಯು ಅನಿವಾರ್ಯ. ಭಗತ್ ಸಿಂಗ್‌ನ ಮಾತುಗಳಲ್ಲಿ ಹೇಳುವುದಾದಾರೆ, "ಕ್ರಾಂತಿಯು ಸದಾಕಾಲಕ್ಕೂ ಮುನ್ನಡೆಯುತ್ತಿರ ಬೇಕು. ಪ್ರತಿಗಾಮಿ ಶಕ್ತಿಗಳಿಂದ ಅದನ್ನು ಹಿಮ್ಮೆಟ್ಟಿಸಲು ಸಾಧ್ಯವಾಗಕೂಡದು. ಮಾನವ ಜನಾಂಗದ ಆತ್ಮವು ಕ್ರಾಂತಿಯಿಂದ ಪ್ರಫುಲ್ಲವಾಗಬೇಕು. ಹಳೆಯ ವ್ಯವಸ್ಥೆ ಬದಲಾಗಬೇಕು, ಹೊಸ ವ್ಯವಸ್ಥೆಯು ಆವಿರ್ಭಾವವಾಗಬೇಕು; ಒಂದೇ ಪದ್ಧತಿಯಿಂದ ವಿಶ್ವವು ಭ್ರಷ್ಟವಾಗಕೂಡದು. ಈ ಅರ್ಥದಲ್ಲಿ ನಾವು ಕೊಡುವ ಘೋಷಣೆ 'ಕ್ರಾಂತಿ ಚಿರಾಯುವಾಗಲಿ' ಎಂಬುದು."

ಭಗತ್ ಸಿಂಗ್ ನ್ಯಾಯಾಲಯದಲ್ಲಿ ೧೯೨೯ರ ಜೂನ್ ೬ರಂದು ಸಮಗ್ರವಾದ ಮತ್ತು ಸೈದ್ಧಾಂತಿಕವಾಗಿ ಗಟ್ಟಿಯಾದ ಒಂದು ಹೇಳಿಕೆಯನ್ನು ನೀಡಿದ್ದ. ಅದರ ಒಂದು ಭಾಗವು ಮನೋಜ್ಞವಾಗಿದೆ, ಪ್ರಸ್ತುತವಾಗಿದೆ ಮತ್ತು ನಿರ್ದೇಶಕ ಸೂತ್ರದಂತಿದೆ. ಅದನ್ನು ಮನನ ಮಾಡುವುದು ಕಾರ್ಲ್ ಮಾರ್ಕ್ಸ್‌ನ ಚಿಂತನೆ, ಕ್ರಿಯೆ ಮತ್ತು ಸಿದ್ಧಾಂತವನ್ನು ಸ್ಫುಟವಾಗಿ ತಿಳಿಯಲು ನಮಗಿರುವ ಒಂದು ಮಾರ್ಗ:

"ಕೆಳಗಿನ ನ್ಯಾಯಾಲಯದಲ್ಲಿ ನಮ್ಮ ಕ್ರಾಂತಿಯ ಕಲ್ಪನೆಯಾದರೂ ಏನೆಂಬ ಪ್ರಶ್ನೆಯನ್ನು ಹಾಕಲಾಗಿತ್ತು. ಅದಕ್ಕೆ ನಮ್ಮ ಉತ್ತರ ಇದು: 'ಕ್ರಾಂತಿ ಎಂದರೆ ರಕ್ತಗೆಂಪಿನ ಸಂಘರ್ಷವೇ ಆಗಿರಬೇಕೆಂಬ ನಿಯಮವೇನೂ ಇಲ್ಲ. ವೈಯಕ್ತಿಕ ಜಿದ್ದಿಗೂ ಅಲ್ಲಿ ಅವಕಾಶವಿಲ್ಲ. ಕ್ರಾಂತಿಯು ಬಾಂಬು ಮತ್ತು ಪಿಸ್ತೂಲುಗಳ ಆರಾಧನೆಯಲ್ಲ. ನಮ್ಮ ದೃಷ್ಟಿಯಲ್ಲಿ 'ಕ್ರಾಂತಿ' ಎಂದರೆ ಸ್ಪಷ್ಟವಾಗಿ ಅನ್ಯಾಯದ ಬುನಾದಿಯ ಮೇಲೆ ರಚಿತವಾಗಿರುವ ಇಂದಿನ ವ್ಯವಸ್ಥೆ ಬದಲಾಗಬೇಕು ಎಂದರ್ಥ. ಉತ್ಪಾದಕರು ಅಥವಾ ದುಡಿಮೆಗಾರರು ಸಮಾಜದ ಅತ್ಯಂತ ಅವಶ್ಯಕ ಅಂಗವಾಗಿದ್ದಾಗ್ಯೂ ಶೋಷಕರಿಂದ ವಂಚಿಸಲ್ಪಡುತ್ತಿದ್ದಾರೆ. ಅವರ ದುಡಿಮೆಯ ಫಲ ಅವರಿಗೆ ದಕ್ಕುತ್ತಿಲ್ಲ; ಅವರ ಅತಿ ಸಾಮಾನ್ಯವಾದ ಹಕ್ಕುಗಳನ್ನು ಅವರಿಂದ ಕಿತ್ತುಕೊಳ್ಳಲಾಗಿದೆ. ಎಲ್ಲರಿಗೂ ಬೇಕಾದ ಧಾನ್ಯಗಳನ್ನು ಬೆಳೆಯುವ ರೈತ ತನ್ನ ಕುಟುಂಬದೊಡನೆ ಹಸಿವಿನಿಂದ ನರಳುತ್ತಿದ್ದಾನೆ; ಇಡೀ ಜಗತ್ತಿನ ಮಾರುಕಟ್ಟೆಯನ್ನು ತಾನು ನೇಯುವ ಬಟ್ಟೆಯಿಂದ ತುಂಬುವ ನೇಯ್ಗೆಗಾರ ತನ್ನ ಮತ್ತು ತನ್ನ ಮಕ್ಕಳ ಶರೀರವನ್ನು ಮುಚ್ಚಲು ಬೇಕಾದ ಕನಿಷ್ಠವಾದ ಬಟ್ಟೆಯನ್ನೂ ಪಡೆದಿಲ್ಲ. ಮನೆ ಕಟ್ಟುವವರು, ಕಮ್ಮಾರರು ಮತ್ತು ಬಡಗಿಗಳು ಭವ್ಯವಾದ ಸೌಧಗಳನ್ನೇ ಕಟ್ಟುತ್ತಿದ್ದಾರಾದರೂ ಕೊಳಚೆ ಪ್ರದೇಶಗಳಲ್ಲಿ ಜಾತಿಭ್ರಷ್ಟರಾಗಿ ಉಳಿದಿದ್ದಾರೆ. ಸಮಾಜದ ಪರತಂತ್ರ ಜೀವಿಗಳಾದ ಬಂಡವಾಳಿಗರು ಮತ್ತು ಶೋಷಕರು ಮನಸೋ ಇಚ್ಛೆಯಂತೆ ಮಿಲಿಯಗಟ್ಟಲೆ ಹಣವನ್ನು ಚೆಲ್ಲಬಲ್ಲರು. ಈ ಭಯಂಕರ ಅಸಮತೆಗಳೂ ಬಲಾತ್ಕಾರವಾಗಿ ಸೆಳೆಯಲ್ಪಟ್ಟಿರುವ ಅವಕಾಶಗಳ ಅಸಮಾನತೆಯೂ ಅಸ್ತವ್ಯಸ್ತತೆಗೆ ಹಾದಿಮಾಡಿಕೊಟ್ಟೇ ತೀರುತ್ತವೆ. ಈ ರೀತಿಯ ವ್ಯವಸ್ಥೆ ಬಹುಕಾಲ ಉಳಿಯಲಾರದು. ಸಮಾಜದ ವ್ಯವಸ್ಥೆಯಲ್ಲಿ ಇಂದು ಕಾಣಬರುವ ಮೋಜು ಅಗ್ನಿಪರ್ವತದ ಅಂಚಿನಲ್ಲಿ ಇರುವ ಮೋಜೆಂಬುದು ಸ್ವಯಂಸಿದ್ಧವಾಗಿದೆ.

ಈ ನಾಗರಿಕತೆಯ ಭವ್ಯಕಟ್ಟಡವನ್ನು ಸಕಾಲದಲ್ಲಿ ಉಳಿಸದಿದ್ದರೆ ಅದು ಕುಸಿದು ಭಗ್ನವಾಗುವುದು ಖಂಡಿತ. ಆದ್ದರಿಂದ ಆಮೂಲಾಗ್ರವಾದ ಬದಲಾವಣೆ ಅತ್ಯವಶ್ಯಕ. ಅದನ್ನು ತಿಳಿದವರ ಕರ್ತವ್ಯ ಸಮಾಜವನ್ನು ಸಮಾಜವಾದಿ ಆಧಾರದ ಮೇಲೆ ಪುನರ್‌ರಚಿಸುವುದಾಗಿದೆ. ಇದನ್ನು ಮಾಡಿದ ಹೊರತು, ಅರ್ಥಾತ್ ಮಾನವನನ್ನು ಮಾನವ ಹಾಗೂ ಒಂದು ರಾಷ್ಟ್ರವನ್ನು ಇನ್ನೊಂದು ರಾಷ್ಟ್ರವು ಶೋಷಿಸುವುದನ್ನು ಅಂತ್ಯಗೊಳಿಸದ ಹೊರತು, ಮಾನವ ಜನಾಂಗವನ್ನು ಇಂದು ಬಾಧಿಸುತ್ತಿರುವ ಪಡಿಪಾಟು ಮತ್ತು ಕಗ್ಗೊಲೆಗಳನ್ನು ತಡೆಯಲಾಗುವುದಿಲ್ಲ. ಇಂದಿನ ವ್ಯವಸ್ಥೆಯ ಹಿನ್ನೆಲೆಯಲ್ಲಿ ಯುದ್ಧವನ್ನು ನಿರ್ನಾಮಗೊಳಿಸುವ ಹಾಗೂ ಶಾಂತಿಯ ನವೋದಯವನ್ನು ಸೃಷ್ಟಿಸುವ ಎಲ್ಲ ಮಾತುಗಳೂ ಅನಾಚ್ಛಾದಿತ ಕಪಟತನದ ಮಾತುಗಳೇ ಆಗುತ್ತವೆ.

'ಕ್ರಾಂತಿ' ಎಂದರೆ ನಮ್ಮ ಕಲ್ಪನೆಯಲ್ಲಿ ಅಂತಿಮವಾಗಿ ಇಂತಹ ಆಘಾತಗಳಿಗೆ ತುತ್ತಾಗದಂತಹ ಸಮಾಜ ವ್ಯವಸ್ಥೆಯೊಂದರ ನಿರ್ಮಾಣ. ಅಲ್ಲಿ ದುಡಿಮೆಗಾರನ ಸಾರ್ವಭೌಮತ್ವವನ್ನು ಎಲ್ಲರೂ ಮಾನ್ಯ ಮಾಡುತ್ತಾರೆ. ಬಂಡವಾಳಶಾಹಿ ಪದ್ಧತಿ ಮತ್ತು ಸಾಮ್ರಾಜ್ಯಶಾಹಿ ಯುದ್ಧಗಳ ಪಿಡುಗಿನಿಂದ ಮಾನವಜನಾಂಗಕ್ಕೆ ಮುಕ್ತಿ ದೊರಕಬೇಕು; ಅದು ಜಾಗತಿಕ ಒಕ್ಕೂಟದ ಕೊಡುಗೆಯಾಗಿರುತ್ತದೆ.

ಇದು ನಮ್ಮ ಆದರ್ಶ. ನಮ್ಮ ಸ್ಫೂರ್ತಿಗೆ ಈ ಸಿದ್ಧಾಂತವೇ ಜೀವಕೊಟ್ಟಿರುವುದು. ನಾವು ಸಾಕಷ್ಟು ಪ್ರಭಾವಶಾಲಿಯೂ ಪ್ರಬಲವೂ ಆದ ಎಚ್ಚರವನ್ನು ನೀಡಿದ್ದೇವೆಂದು ಭಾವಿಸುತ್ತೇವೆ.

ಅದಕ್ಕೇನಾದರೂ ಅಸಡ್ಡೆಯ ಪ್ರತಿಕ್ರಿಯೆಯನ್ನು ತೋರಿಸಿ ಇಂದಿನ ಸರ್ಕಾರದ ವ್ಯವಸ್ಥೆಯು ಮುಂದುವರಿಯುವಂತಾದರೆ ಮಹಾಪೂರದಂತೆ ಬೆಳೆಯುತ್ತಿರುವ ಸ್ವಾಭಾವಿಕ ಶಕ್ತಿಗಳಿಗೆ ಅಡಚಣೆಯನ್ನುಂಟುಮಾಡಿದಂತೆಯೇ ಸರಿ. ಆ ಅಡಚಣೆಗಳನ್ನು ಕಿತ್ತೊಗೆಯಲು ಒಂದು ಉಗ್ರವಾದ ಹೋರಾಟವನ್ನೇ ನಡೆಸಬೇಕಾಗುತ್ತದೆ. ಕ್ರಾಂತಿಯ ಆದರ್ಶವು ಪರಿಪೂರ್ಣವಾಗಿ ನೆರವೇರ ಬೇಕಾದರೆ ದುಡಿಯುವ ವರ್ಗದ ಅಧಿಕಾರ ಅಸ್ತಿತ್ವಕ್ಕೆ ಬರಬೇಕು. ಕ್ರಾಂತಿಯು ಮಾನವ ಜನಾಂಗದ ಪ್ರಶ್ನಾತೀತವಾದ ಹಕ್ಕು. ಸ್ವಾತಂತ್ರ್ಯವು ಎಂದೂ ಕ್ಷಯವಾಗದ ಆಜನ್ಮಸಿದ್ಧ ಹಕ್ಕು. ಸಮಾಜದ ನಿಜವಾದ ಆಧಾರಸ್ತಂಭ ದುಡಿಮೆ. ದುಡಿಮೆಗಾರರ ಅಂತಿಮ ಗುರಿ ಜನತೆಯ ಸಾರ್ವಭೌಮತ್ವ."

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ ಬೆಂಗಳೂರು – ೮೫




ನವಕರ್ನಾಟಕ ಪ್ರಕಟಿಸಿರುವ 'ಖೋತಿ ವಿರುದ್ಧದ ಹೋರಾಟ' (ಮೂಲ : ಚಂದ್ರಕಾತ ಅಧಿಕಾರಿ, ಕನ್ನಡಕ್ಕೆ : ಡಾ|| ಎನ್. ಗಾಯತ್ರಿ) ಕೃತಿಯನ್ನು ದಿನಾಂಕ ೧೪-೦೪-೨೦೧೮ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಡಾ|| ಜಿ. ರಾಮಕೃಷ್ಣ ಅವರ ಅಧ್ಯಕ್ಷತೆಯಲ್ಲಿ ಶ್ರೀ ಮಾವಳ್ಳಿ ಶಂಕರ್ ಅವರು ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಡಾ|| ಸಿದ್ದನಗೌಡ ಪಾಟೀಲ, ಶ್ರೀ ಮಾವಳ್ಳಿ ಶಂಕರ್, ಡಾ|| ಜಿ. ರಾಮಕೃಷ್ಣ, ಶ್ರೀ ಶ್ರೀಪ್ರಕಾಶ್ ಅಧಿಕಾರಿ (ಲೇಖಕರ ಪುತ್ರ), ಶ್ರೀಮತಿ ಅನಸೂಯ ಕಾಂಬಳೆ (ಕೃತಿ ಪರಿಚಯಿಸಿದವರು) ಮತ್ತು ಡಾ|| ಎನ್. ಗಾಯತ್ರಿ ಉಪಸ್ಥಿತರಿದ್ದರು.





# ಕಾವೇರಿ ನಿರ್ವಹಣಾ ಮಂಡಳಿ

ಆಯಾ ರಾಜ್ಯಗಳಲ್ಲಿ ಪ್ರಾದೇಶಿಕ ಪಕ್ಷಗಳು ಪ್ರಾಮುಖ್ಯತೆ ಪಡೆದ ಕಾಲದವರೆಗೂ ವಿವಾದಗಳಿದ್ದರೂ ಸಹ ಅವುಗಳನ್ನು ಸೌಹಾರ್ದಯುತವಾಗಿ ಬಗೆಹರಿಸಿಕೊಳ್ಳಲಾಗುತ್ತಿತ್ತು. ೧೯೯೦ರ ನಂತರದ ಬೆಳವಣಿಗೆಗಳನ್ನು ಗಮನಿಸಿದರೆ ಜಲ ವಿವಾದಗಳಿಗೆ ಸಂಬಂಧಪಟ್ಟಂತೆ ಅಧಿಕಗೊಂಡ ಮಧ್ಯಪ್ರವೇಶಗಳು ಹೆಚ್ಚುಹೆಚ್ಚು ಸಮಸ್ಯೆಗಳಿಗೆ ಕಾರಣವಾಗಿವೆ. ತಮಿಳುನಾಡು ರಾಜ್ಯವು ಪರಂಪರಾಗತ ಸ್ವಾಮ್ಯದ ಹಕ್ಕಿನ ಅಡಿ ಫಲವನ್ನು ಅನುಭವಿಸುತ್ತಾ ಒಡಂಬಡಿಕೆಯ ನಿಬಂಧನೆಗಳನ್ನು ಉಲ್ಲಂಘಿಸಿ ತನ್ನ ಬೇಸಾಯದ ಭೂಪ್ರದೇಶವನ್ನು ವಿಸ್ತರಿಸಿದೆ. ತಮಿಳುನಾಡು ರಾಜ್ಯವು ಒಡಂಬಡಿಕೆಯ ಪಾಲುದಾರನಾಗಿ ಅದೇ ಒಡಂಬಡಿಕೆಯನ್ನು ಉಲ್ಲಂಘಿಸಿದೆ. ನದಿಪಾತ್ರದ ಮೇಲಿನ ರಾಜ್ಯಗಳ ಹಿತಾಸಕ್ತಿಗೆ ವಿರುದ್ಧವಾಗಿ ಈ ರಾಜ್ಯವು ತನ್ನದೇ ತಪ್ಪುಗಳಿಂದಾಗಿ ಲಾಭ ಪಡೆದುಕೊಳ್ಳಲಾರದು.

❑ ಎಮ್. ನಾರಾಯಣಭಟ್

ನಮಗೆ ಲಭ್ಯವಿರುವ ನೈಸರ್ಗಿಕ ಸಂಪನ್ಮೂಲಗಳಲ್ಲಿ ನೀರು ಮಾತ್ರ ಅಗಾಧ ಪ್ರಮಾಣದಲ್ಲಿ ದೊರಕುತ್ತದೆ. ಅದರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕೊರತೆ ಉಂಟಾದರೆ ಭೀಕರ ಪರಿಣಾಮಗಳು ಸಂಭವಿಸುತ್ತವೆ. ಈಗಾಗಲೇ ಜನಸಂಖ್ಯೆಯಲ್ಲಿ ತೀವ್ರತರವಾದ ಏರಿಕೆ, ಕ್ಷಿಪ್ರ ರೀತಿಯಲ್ಲಿ ಜರುಗುತ್ತಿರುವ ಕೈಗಾರಿಕೀಕರಣ ಮತ್ತಿತರ ತತ್ಸಂಬಂಧಿತ ಆಗುಹೋಗುಗಳಿಂದಾಗಿ ನೀರಿನ ಕೊರತೆ ವಿವಿಧ ಬಗೆಯಲ್ಲಿ ಕಾಣಬರುತ್ತಿದೆ. ಒಮ್ಮೆ ಬೆಂಜಮಿನ್ "ನೀರು ಎಷ್ಟು ಅತ್ಯಮೂಲ್ಯವಾದುದು; ಅದಿಲ್ಲದೆ ಎಂತೆಂತಹ ಭೀಕರ ಪರಿಣಾಮಗಳು ಸಂಭವಿಸುತ್ತವೆ ಎಂಬುದು ನಮ್ಮ ಅರಿವಿಗೆ ಬರುವುದು ಬಾವಿ ಒಣಗಿದಾಗ ಮಾತ್ರ" ಎಂದು ಹೇಳಿದ್ದು ಇಂದು ನಾವು ಎದುರಿಸುತ್ತಿರುವ ಪರಿಸ್ಥಿತಿಗೆ ಕನ್ನಡಿ ಹಿಡಿಯುವಂತಿದೆ. ೨೧ನೆಯ ಶತಮಾನದಲ್ಲಿ ನಾವು ಎದುರಿಸುತ್ತಿರುವ ಹಲವಾರು ಸಮಸ್ಯೆಗಳಲ್ಲಿ ನೀರಿನ ಕೊರತೆಯೂ ಒಂದು. ಈ ಹಿನ್ನೆಲೆಯಲ್ಲಿ ಕಾವೇರಿ ನದಿ ನೀರಿನ ಹಂಚಿಕೆ ಕುರಿತ ವಿವಾದದ ವಿವಿಧ ಆಯಾಮಗಳನ್ನು ಪರಿಗಣಿಸಬೇಕಿದೆ. ಆ ಪ್ರಕ್ರಿಯೆಯಲ್ಲಿ ಆಯಾ ರಾಜ್ಯಗಳ ಜನರ ಅಗತ್ಯತೆಗಳು ಮತ್ತು ಅನುಪಾತ ಆಧಾರಿತ ಹಕ್ಕುಬಾಧ್ಯತೆಗಳನ್ನೇ ಅಲ್ಲದೆ ಕಾಲ ಕಳೆದಂತೆ ಆಗಾಗ್ಗೆ ವಾದವಿವಾದಗಳು, ಬಿಕ್ಕಟ್ಟುಗಳು ತಲೆದೋರುತ್ತಿರುವ ವಾಸ್ತವಾಂಶವನ್ನು ಗಮನಿಸುವ ಅಗತ್ಯವಿದೆ.

೧. ಜಗತ್ತಿನ ಒಟ್ಟು ಭೂಭಾಗದ ಶೇ.೨.೪ರಷ್ಟನ್ನು ಭಾರತ ಒಳಗೊಂಡಿದೆ. ಅಂತೆಯೇ ಒಟ್ಟು ಜನಸಂಖ್ಯೆಯ ಶೇ. ೧೮ರಷ್ಟು ಜನರು ಇಲ್ಲಿ ವಾಸಿಸುತ್ತಾರೆ. ಜೀರ್ಣೋದ್ಧಾರ ಮಾಡಬಹುದಾದಂತಹ ನೀರಿನ ಸಂಪನ್ಮೂಲಗಳು ಶೇ. ೪ರಷ್ಟಿವೆ. ಭಾರತ ಸರ್ಕಾರ ಜಗತ್ತಿನ ಶೇ. ೧೮ರಷ್ಟು ಜನರಿಗೆ ಆಹಾರ ಒದಗಿಸಬೇಕಿದೆ.

೨. ಅದೆಷ್ಟೋ ದಶಕಗಳ ಹಿಂದೆ ಅಣೆಕಟ್ಟುಗಳನ್ನು ನಿರ್ಮಿಸಲಾಯಿತು, ನಿಜ. ಆದರೆ ನೀರಿನಂತಹ ನೈಸರ್ಗಿಕ ಸಂಪನ್ಮೂಲವನ್ನು ಶೇಖರಿಸಿಟ್ಟುಕೊಳ್ಳಲು ನಮ್ಮ ಜನಪ್ರಿಯ ಸರ್ಕಾರಗಳು ಹೇಳಿಕೊಳ್ಳುವಂಥ ಪ್ರಯತ್ನಗಳನ್ನು ಮಾಡಿಲ್ಲ ಎಂಬುದೂ ಅಷ್ಟೇ ನಿಜ. ನಮ್ಮ ದೇಶದಲ್ಲಿ ಜನಸಂಖ್ಯೆ ದಿನೇ ದಿನೇ ಏರುತ್ತಿದೆ. ಅದೇ ವೇಳೆ ನೈಸರ್ಗಿಕ ಸಂಪನ್ಮೂಲಗಳ ಕೊರತೆಯೂ ಎದುರಾಗುತ್ತಿದೆ. ಈ ಅಂಶಗಳತ್ತ ಗಮನ ಹರಿಸಿ ಸರ್ಕಾರ ಜನತೆಯ ಹಿತದೃಷ್ಟಿಯಲ್ಲಿ ನೀರಿನ ಶೇಖರಣೆಗೆ ಹೆಚ್ಚಿನ ಆದ್ಯತೆ ನೀಡಬೇಕಿತ್ತು.
ಅದೇನೇ ಇರಲಿ, ನೀರಿನ ಶೇಖರಣೆ ಮತ್ತು ವಿತರಣೆ ಎರಡೂ ವಿಚಾರಗಳಲ್ಲಿ ಸರ್ಕಾರ ಹಾಗೂ ನಾಗರಿಕರು ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಲು ವಿಫಲವಾಗಿರುವುದು ಎದ್ದುಕಾಣುತ್ತದೆ. ಅಷ್ಟೇ ಅಲ್ಲ, ಈ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಜವಾಬ್ದಾರಿಯಿಂದ ನುಣುಚಿಕೊಂಡಿರುವುದು ಬೇಸರದ ಸಂಗತಿ. ಲಭ್ಯವಿರುವ ಸಂಪನ್ಮೂಲಗಳ ಬಗ್ಗೆ ಅನಗತ್ಯ ವಾದವಿವಾದಗಳು, ತಕರಾರುಗಳು ಹೆಚ್ಚುತ್ತಲೇ ಇವೆ. ಪರಿಸ್ಥಿತಿ ಮತ್ತಷ್ಟು ವಿಷಮಗೊಳ್ಳುತ್ತಿರುವುದು ಬಹಳ ಆತಂಕಕಾರಿ ಬೆಳವಣಿಗೆ.

೩. ನಮ್ಮ ದೇಶದಲ್ಲಿ ಜಲ ವಿವಾದಗಳು ಸಾಕಷ್ಟಿವೆ. ಅವುಗಳಲ್ಲಿ ಬಹಳ ಪ್ರಮುಖವಾದುವೆಂದರೆ ದಕ್ಷಿಣ ಭಾರತದಲ್ಲಿರುವ ಕಾವೇರಿ, ಕೃಷ್ಣ, ಮಹಾದಾಯಿ ಮತ್ತು ಗೋದಾವರಿ ನದಿಗಳ ಕುರಿತ ವಿವಾದಗಳು ಹಾಗೂ ಉತ್ತರ ಭಾರತದಲ್ಲಿರುವ ನರ್ಮದಾ, ವನ್ಸಧಾರ ಮತ್ತು ರಾವಿ–ಬಿಯಾಸ್ ನದಿಗಳ ಕುರಿತ ವಿವಾದಗಳು, ಇವುಗಳಲ್ಲದೆ, ಭಾರತ ಮತ್ತು ಪಾಕಿಸ್ತಾನಗಳ ನಡುವೆ ಹಾಗೂ ಭಾರತ ಮತ್ತು ಬಂಗ್ಲಾದೇಶದ ನಡುವೆಯೂ ವಿವಾದಗಳಿವೆ. ಈ ವಿವಾದಗಳಿಗಾಗಿ ವ್ಯಯಿಸಿರುವ ಅಮೂಲ್ಯವಾದ ಸಮಯ, ಹಣ ಮತ್ತು ಶಕ್ತಿಸಾಮರ್ಥ್ಯಗಳನ್ನು ನೀರಿನ ಶೇಖರಣೆಗಾಗಿ ಹಾಗೂ ಪರಸ್ಪರ ಒಮ್ಮತದಿಂದ ಬೇರೆಡೆ ಹರಿಸುವುದಕ್ಕಾಗಿ ವ್ಯಯಿಸಿದ್ದರೆ ಹಲವಾರು ಉತ್ಪನ್ನಕಾರಿ ಜನೋಪಯೋಗಿ ಯೋಜನೆಗಳಿಗೆ ಬಳಸಬಹುದಿತ್ತಲ್ಲವೇ?

೪. ೨೦೦೭ರಲ್ಲಿ ಕಾವೇರಿ ಜಲ ವಿವಾದಗಳ ನ್ಯಾಯಾಧಿಕರಣದ ತೀರ್ಪೇ ಅಂತಿಮ ಎಂದು ಪರಿಗಣಿಸಲಾಗಿದೆ.

೧೬.೦೨.೨೦೧೮ರಂದು ಮಾನ್ಯ ಸರ್ವೋಚ್ಚ ನ್ಯಾಯಾಲಯವು ಈ ತೀರ್ಪಿಗೆ ಒಂದು ಸಣ್ಣ ತಿದ್ದುಪಡಿಯನ್ನು ತಂದಿದೆ. ಈ ತೀರ್ಪಿನ ಪ್ರಕಾರ ಮೇಲ್ಭಾಗದಲ್ಲಿರುವ ನದಿ ತೀರದ ರಾಜ್ಯವಾದ ಕರ್ನಾಟಕ ೧೯೨ ಟಿ.ಎಂ.ಸಿ.ಯಷ್ಟು ನೀರಿನ ಬದಲು ೧೭೭.೨೫ರಷ್ಟು ನೀರನ್ನು ಪ್ರತಿವರ್ಷ ಬಿಡಬೇಕೆಂದು ನ್ಯಾಯಾಧಿಕರಣ ಆದೇಶಿದೆ. ಬೆಂಗಳೂರು ಮತ್ತಿತರ ನಗರಗಳ ಜನರ ಕುಡಿಯುವ ನೀರಿನ ಅಗತ್ಯತೆಗಳನ್ನು ಪೂರೈಸಲು ೧೪.೭೫ ಟಿ.ಎಂ.ಸಿ.ಯಷ್ಟು ನೀರನ್ನು ಬಳಸಿಕೊಳ್ಳಲು ಅನುಮತಿ ನೀಡಿದೆ. ಜೊತೆಗೆ, ತೀರ್ಪು ನೀಡಿದ ದಿನಾಂಕದ ನಂತರ ೬ ವಾರದೊಳಗಾಗಿ ಕಾವೇರಿ ಜಲ ನಿರ್ವಹಣಾ ಮಂಡಳಿಯೊಂದನ್ನು ರಚಿಸಬೇಕೆಂದೂ ಸೂಚಿಸಿದೆ.

೫. ತಮಿಳುನಾಡು ಸರ್ಕಾರ ಸಲ್ಲಿಸಿದ್ದ ಮನವಿಗೆ ಸ್ಪಂದಿಸಿದ ಕೇಂದ್ರ ಸರ್ಕಾರವು ಅಂತರರಾಜ್ಯ ಜಲ ವಿವಾದಗಳ ಕಾಯ್ದೆ (೧೯೫೬)ಯಡಿ ಇರುವ ನಿರ್ಣಯದ ಪ್ರಕಾರ ನ್ಯಾಯಾಧಿಕರಣವನ್ನು ರಚಿಸಿದೆ. ಆ ದಿಶೆಯಲ್ಲಿ ೦೫.೦೨.೨೦೦೭ರ ನೀಡಿದ ತೀರ್ಪು ಜಾರಿಗೆ ಬಂದಿತ್ತು.

೬. ಕೇಂದ್ರ ಸರ್ಕಾರ ತೀರ್ಪಿನ ಸಂಪುಟ ೫ರಲ್ಲಿರುವ ಅಧ್ಯಾಯ ೮ರ ಪ್ರಕಾರ ಅಂತಿಮ ತೀರ್ಮಾನವನ್ನು ಜಾರಿಗೊಳಿಸುವ ದಿಶೆಯಲ್ಲಿ ಪ್ರತಿಕ್ರಿಯಾರಂಭ ಹಂತ ಕೇವಲ ಒಂದು ಸಾಧನವಾಗಿರಬೇಕಷ್ಟೇ. ಜೊತೆಗೆ, ಇನ್ನೂ ಕೆಲವು ಆದೇಶಗಳನ್ನು ನೀಡಿದೆ. ಮುಂದುವರಿದು ಈ ಕೆಳಕಾಣಿಸಿದಂತೆ ಅಭಿಪ್ರಾಯಪಟ್ಟಿದೆ :

೭. ತೀರ್ಪಿನ ಸಂಪುಟ ೫ರ ಅಧ್ಯಾಯ ೮ನ್ನು ಗಮನಿಸಿದರೆ, ತನ್ನ ಅಂತಿಮ ಆದೇಶವನ್ನು ಜಾರಿಗೊಳಿಸಲು ಒಂದು ಕಾರ್ಯತಂತ್ರವಿರಬೇಕೆಂದು ನ್ಯಾಯಾಧಿಕರಣ ಅಭಿಪ್ರಾಯಪಟ್ಟಿತ್ತು ಮತ್ತು ಅದರಂತೆ ನಿರ್ದೇಶನಗಳನ್ನು ಹೊರಡಿಸಿತ್ತು. ನ್ಯಾಯಾಧಿಕರಣವು ಈ ಕೆಳಗಿನಂತೆ ಗಮನಿಸಿದೆ :

*"ಕಾವೇರಿ ನದಿಯ ನೀರನ್ನು ಕೇರಳ, ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳ ಹಾಗೂ ಸುಂದರವಾದ ಪುದುಚೇರಿಯ ನಡುವೆ ಹಂಚಿಕೆ ಮಾಡಿದ ನಂತರ ನಮ್ಮೆದುರು ಉಳಿಯುವ ಮುಂದಿನ ಪ್ರಶ್ನೆ, ನ್ಯಾಯಾಧಿಕರಣದ ತೀರ್ಮಾನವನ್ನು ಆಗಿಂದಾಗ್ಗೆ ಹೇಗೆ ಜಾರಿಗೊಳಿಸಲಾಗುತ್ತದೆ ಎಂಬುದು. ಮುಂದುವರಿದು ನ್ಯಾಯಾಧಿಕರಣವು ಮಳೆಗಾಲದ ಸಮೃದ್ಧತೆಯನ್ನು ಕುರಿತು ಮತ್ತು ತನ್ನ ತೀರ್ಮಾನದ ಅನುಷ್ಠಾನಕ್ಕಾಗಿ ಅಂತರರಾಜ್ಯ ನದಿ ಜಲ ವಿವಾದ ಕಾಯಿದೆಗೆ ಏನಾದರೂ ಯಂತ್ರವನ್ನು ಕಲ್ಪಿಸಲಾಗಿದೆಯೇ ಎಂಬುದರ ಬಗ್ಗೆ ಗಮನ ಹರಿಸಿತು."*
೧೯೭೯ರ ಡಿಸೆಂಬರ್‌ನಲ್ಲಿ ನರ್ಮದಾ ಜಲ ವಿವಾದ ನ್ಯಾಯಾಧಿಕರಣ ನೀಡಿದ ತೀರ್ಪಿನಿಂದ ಕಾಯಿದೆಗೆ ತಿದ್ದುಪಡಿಯಾಗಿ, ೧೯೮೦ರ ಕಾಯಿದೆಯ ಅನ್ವಯ ಪರಿಚ್ಛೇದ ೬-ಎಅನ್ನು ಸೇರ್ಪಡೆಗೊಳಿಸಲಾಯಿತು. ತಿದ್ದುಪಡಿಯಾದ ಕಾಯಿದೆಯನ್ನು ೨೭.೦೮.೧೯೮೦ರಿಂದ ಅನ್ವಯವಾಗುವಂತೆ ಜಾರಿಗೆ ತರಲಾಗಿದೆ. ಇದರಿಂದ ಕಾವೇರಿ ಜಲ ವಿವಾದ ನ್ಯಾಯಾಧಿಕರಣವು ಸುಳಿವು ಪಡೆದಿದೆ.

೮. ಕಾಯಿದೆಯ ಪರಿಚ್ಛೇದ ೬ಕ್ಕೆ ವ್ಯತಿರಿಕ್ತವಾಗಿರದಂತೆ ನ್ಯಾಯಾಧಿಕರಣದ ತೀರ್ಮಾನವನ್ನು ಅನುಷ್ಠಾನಗೊಳಿಸುವ ಸಲುವಾಗಿ ಒಂದು ಯೋಜನೆಯನ್ನು ರೂಪಿಸಲು ಪರಿಚ್ಛೇದ ೬-ಎ ಒಳಗೆ ಅವಕಾಶ ಕಲ್ಪಿಸಲಾಗಿದೆ. ನ್ಯಾಯಾಧಿಕರಣದ ತೀರ್ಮಾನವನ್ನು ಜಾರಿಗೊಳಿಸುವ ಸಂಬಂಧ ನಿಯಮಾವಳಿಗಳನ್ನು ರೂಪಿಸುವ ಅಧಿಕಾರವನ್ನು ಸಂಸತ್ತು ಕೇಂದ್ರ ಸರ್ಕಾರಕ್ಕೆ ನೀಡಿದೆ ಎಂದು ಸಂಪುಟ ೫, ಅಧ್ಯಾಯ ೮ರ ಅನ್ವಯದಲ್ಲಿ ಪ್ಯಾರಾ ೬ರೊಳಗೆ ತಿಳಿಸಲಾಗಿದೆ. ಮುಂದುವರಿದು, ಸದರಿ ಕಾಯಿದೆಯ ಪರಿಚ್ಛೇದ ೬ಕ್ಕೆ ೨೦೦೨ನೇ ಇಸವಿಯಲ್ಲಿ ತಿದ್ದುಪಡಿ ಮಾಡಲಾಗಿ ೦೬.೦೮.೨೦೦೨ರಿಂದ ಅನ್ವಯವಾಗುವಂತೆ ಜಾರಿಗೆ ತರಲಾಯಿತು ಎಂದು ಗಮನಿಸಲಾಗಿದೆ. ಜಲ ನ್ಯಾಯಾಧಿಕರಣದ ತೀರ್ಪನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶ, ತೀರ್ಪು ಅಥವಾ ಆಜ್ಞೆಗೆ ಸಮನಾಗಿ ಸ್ವೀಕರಿಸುವ ಯತ್ನ ಮಾಡಲಾಗಿದೆ. ಕಾಯಿದೆ ಕಲ್ಪಿಸಿರುವ ಈ ಅವಕಾಶದ ಕುರಿತು ಮಾನ್ಯ ಸರ್ವೋಚ್ಚ ನ್ಯಾಯಾಲಯವು ಟಿಪ್ಪಣಿ ನೀಡಿ, ನ್ಯಾಯಾಧಿಕರಣದ ತೀರ್ಪು ನ್ಯಾಯಾಂಗದ ಪುನರ್‌ವಿಮರ್ಶೆಗೆ ಒಳಪಡಬಹುದೆಂದು ತಿಳಿಸಿತು. ಈ ದೇಶದಲ್ಲಿ ಎಲ್ಲಾ ಅರೆ-ನ್ಯಾಯಾಂಗ (ಕ್ವಾಸಿ ಜ್ಯುಡಿಷಿಯಲ್) ಆದೇಶ ಹಾಗೂ ನ್ಯಾಯಾಂಗ ತೀರ್ಪುಗಳನ್ನೂ (ಸರ್ವೋಚ್ಚ ನ್ಯಾಯಾಲಯದ ಆದೇಶಗಳನ್ನು ಹೊರತುಪಡಿಸಿ) ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲು ಅವಕಾಶವಿರುವುದರಿಂದ, ಸರ್ವೋಚ್ಚ ನ್ಯಾಯಾಲಯ "ಸರ್ವೋಚ್ಚ"ವಾಗಿದ್ದು, ಜಲ ವಿವಾದಗಳನ್ನು ಬಗೆಹರಿಸುವಲ್ಲಿ ಅಂತಿಮ ತೀರ್ಪುಗಾರ ಸಂಸ್ಥೆಯಾಗಿ ಮತ್ತೊಂದು ನ್ಯಾಯಾಧಿಕರಣವಿರಲು ಸಾಧ್ಯವಿಲ್ಲ ಎಂದು ತಿಳಿಸಿತು. ಆದ್ದರಿಂದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಯಲ್ಲಿ ಮಧ್ಯಪ್ರವೇಶ ಮಾಡಲಾಗದು. ನ್ಯಾಯಾಂಗವು ಶಾಸನದ ಸಾರಾಂಶವನ್ನು ಪುನರ್ವಿಮರ್ಶಿಸಬಹುದೇ ಹೊರತು, ಶಾಸನವನ್ನು ಸಂಸತ್ತು ಅಂಗೀಕರಿಸಿರುವುದರಿಂದ ಶಾಸಕಾಂಗ ಯಾವ ಉದ್ದೇಶದಿಂದ ಶಾಸನವನ್ನು ರಚಿಸಿರಬಹುದೋ ಅದಕ್ಕಿಂತ ಭಿನ್ನವಾದ ಅರ್ಥ ನೀಡುವಂತೆ ನ್ಯಾಯಾಂಗವು ಮಧ್ಯಪ್ರವೇಶಿಸುವ ಅಧಿಕಾರ ಹೊಂದಿಲ್ಲ. ಸಂವಿಧಾನಾತ್ಮಕವಾಗಿಯೇ ಸರ್ವೋಚ್ಚ ನ್ಯಾಯಾಲಯದ ಅಧಿಕಾರವ್ಯಾಪ್ತಿಯು ಅತ್ಯಂತ ವಿಶಾಲವಾಗಿದೆ. ಯಾವುದೇ ಕಾಯಿದೆಗೆ ತಿದ್ದುಪಡಿ ತರುವುದರ ಮೂಲಕ ಈ ಅಧಿಕಾರಗಳನ್ನು ಮೊಟಕುಗೊಳಿಸಲು ಸಾಧ್ಯವಿಲ್ಲ. ಪ್ರಸ್ತುತ ಸಂದರ್ಭದಲ್ಲಿ ೧೯೫೬ರ ಅಂತರರಾಜ್ಯ ಜಲ ವಿವಾದ ಕಾಯಿದೆ ಇದಕ್ಕೆ ತಾಜಾ ಉದಾಹರಣೆಯಾಗಿದೆ. *ಕರ್ನಾಟಕ ರಾಜ್ಯ ವರ್ಸಸ್ ತಮಿಳುನಾಡು (೨೦೧೭(೩) SCC ೩೬೨)* ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಇದನ್ನು ನಿರೂಪಿಸಿದೆ. ಇದಕ್ಕಾಗಿ ಐ. ಆರ್. ಕೋಲ್ಹೊ ವರ್ಸಸ್ ಯೂನಿಯನ್ ಆಫ್ ಇಂಡಿಯಾ (೨೦೦೭), ಒರಿಸ್ಸಾ ಸರ್ಕಾರ ವರ್ಸಸ್ ಯೂನಿಯನ್ ಆಫ್ ಇಂಡಿಯಾ (೨೦೦೯), ಜೋಸ್ ಡಾ ಕೊಸ್ಟಾ ವರ್ಸಸ್ ಭಾಸ್ಕರ ಸದಾಶಿವ (೧೯೭೬) ಹಾಗೂ ಅರುಣಾಚಲಮ್ ವರ್ಸಸ್ ಪಿ. ಎಸ್. ಆರ್ ಸದಾನಾಥನ್ (೧೯೭೯) ಪ್ರಕರಣಗಳಲ್ಲಿ ತಾನೇ ಈ ಹಿಂದೆ ನೀಡಿದ್ದ ಆದೇಶಗಳನ್ನು ಇಲ್ಲಿ ಸರ್ವೋಚ್ಚ ನ್ಯಾಯಾಲಯವು ಅವಲಂಬಿಸಿದೆ.

೯. ಪರಿಚ್ಛೇದ ೬ಕ್ಕೆ ಪರಿಚ್ಛೇದ ೬(೨) ಅನ್ನು ಸೇರ್ಪಡೆಗೊಳಿಸಿ ಕಾಯಿದೆ ತಿದ್ದುಪಡಿ ಮಾಡಿದಾಗ ಡಿಎಮ್‌ಕೆ ಪಕ್ಷ ಆಡಳಿತಾರೂಢ ಸರ್ಕಾರದ ಭಾಗವಾಗಿತ್ತು.

೧೦. ಇಂದಿರಾ ನೆಹರೂ ಗಾಂಧಿ ವರ್ಸಸ್ ರಾಜ್ ನಾರಾಯಣ್ AIR೧೯೭೫ SC ೨೨೯೯ ಮತ್ತು ಎಲ್. ಚಂದ್ರಕುಮಾರ್ ವರ್ಸಸ್ ಯೂನಿಯನ್ ಆಫ್ ಇಂಡಿಯಾ (೧೯೯೭ (೩) SCC ೨೬೧) ಪ್ರಕರಣಗಳಲ್ಲಿ ಗಮನಿಸಲಾದಂತೆ ಸಂವಿಧಾನಾತ್ಮಕ ಉಪಬಂಧಗಳಿಗೆ ವ್ಯತಿರಿಕ್ತವಾಗಿರುವ ಪ್ರತಿಯೊಂದು ಕ್ರಿಯೆಯೂ ನ್ಯಾಯಾಂಗ ಪುನರ್ವಿಮರ್ಶೆಗೆ ಒಳಪಡುತ್ತದೆ.

೧೧. ಸದರಿ ಅಧ್ಯಾಯದ ಪ್ಯಾರಾ ೮ ರಿಂದ ಪ್ರಾರಂಭಗೊಂಡು, ಕೃಷ್ಣಾ ಜಲ ವಿವಾದ ನ್ಯಾಯಾಧಿಕರಣ (೧೯೭೬) ಮತ್ತು ನರ್ಮದಾ ಜಲ ವಿವಾದ ನ್ಯಾಯಾಧಿಕರಣ (೧೯೭೯) ಇವುಗಳು ವ್ಯಕ್ತಪಡಿಸಿರುವ ಅಭಿಪ್ರಾಯವನ್ನು ಪರಿಗಣಿಸುವ ನ್ಯಾಯಾಧಿಕರಣ, ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕೇಂದ್ರ ಸರ್ಕಾರವು ಭಾಕ್ರಾ ಬಿಯಾಸ್ ನಿರ್ವಹಣಾ ಮಂಡಳಿಯ ಆಧಾರದಲ್ಲಿ ಕಾವೇರಿ ನಿರ್ವಹಣಾ ಮಂಡಳಿಯನ್ನು ರಚಿಸಬಹುದೆಂದು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡುತ್ತದೆ. ಮುಂದುವರಿದು, ನ್ಯಾಯಾಧಿಕರಣವು ಕಾವೇರಿ ನಿರ್ವಹಣಾ ಮಂಡಳಿಯ ಸಂಯೋಜನೆ ಹೇಗಿರಬೇಕೆಂದು, ಮಂಡಳಿಯ ಕಾರ್ಯವೈಖರಿಯ ಬಗ್ಗೆ, ಮಂಡಳಿಯ ಖಾಯಂ ಸದಸ್ಯರು ಯಾರಿರಬೇಕೆಂದು ಮತ್ತು ಅರೆಕಾಲಿಕ ಸದಸ್ಯರು ಯಾರಾಗಿರಬೇಕೆಂಬ ಮಾರ್ಗದರ್ಶಿ ಸೂಚನೆಗಳನ್ನು ವ್ಯಕ್ತಪಡಿಸುತ್ತದೆ. ನ್ಯಾಯಾಧಿಕರಣವು ತನ್ನ ವ್ಯಾಪ್ತಿಯನ್ನು ಮೀರಿ ನಡೆದುಕೊಂಡಿದೆ ಎಂಬುದು ನ್ಯಾಯಾಧಿಕರಣಕ್ಕೆ ಆದರ ಸಲ್ಲಿಸುತ್ತಲೇ ಗಮನಿಸುಬಹುದಾದ ಅಂಶವಾಗಿದೆ.

೧೨. ನ್ಯಾಯಾಧಿಕರಣ ಶಿಫಾರಸ್ಸು ಮಾಡಿರುವ ಕಾವೇರಿ ನಿರ್ವಹಣಾ ಮಂಡಳಿಯ ರಚನೆಯನ್ನು ಎತ್ತಿಹಿಡಿಯಲಾಗಿದ್ದು ಸದರಿ ಮಂಡಳಿಯನ್ನು ೬ ವಾರಗಳೊಳಗೆ ರಚಿಸಲು ಕೇಂದ್ರ ಸರ್ಕಾರಕ್ಕೆ ಗಡುವು ನೀಡಲಾಗಿದೆ.

೧೩. ಈ ಕಾಯಿದೆಯ ಉಪಬಂಧಗಳ ಅನ್ವಯ ಮತ್ತು ಕೇಂದ್ರ ಸರ್ಕಾರದ ಪ್ರಕಾರ, ನ್ಯಾಯಾಧಿಕರಣದ ರಚನೆ ಶಾಸಕಾಂಗದ ಪ್ರಕ್ರಿಯೆಯಾಗಿದ್ದು, ಅದರ ಸ್ಥಾಪನೆಗಾಗಿ ನ್ಯಾಯಾಲಯವು ನಿರ್ದೇಶನ ನೀಡಲು ಸಾಧ್ಯವಿಲ್ಲ; ಏಕೆಂದರೆ ಅದು ಸರ್ಕಾರದ ವಿವೇಚನೆಯಾಗಿರುತ್ತದೆ.

೧೪. ಆಯಾ ರಾಜ್ಯಗಳಲ್ಲಿ ಪ್ರಾದೇಶಿಕ ಪಕ್ಷಗಳು ಪ್ರಾಮುಖ್ಯತೆ ಪಡೆದ ಕಾಲದವರೆಗೂ ವಿವಾದಗಳಿದ್ದರೂ ಸಹ ಅವುಗಳನ್ನು ಸೌಹಾರ್ದಯುತವಾಗಿ ಬಗೆಹರಿಸಿಕೊಳ್ಳಲಾಗುತ್ತಿತ್ತು. ೧೯೯೦ರ ನಂತರದ ಬೆಳವಣಿಗೆಗಳನ್ನು ಗಮನಿಸಿದರೆ ಜಲ ವಿವಾದಗಳಿಗೆ ಸಂಬಂಧಪಟ್ಟಂತೆ ಅಧಿಕಗೊಂಡ ಮಧ್ಯಪ್ರವೇಶಗಳು ಹೆಚ್ಚುಹೆಚ್ಚು ಸಮಸ್ಯೆಗಳಿಗೆ ಕಾರಣವಾಗಿವೆ. ತಮಿಳುನಾಡು ರಾಜ್ಯವು ಪರಂಪರಾಗತ ಸ್ವಾಮ್ಯದ (Right of Prescription) ಹಕ್ಕಿನ ಅಡಿ ಫಲವನ್ನು ಅನುಭವಿಸುತ್ತಾ

ಒಡಂಬಡಿಕೆಯ ನಿಬಂಧನೆಗಳನ್ನು ಉಲ್ಲಂಘಿಸಿ ತನ್ನ ಬೇಸಾಯದ ಭೂಪ್ರದೇಶವನ್ನು ವಿಸ್ತರಿಸಿದೆ. ತಮಿಳುನಾಡು ರಾಜ್ಯವು ಒಡಂಬಡಿಕೆಯ ಪಾಲುದಾರನಾಗಿ ಅದೇ ಒಡಂಬಡಿಕೆಯನ್ನು ಉಲ್ಲಂಘಿಸಿದೆ. ನದಿಪಾತ್ರದ ಮೇಲಿನ ರಾಜ್ಯಗಳ (Upper Riparian States) ಹಿತಾಸಕ್ತಿಗೆ ವಿರುದ್ಧವಾಗಿ ಈ ರಾಜ್ಯವು ತನ್ನದೇ ತಪ್ಪುಗಳಿಂದಾಗಿ ಲಾಭ ಪಡೆದುಕೊಳ್ಳಲಾರದು.

೧೫. **ಮಾನ್ಯ ಸರ್ವೋಚ್ಚ ನ್ಯಾಯಾಲಯ ಭಾಗಶಃ ಎತ್ತಿಹಿಡಿದಿರುವುದು ತೀರ್ಪಿನಲ್ಲಿರುವ ಕಾವೇರಿ ನಿರ್ವಹಣಾ ಮಂಡಳಿಯ ರಚನೆಯ ಮೂಲವನ್ನು, ಕಾವೇರಿ ಜಲ ನಿರ್ವಹಣಾ ಮಂಡಳಿ ರಚನೆಯಾದ ಕೂಡಲೇ ನೀರಿನ ಯೋಜನೆಗಳು, ಅದರ ಆಡಳಿತ, ಕಣಿವೆಯಲ್ಲಿ ಹಂಚಿಕೆ ಮಾಡಲು ಲಭ್ಯವಿರುವ ನೀರು ಮತ್ತು ತನ್ನ ಜಲಾಶಯಗಳ ನಿಯಂತ್ರಣ, ಇವೆಲ್ಲವನ್ನೂ ಕರ್ನಾಟಕ ರಾಜ್ಯವು ಮಂಡಳಿಗೆ ಬಿಟ್ಟುಕೊಡಬೇಕಾಗುತ್ತದೆ. ರಾಜ್ಯವು ತನ್ನದೇ ಜಲಾಶಯಗಳ ಮತ್ತು ತನ್ನ ವ್ಯಾಪ್ತಿಯ ಪ್ರದೇಶದೊಳಗೆ ಬೀಳುವ ಮಳೆಯ ಮೇಲೂ ಯಾವುದೇ ನಿಯಂತ್ರಣ ಹೊಂದಿರುವುದಿಲ್ಲ. ರಾಜ್ಯವು ತನ್ನ ಭೂಪ್ರದೇಶದಲ್ಲಿ ಸಾರ್ವಭೌಮವಾಗಿದ್ದರೂ ಸಹ ತನ್ನ ನೆಲದ ಮೇಲೆ ಬೀಳುವ ಮಳೆನೀರಿನ ನಿರ್ವಹಣೆಯ ಹೊರತಾದ ಸಾರ್ವಭೌಮ ಪ್ರದೇಶ ಎಂಬ ಸ್ಥಿತಿಗೆ ತಳ್ಳಲ್ಪಡುತ್ತದೆ. ಈ ಹಿನ್ನೆಲೆಯಲ್ಲಿ "ಮನೆ ನಿನ್ನದು, ಆದರೆ ಬಿಂದಿಗೆ ಮುಟ್ಟಬೇಡ" ಎಂಬ ನಾಣ್ಣುಡಿ ನೆನಪಾಗುತ್ತಿದೆ. ನಿರ್ವಹಣಾ ಮಂಡಳಿ ಸಾಕಾರಗೊಂಡಾಗ ಇಂತಹದ್ದೇ ಪರಿಸ್ಥಿತಿ ಕರ್ನಾಟಕಕ್ಕೆ ಒದಗಿಬರುತ್ತದೆ.**

೧೬. ಶಾಸಕಾಂಗದ ಪ್ರಕ್ರಿಯೆಯಾಗಿರುವ ಮಂಡಳಿ ರಚನೆ ಕಾರ್ಯವನ್ನು ಪೂರ್ಣಗೊಳಿಸಲು ಸಕಾರಾತ್ಮಕ ನಿರ್ದೇಶನಗಳನ್ನು ಕೊಡಬಹುದೇ ಅಥವಾ ಮಂಡಳಿ ರಚನೆಯ ಕ್ರಿಯೆಯನ್ನು ಜನಪ್ರಿಯ ಸರ್ಕಾರದ ವಿವೇಚನೆಗೆ ಬಿಟ್ಟುಬಿಡಬೇಕೇ ಎಂಬುದು ಇಲ್ಲಿ ಉದ್ಭವಿಸುವ ಪ್ರಶ್ನೆ. **ಸರ್ಕಾರದ ಪ್ರಕಾರ ಮಂಡಳಿ ರಚನೆಗೆ ಯಾವುದೇ ಸಕಾರಾತ್ಮಕ ನಿರ್ದೇಶನ ನೀಡುವುದು ಸಾಧ್ಯವಿಲ್ಲ. ಒಂದು ನೀತಿ–ನಿರೂಪಣೆಯ ವಿಚಾರದಲ್ಲಿ ಯಾವುದೇ ನಿರ್ದೇಶನ ನೀಡಲಾಗದು ಎಂದು ಸರ್ವೋಚ್ಚ ನ್ಯಾಯಾಲಯ ಈ ಹಿಂದೆ ಹೇಳಿದೆ (BALCO ಪ್ರಕರಣ).** ಒಂದು ನಿರ್ದಿಷ್ಟವಾದ ವಿಚಾರದಲ್ಲಿ ಶಾಸಕಾಂಗಕ್ಕೆ ನಿರ್ದೇಶನ ನೀಡಲು ಬಾರದು. ಕರ್ನಾಟಕ ರಾಜ್ಯದ ಪ್ರಕಾರ, ನದಿ ಪಾತ್ರದ ಮೇಲಿನ ರಾಜ್ಯವು ತನ್ನ ಪ್ರದೇಶದ ವ್ಯಾಪ್ತಿಯೊಳಗಿನ ನವೀಕರಿಸಬಹುದಾದ ಜಲ ಸಂಪನ್ಮೂಲಗಳ ಬಳಕೆಯ ಮೇಲಿನ ಹತೋಟಿ ಕಳೆದುಕೊಳ್ಳುವುದರಿಂದ ಕಾವೇರಿ ಜಲ ನಿರ್ವಹಣಾ ಮಂಡಳಿಯ ರಚನೆ ಆ ರಾಜ್ಯದ ಹಿತಾಸಕ್ತಿಗೆ ಮಾರಕವಾಗಲಿದೆ. ತಮಿಳುನಾಡು ರಾಜ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಕರ್ನಾಟಕ ಸರ್ಕಾರ ಬಿಡುಗಡೆಗೊಳಿಸುವ ನೀರನ್ನು ಅವಲಂಬಿಸಿರುವುದರಿಂದ ಅದು ಏನನ್ನೂ ಕಳೆದುಕೊಳ್ಳುವುದಿಲ್ಲ. ಅದು ತನ್ನ ಅಂತರ್ಜಲವನ್ನು ಬಳಸದೆ ಲಾಭ ಪಡೆಯುವ ದೃಷ್ಟಿಯಿಂದ ಗರಿಷ್ಠ ಪ್ರಮಾಣದ ನೀರನ್ನು ಉಪಯೋಗಿಸಿಕೊಂಡು ಪ್ರಯೋಜನ ಪಡೆಯಲು ಹವಣಿಸುತ್ತಿದೆ. **"ಅಗ್ಗವಾಗಿ ಹಾಲು ಸಿಗುವಾಗ ಹಸು ಸಾಕುವ ಗೋಜೇಕೆ" ಎಂಬುದು ತಮಿಳುನಾಡು ರಾಜ್ಯದ ತತ್ವವಾಗಿರುವಂತೆ ಕಾಣುತ್ತಿದೆ.**

ಯಜುರ್ವೇದದ ಈ ಸಾಲುಗಳನ್ನು ಇಲ್ಲಿ ಸ್ಮರಿಸಬಹುದು : "ಯ ಏವಂ ವೇದ। ಯೋऽಪಾಮಾಯತನಂ ವೇದ। ಆಯತನವಾನ್ ಭವತಿ" – ಇದರ ಅರ್ಥವೇನೆಂದರೆ ಯಾರು ಜಲ ಮೂಲವನ್ನು ಬಲ್ಲವನಾಗಿರುತ್ತಾನೋ ಅವನು ತನ್ನನ್ನು ತಾನು ಸ್ಥಾಪಿಸಿಕೊಳ್ಳಲು ಸಮರ್ಥನಾಗಿರುತ್ತಾನೆ.

**ಎಮ್. ನಾರಾಯಣಭಟ್**
#೨೭, ಮೊದಲನೇ ಮಹಡಿ, ೧ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು –೫೬೦ ೦೦೯

## ಬುದ್ಧ ಬೆಳದಿಂಗಳು



**ಕ**ಳೆದ ರಾತ್ರಿ ಬರೀ ಕನಸು
ಮೈ ನರೆದ ಬೆಳದಿಂಗಳು.
ಆ ಸಮಯದಲಿ
ಭಗವಾನ್ ಬುದ್ಧಾಜೀ
ಜಾತಿಯನ್ನು ಒಂದು ದೊಡ್ಡ ಮರಕ್ಕೆ ಕಟ್ಟ್ಹಾಕಿ
ಎಲ್ಲರ ಮನೆಗೂ ಅರಿವಿನ ಬೆಳಕ
ಹೊತ್ತಿಸಿ ಬರುತ್ತಿದ್ದರು !

ಹೊರಗೆ ಬರುವಾಗ
ಆ ಮರವನ್ನೆ ಕತ್ತರಿಸಿ ಹೊಗುತ್ತಿದ್ದರು
ಜಾತಿವಾದಿಗಳು.
ಜಾತಿ, ಕುಣಿದು ಕುಪ್ಪಳಿಸುತ್ತಿತ್ತು.
ಬದುಕ ಸುಡಲು ಬೆಂಕಿಯಾಗುತಿತ್ತು.
ಬುದ್ಧ ಆ ಬೆಳದಿಂಗಳಲ್ಲೂ ಕಣ್ಣೀರಾಕಿದ್ದ !
ಬೆಳದಿಂಗಳೇ,
ಮಬ್ಬಾಗಿ ಕಾಣುವ ಹಾಗೆ.

ಅಯ್ಯೋ, ಸಮಾಜವೇ,
ಸಮಾನತೆಯ ಪಾಠ ಮೊದಲು ಕಲಿಸು. ಇಲ್ಲವೇ
ಕಲಿಯಲು ಈ ಹಿಂದೂ ಸಮಾಜದ ದಮನಿತರು
ನನ್ನ ಹೆಜ್ಜೆ ತುಳಿಯಬೇಕು
ನೋವಾದರೆ ನಾನೇ ಹೊಣೆ
ಎಂದು ಉಸಿರು ಕಟ್ಟಿ ಕೂಗಿದ ಮಾತಿಗೆ
ಎಚ್ಚರಗೊಂಡು ತಬ್ಬಿಬ್ಬಾದೆ

ತಲೆ ದಿಂಬು ನನ್ನ ಕಣ್ಣೀರಲಿ ತೊಯ್ದಿತ್ತು
ಅದರ ಮೇಲೊಂದು ಹೂವಿನ ಗಿಡ ಬೆಳೆಸಲು
ಧೈರ್ಯ ಮಾಡಿ, ಹೊರಗೆ ಹೊರಟೆ.
ಅಗೋ ಅದೇ ಶೋಷಣೆ
ಅದೇ ಅಸ್ಪೃಶ್ಯತೆ
ಜಾತಿ ಧರ್ಮದಲ್ಲಿ... !

ಬುದ್ಧ ತುಳಿದ ಹೆಜ್ಜೆಗಳ
ಹುಡುಕುತ್ತಾ ಹೊರಟೆ
ಸಿಗಲೇ ಇಲ್ಲ.
ಮತ್ತೆ ಮನೆಗೆ ಬಂದು
ಬುದ್ಧನ ಪಟದ ಹೆಜ್ಜೆಗಳ ಕೈಲಿಡಿದು
ನೆಲದ ಮೇಲಿದ್ದ ಹೆಜ್ಜೆಗಳೊಂದಿಗೆ
ಪ್ರತಿ ಹೆಜ್ಜೆಗಳನೂ ಜೋಡಿಸುತ್ತಾ ಹೋದೆ
ಹೋಲಿಕೆಯಾಗಲೇ ಇಲ್ಲ.

ಮತ್ತೆ,
ಕತ್ತಲು ಬೆಳಕೆನ್ನದೆ ಹೊರಟೆ
ಅಲ್ಲೊಂದು ಆಲದ ಮರ
ಅದರ ಕೆಳಗೆ ಉಸಿರಾಡುವ
ಬುದ್ಧನ ಹೆಜ್ಜೆ ಸದ್ದು !
ದಮ್ಮಯ್ಯ, ಒಂದು ಪಕ್ಷಿಯಾಗಿ
ಹೆಗಲ ಮೇಲೆ ಕೂರೆಂದೆ
ತಟ್ಟನೆ ಪಕ್ಷಿಯಾದ ಬುದ್ಧನ ಹೆಜ್ಜೆ
ಮನೆಗೆ ಬರುವಾಗ ನೂರಾರು ಪಕ್ಷಿಗಳಾಯಿತು
ಪ್ರತಿ ಶೋಷಿತರ ಮನೆಯೊಳಗು
ಬುದ್ಧನ ಹೆಜ್ಜೆಯ ಪಕ್ಷಿಯು ನುಗ್ಗಿ
ನೆವೆಯುವ ದೀಪಗಳಿಗೆ ಎಣ್ಣೆಯಾಯಿತು.

**ಬಿದಲೋಟಿ ರಂಗನಾಥ್**
ವಕೀಲರು, ಮಧುಗಿರಿ ಟೌನ್, ತುಮಕೂರು ಜಿಲ್ಲೆ



# ಎಚ್. ಕೆ. ಆರ್. ನಾ ಕಂಡಂತೆ

ದಿ| ಶ್ರೀ ಎಚ್. ಕೆ. ರಾಮಚಂದ್ರಮೂರ್ತಿಯವರ ಬಗ್ಗೆ ಶ್ರೀ ಜಿ. ಆರ್. ಅವರು ಕಳೆದ ಸಂಚಿಕೆಯಲ್ಲೇ ಬರೆದಿದ್ದಾರೆ. ಸಾರಸ್ವತಲೋಕಕ್ಕೆ ಅವರು ನೀಡಿದ ಕೊಡುಗೆಯ ಬಗ್ಗೆ ಸಾಕಷ್ಟು ತಿಳಿಸಿದ್ದಾರೆ. ಅದಕ್ಕೆ ಪೂರಕವಾಗಿ ಎಚ್. ಕೆ. ಆರ್. ಅವರ ವ್ಯಕ್ತಿತ್ವವನ್ನು, ನಾನು ಕಂಡಂತೆ ನಿಮ್ಮೊಡನೆ ಹಂಚಿಕೊಳ್ಳುವುದು ನನ್ನ ಉದ್ದೇಶ.

೧೯೭೦ರ ದಶಕದ ಮೊದಲ ವರ್ಷಗಳು. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟಿನ ಸಂಪಾದಕೀಯ ಮಂಡಳಿಯ ಹೊಸ ಸದಸ್ಯರಾಗಿ, ಅಂದರೆ ನನ್ನ ತಂದೆ ಜೆ. ಆರ್. ಲಕ್ಷ್ಮಣರಾಯರ ಸಹೋದ್ಯೋಗಿಯಾಗಿ, ಶ್ರೀ ಎಚ್. ಕೆ. ರಾಮಚಂದ್ರಮೂರ್ತಿಯವರು ಸೇರಿಕೊಂಡರು. ನಾವಿದ್ದ ಮನೆಯಿಂದ ಕೇವಲ ನಾಲ್ಕು ಮನೆಗಳಾಚೆ ಅವರಿಗೆ ಮನೆ ಬಾಡಿಗೆಗೆ ಸಿಕ್ಕಿದ್ದು ನಮ್ಮ ಅದೃಷ್ಟವೆಂದೇ ಹೇಳಬೇಕು. ಕೆಲವೇ ದಿನಗಳಲ್ಲಿ ಅವರು ನಮಗೆಲ್ಲ ಹಲವು ವರ್ಷಗಳಿಂದ ಪರಿಚಯವಿದ್ದವರಂತೆ ಆದರು. ಅಂದರೆ ರಾಮಚಂದ್ರಮೂರ್ತಿ ಮಾಮ ಆಗಿಬಿಟ್ಟರು.

ಅವರ ಕಿರಿಯ ಮಗ ಕಿಟ್ಟಿ (ಬಾಲಕೃಷ್ಣ) ನನಗಿಂತ ಒಂದೆರಡು ವರ್ಷ ಚಿಕ್ಕವನು. ಅವನದು ಸಂಕೋಚದ ಸ್ವಭಾವ. ಅವನಿಗೂ ಮೈಸೂರು ಹೊಸದಾದ್ದರಿಂದ ಅವನಿಗೆ ಅಲ್ಲಿ ಸ್ನೇಹಿತರಿರಲಿಲ್ಲ. ಮಾಮ ಪರಸ್ಪರ ಪರಿಚಯ ಮಾಡಿಕೊಟ್ಟು ಅವನ ಒಂಟಿತನದ ಭಾವನೆಯನ್ನು ಕಡಿಮೆ ಮಾಡಲು ಪ್ರಯತ್ನಿಸಿದರು. ಅಲ್ಲಿಂದ ಇಲ್ಲಿಯವರೆಗೆ ನಾವು ಸ್ನೇಹಿತರಾಗೇ ಉಳಿದಿದ್ದೇವೆ. ನನ್ನ ಅಕ್ಕ ವಿದ್ಯಾ ಮತ್ತು ಅವರ ಮಗಳು ವಿದ್ಯಾ ಇಬ್ಬರೂ ವೀಣೆ ಕಲಿಕೆಯಲ್ಲಿ ಸಹಪಾಠಿಗಳಾದರು. ಹೀಗೆ ಎರಡೂ ಕುಟುಂಬಗಳ ನಡುವೆ ಸ್ನೇಹ ಬೆಳೆಯಿತು.

ಅವರು ಇಂಗ್ಲಿಷ್ ಸಾಹಿತ್ಯವನ್ನು ಆಳವಾಗಿ ಬಲ್ಲವರು. ಅವರ ಭಾಷೆಯಲ್ಲೇ ಹೇಳಬೇಕೆಂದರೆ, "ತುಂಬ ಓದಿಕೊಂಡಿದ್ದರು" ("ಅವನು ತುಂಬ ಓದಿಕೊಂಡಿದ್ದಾನೆ" ಎಂದು ಯಾರನ್ನಾದರೂ ಅವರು ಪ್ರಶಂಸಿಸಿದಾಗ ಅವರು ಅದನ್ನು ಹೇಳುವ ರೀತಿಯಲ್ಲೇ ಅದರ ಬಗ್ಗೆ ಅವರಿಗಿದ್ದ ಗೌರವ ವಿಶದವಾಗುತ್ತಿತ್ತು). ಅವರಿಂದ ನಮಗೆ ಅನೇಕ ಲೇಖಕರ ಪರಿಚಯವಾಯಿತು. ನಮ್ಮ ಓದಿನ ಹರವು ಹೆಚ್ಚಾಯಿತು.

ಇದಿಷ್ಟೂ ಮಾಮನ ವ್ಯಕ್ತಿತ್ವದ ಬಗ್ಗೆ ಬರೆಯಲು ಹಿನ್ನೆಲೆ, ಅಷ್ಟೆ. ಎರಡು ವಿಷಯಗಳನ್ನು ಸ್ಥೂಲವಾಗಿ ಹೇಳಿ ಅವರ ವ್ಯಕ್ತಿತ್ವದ ಕಿರು ಪರಿಚಯ ಮಾಡುವುದು ನನ್ನ ಉದ್ದೇಶ.

ಮಾಮನನ್ನು ಬಲ್ಲ ಅನೇಕರಿಗೆ ತಿಳಿದೇ ಇರುವಂತೆ, ನಾಟಕ ಶಾಸ್ತ್ರಕ್ಕೆ ಎಪಿಕ್ ಥಿಯೇಟರ್, ಏಲಿಯನೇಷನ್ ಮುಂತಾದ ಕಲ್ಪನೆಗಳ ಕೊಡುಗೆ ನೀಡಿದ ಜರ್ಮನ್ ನಾಟಕಕಾರ ಬರ್ಟೋಲ್ಟ್ ಬ್ರೆಖ್ಟ್‌ನ ನಾಟಕಗಳ ಅಭಿಮಾನಿಯಾಗಿದ್ದ ಅವರು ಅವುಗಳ ಆಳವಾದ ಅಧ್ಯಯನ ಮಾಡಿದ್ದರು. ಮಾರ್ಕ್ಸ್‌ವಾದದ ಕಡೆಗೆ ಒಲವಿದ್ದ ನನ್ನ ತಂದೆಯವರಿಗೆ ಅವನ ನಾಟಕಗಳ ಪರಿಚಯವಿತ್ತೋ ಇಲ್ಲವೋ ಅಥವಾ ಮಾಮನೇ ಪರಿಚಯಿಸಿದರೋ ನನಗೆ ತಿಳಿಯದು. ಬ್ರೆಖ್ಟ್‌ನ ನಾಟಕ "ಲೈಫ್ ಆಫ್ ಗೆಲಿಲಿಯೊ" ನನ್ನ ತಂದೆಯವರ ಮೇಲೆ ಗಾಢವಾದ ಪ್ರಭಾವ ಬೀರಿತ್ತು. ಹೇಗೋ ಗೊತ್ತಿಲ್ಲ, ಕನ್ನಡಕ್ಕೆ ಅದನ್ನು ಭಾಷಾಂತರಿಸಬೇಕು ಎಂಬ ಆಸೆ ಅವರಿಬ್ಬರಿಗೂ ಮೂಡಿತ್ತು. ಅವರಿಬ್ಬರೂ ಆ ಕೆಲಸವನ್ನು ಮಾಡಲು ನಿರ್ಧರಿಸಿದರು.

ಅಲ್ಲಿಂದ ಅವರಿಬ್ಬರ ದಿನಚರಿ ಸುಮಾರು ಹೀಗಿತ್ತು: ಬೆಳಗ್ಗೆ ಬೇಗ ಎದ್ದು, ನನ್ನ ತಂದೆಯವರು ತಯಾರಾಗಿ ಅವರ ಮನೆಗೆ ಹೋಗುವುದು. ಸುಮಾರು ಒಂದೂವರೆ ಗಂಟೆಗಳ ಕಾಲ ಇಬ್ಬರೂ ಸೇರಿ ಭಾಷಾಂತರದ ಕೆಲಸ ಮಾಡುವುದು. ನಂತರ ಎಂದಿನಂತೆ ಕೆಲಸಕ್ಕೆ ತೆರಳುವುದು. ಇಬ್ಬರಿಗೂ ಜರ್ಮನ್ ಭಾಷೆ ಬರುತ್ತಿರಲಿಲ್ಲ. ಎರಡು ಮೂರು ಬೇರೆ ಬೇರೆ ಭಾಷಾಂತರಕಾರರು ಭಾಷಾಂತರಿಸಿದ ಅವತರಿಕೆಗಳನ್ನು ಮುಂದಿಟ್ಟುಕೊಂಡು ತಮ್ಮ ಕೆಲಸ ಮಾಡಿದರು.

ಇಬ್ಬರಿಗೂ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಪಾಂಡಿತ್ಯವಿತ್ತು. ಇಬ್ಬರೂ ನಿಖರತೆಗೆ ಅಪಾರ ಬೆಲೆ ಕೊಡುವವರು. ಯಾವುದೋ ಒಂದು ಪದದ ವಿಷಯದಲ್ಲೋ, ವಾಕ್ಯದ ರೂಪದ ವಿಷಯದಲ್ಲೋ ಅವರ ಮಧ್ಯೆ ಭಿನ್ನಾಭಿಪ್ರಾಯಗಳು ಬರುವುದು ಸಹಜವೇ. ಅದರ ಬಗೆಗಿನ ವಾದ ವಿವಾದಗಳು ಸರ್ವೇಸಾಮಾನ್ಯವಾಗಿದ್ದವು. ಮಾಮನ ಮನೆಯವರಿಗೆ, ಅದರಲ್ಲೂ ಅವರ ಶ್ರೀಮತಿಯವರಿಗೆ (ನಮಗೆಲ್ಲ "ಅತ್ತೆ") ಹೆದರಿಕೆಯಾಗುತ್ತಿತ್ತಂತೆ, ಎಲ್ಲಿ ಹೊಡೆದಾಟವಾಗುವುದೋ ಎಂದು. ಹಲವಾರು ಬಾರಿ ಅತ್ತೆಗೆ, ಅವರಿಬ್ಬರ ವಾದದ ತೀವ್ರತೆಯನ್ನು ಕೇಳಿ, ಸರಿ ಇನ್ನು ಈ ಕೆಲಸ ಇಲ್ಲಿಗೇ ಮುಗಿಯಿತು, ಎನಿಸುತ್ತಿತ್ತಂತೆ. ಮಾರನೆಯ ದಿನ ನಮ್ಮ ತಂದೆ ಯಥಾಪ್ರಕಾರ ಹಾಜರಾದಾಗ ಅವರು ಅಚ್ಚರಿಪಡುತ್ತಿದ್ದರಂತೆ. ಒಟ್ಟಿನಲ್ಲಿ, ಅವು ಭಿನ್ನಾಭಿಪ್ರಾಯಗಳು ಮಾತ್ರವೇ ಆಗಿದ್ದು, ವೈಮನಸ್ಯಕ್ಕೆ ತಿರುಗದಿದ್ದುದು ಅವರಿಬ್ಬರ ವ್ಯಕ್ತಿತ್ವಗಳ ಪರಿಚಯ ನೀಡುತ್ತದೆ.

ಒಟ್ಟಿನಲ್ಲಿ 'ಗೆಲಿಲಿಯೊ' ಹೊರಬಂತು. ಶ್ರೀ ಪ್ರಸನ್ನ ಅವರ ನಾಟಕ ತಂಡ 'ಸಮುದಾಯ' ಈ ನಾಟಕವನ್ನು ಆಡಿದರು. ರಾಜ್ಯಾದ್ಯಂತ ಸುಮಾರು ನೂರು ಬಾರಿ ಪ್ರದರ್ಶನ ಕಂಡಿತು. ಉತ್ತಮ ನಟರೂ ಆಗಿದ್ದ ಮಾಮ, ಅದರಲ್ಲಿ ಪಾತ್ರವಹಿಸಿದರು ಕೂಡ. ಇದು ಮೊದಲನೆಯ ವಿಷಯ.

ಎರಡನೆಯದು, ಮಾಮನ ಅಪ್ರತಿಮ ಹಾಸ್ಯಪ್ರಜ್ಞೆ. ನಾಟಕ ಪ್ರದರ್ಶನ ಮುಗಿಸಿ ಬರುತ್ತಿದ್ದ ತಂಡವು, ಎಲ್ಲಿಂದಲೋ ಅರಸೀಕೆರೆಗೆ ಬಂದು ಅಲ್ಲಿ ಮುಂದಿನ ಗಾಡಿಗೆ ಹಲವಾರು ಗಂಟೆಗಳ ಕಾಲ ಕಾಯಬೇಕಿತ್ತು. ಕಾಲ ಕಳೆಯಲು ಒಂದು ಸ್ಪರ್ಧೆ ಏರ್ಪಾಡಾಯಿತು. ಎಲ್ಲರೂ ತಮ್ಮ ಬಗ್ಗೆಯೇ ಒಂದು ಜೋಕ್ ಹೇಳಬೇಕು. ಅದರಲ್ಲಿ ಅತ್ಯುತ್ತಮ ಜೋಕ್ ಹೇಳಿದವರೇ ಗೆದ್ದಂತೆ. ಮಾಮ ತಮ್ಮ ಬಕ್ಕ ತಲೆಯನ್ನು ಸವರುತ್ತಾ ಹೇಳಿದರಂತೆ ನಾನು ಮಾಮೂಲಿನಂತೆ ಕ್ಷೌರ, ಮಾಡಿಸಿಕೊಳ್ಳಲು ಹೋಗುವುದು ಹೇರ್‌ಕಟ್‌ಗಾಗಿ ಅಲ್ಲ, 'ಏರ್‌ಕಟ್'ಗೆ. ಸಲೂನಿನವ ಕುರ್ಚಿಯ ಸುತ್ತ ಸುತ್ತುತ್ತ, ಒಳಗೊಳಗೆ ಮುಸಿನಗುತ್ತಲೇ ಚಕ್ ಚಕ್ ಎಂದು ಶಬ್ದ ಮಾಡಿ ಕುಣಿಯುತ್ತಾನೆ. ಕಾರಣ ಇಷ್ಟೆ: ಆತ ಕತ್ತರಿ ಪ್ರಯೋಗ ಮಾಡಲು ನನ್ನ ತಲೆಯ ಮೇಲೆ ಕೂದಲೇ ಇಲ್ಲವಲ್ಲ! ಕೂದಲು ಕತ್ತರಿಸುವ ನೆಪ ಮಾಡಿಕೊಂಡು ಸುಮ್ಮನೆ ಕಾಸು ತೆಗೆದುಕೊಳ್ಳುತ್ತಾನಲ್ಲ, ಅದಕ್ಕೆ ಅವನಿಗೆ ಖುಷಿಯೇ ಖುಷಿ ! ಗೆದ್ದವರು ಯಾರು ಎಂದು ಬೇರೆ ಹೇಳಬೇಕಿಲ್ಲವಷ್ಟೆ?

ಸಂಕ್ರಾಂತಿ ಹಬ್ಬದ ಸಂಜೆ – ಅತ್ತೆ ಮತ್ತು ಮಾಮ ವಾಯುವಿಹಾರಕ್ಕೆ ಹೊರಟಿದ್ದರಂತೆ. ಬಹಳ ಸುಳ್ಳು ಹೇಳುತ್ತಾನೆಂದು ಕುಪ್ರಸಿದ್ಧರಾದ ಅವರ ಮಿತ್ರರೊಬ್ಬರು ಎದುರಾಗಿ, "ಏನಯ್ಯ ಎಳ್ಳು ಬೀರಲು ಹೊರಟೆಯಾ" ಎಂದು ಚೇಷ್ಟೆ ಮಾಡಿದರಂತೆ. ಥಟ್ಟನೆ, ಮಾಮ, "ಹೌದಯ್ಯಾ. ನೀನು, ಸುಳ್ಳು ಬೀರಲು ಹೊರಟೆಯಾ" ಎಂದರಂತೆ !

ಏನೋ ಕೆಲಸ ಮಾಡಿಕೊಟ್ಟವರು, ಮಾಮನಿಗೆ ಹೇಳಿದರಂತೆ, "ಬಿಲ್ಲ್ ಆಮೇಲೆ ಕಳಿಸ್ತೀನಿ ಸಾರ್". ಮಾಮ, ನಾಟಕೀಯವಾಗಿ ಅಂದರಂತೆ, "ನೀವೇನೋ ಬಿಲ್ಲು ಕಳಿಸ್ತೀರಿ ಸ್ವಾಮಿ ! ಆದರೆ ಅದು ನಮಗೆ, ಬಾಣ ! ಬಾಣ !!"

ಕರ್ನಾಟಕ ಸಂಗೀತದಲ್ಲಿ ಆಳವಾದ ಆಸಕ್ತಿ ಇದ್ದ ಮಾಮನೊಂದಿಗೆ ಹತ್ತಾರು ಕಛೇರಿಗಳಿಗೆ ನಾನು ಹೋಗಿದ್ದೇನೆ. ಅವರಿಗಿದ್ದ ರಾಗ ಜ್ಞಾನದ ಜೊತೆಗೇ ಅವರ ಹಾಸ್ಯಪ್ರಜ್ಞೆ ಎದ್ದುಕಾಣುತ್ತಿತ್ತು. ಒಮ್ಮೆ, ಸಂಗೀತಗಾರರು ತೋಡಿ ರಾಗವನ್ನು ಪ್ರಾರಂಭಿಸುತ್ತಿದ್ದಂತೆಯೇ ನಮ್ಮ ಕಡೆ ತಿರುಗಿ ಸನಿಕೆಯಿಂದ ಏನನ್ನೋ ತೋಡುವಂತೆ ನಟಿಸಿದ್ದರು. ರಾಗಗಳನ್ನು ಎಷ್ಟು ಬೇಗ ಗುರುತಿಸುತ್ತಿದ್ದರೆಂದರೆ ಅದನ್ನು ನೋಡಿ ನಾವು ಅಚ್ಚರಿಪಡುತ್ತಿದ್ದೆವು. ಇವುಗಳು ಅವರ ಬಹುಮುಖ ಪ್ರತಿಭೆಯ ಒಂದು ಕಿರುನೋಟ. ಒಟ್ಟಿನಲ್ಲಿ, ಮಾಮ ಇದ್ದಲ್ಲಿ ಹಾಸ್ಯ, ನಗೆಗಳ ಅಲೆಗಳು ಇಲ್ಲದಿರಲು ಸಾಧ್ಯವೇ ಇರಲಿಲ್ಲ. ಮಾಮ ತೀರಿಕೊಳ್ಳುವ ಕೆಲವೇ ವಾರಗಳ ಹಿಂದೆ ಅವರನ್ನು ಕಂಡಿದ್ದೆ. ನನ್ನ ತಂದೆಯವರು ತೀರಿಕೊಂಡು ಕೆಲವು ವಾರಗಳು ಮಾತ್ರ ಕಳೆದಿದ್ದವು. ಆ ಸುದ್ದಿಯಿಂದ ಮಾಮ ಬಹಳ ನೊಂದಿದ್ದರು. ಸುಮಾರು ಒಂದು ಗಂಟೆಯ ಕಾಲ ಅವರ ಮೈಸೂರಿನ ದಿನಗಳನ್ನು ಮೆಲಕುಹಾಕಿದ್ದರು.

**ಅನಿಲ್ ಜಗಳೂರ್**

ನಂ. ೨೪೩೩, ಪಳನಿ ಕುಪ್ಪುಸ್ವಾಮಿ ಅನುಗ್ರಹಂ, ೯ನೇ ಮುಖ್ಯ, ೨೨ನೇ ಅಡ್ಡರಸ್ತೆ, ಬನಶಂಕರಿ, ೨ನೇ ಹಂತ, ಬೆಂ. – ೭೦




# ಆಣಿಗೆ

ತನ್ನ ವಯಸ್ಸಿಗೆ ಮೀರಿದ ಒಂದು ಪ್ರೌಢಿಮೆ ಅವನ ಮಾತಿನಲ್ಲಿ ಇರುತ್ತಿತ್ತು. ಸದಾ ಯಾವುದೋ ಲೋಕದಲ್ಲಿ ಇದ್ದಂತೆ ಆತ ಮಾತನಾಡುತ್ತಿದ್ದ. ನೋಡಲು ಹುಡುಗನಂತೆ ಇದ್ದರೂ ಮಾತಿನಲ್ಲಿ ಆತ ಸದಾ ಹಿರಿಯನಂತೆ ಗೋಚರಿಸುತ್ತಿದ್ದ. ಬಾಯಿ ತೆರೆದರೆ ನಾಳೆಗಳ ಕುರಿತು ಆತ ಮಾತನಾಡುತ್ತಿದ್ದ. ಬಹಳ ದೂರದಲ್ಲಿ ಇರುವ ಒಂದು ಸತ್ಯವನ್ನ ತಂದು ಮುಂದೆ ನಿಲ್ಲಿಸುತ್ತಿದ್ದ. ಇದರಿಂದಾಗಿ ಅವನ ತಾಯಿ, ಅಜ್ಜಿ ಅನ್ನಾ, ತಂದೆ ಜೋಸೆಫ್ "ನಮಗೆ ಅರ್ಥ ಆಗುವ ಹಾಗೆ ಮಾತನಾಡು ಇಮ್ಮು" ಎಂದು ಗೋಗರೆಯುತ್ತಿದ್ದರು. ಆದರೂ ಆತನ ಮಾತಿನ ರೀತಿ, ವರ್ತನೆ ಬದಲಾಗಿರಲಿಲ್ಲ.

ಗಲಿಲಿಯಾ ಪ್ರಾಂತ್ಯದ ತಿಬೇರಿಯಸ್ ಮತ್ತು ತಾಬೋರ್ ಎಂಬ ಎರಡು ಬೆಟ್ಟಗಳ ತಪ್ಪಲಲ್ಲಿ ಇದ್ದುದೇ ನಜರೇತ್ ಎಂಬ ಸಣ್ಣ ಹಳ್ಳಿ. ಇದರ ಹತ್ತಿರವೇ ನಾಯಿನ್ ಎಂಬ ಸಣ್ಣ ಹಳ್ಳಿ ಇದ್ದರೂ ನಜರೇತ್ ನಾಯಿನ್‌ಗಿಂತಲೂ ತುಸು ದೊಡ್ಡದಾಗಿತ್ತು. ಸಾಲು ಅಂಗಡಿಗಳು, ಶ್ರೀಮಂತರ ಮನೆಗಳು, ಬಡವರ ಗುಡಿಸಲುಗಳು, ದೇವರ ಆಲಯ, ಪ್ರಯಾಣಿಕರಿಗೆ ಉಳಿಯಲು ಬೇಕಾದ ಪ್ರವಾಸಿ ಮಂದಿರಗಳು, ಈ ಊರಿನಲ್ಲಿ ಇದ್ದುದರಿಂದ ಈ ಊರಿಗೆ ಒಂದು ಹೆಸರು, ಖ್ಯಾತಿ, ಸಹ ಇದ್ದಿತು.

ಕೆಲಸ ಕಾರ್ಯಗಳಿಗೆ ಅನುಗುಣವಾಗಿ ಜನ ತಮ್ಮ ಮನೆಗಳನ್ನ ಕಟ್ಟಿಕೊಂಡಿದ್ದರು. ಈ ಮನೆಗಳ ಗುಂಪುಗಳೇ ಒಂದೊಂದು ಉದ್ಯೋಗ, ವೃತ್ತಿ, ಇತ್ಯಾದಿಗಳನ್ನ ಸಂಕೇತಿಸುವಂತೆ ಇದ್ದವು. ಹೀಗಾಗಿ ಈ ಪ್ರದೇಶದ ಶ್ರೀಮಂತ ಜನ ಈ ವೃತ್ತಿನಿರತರಿಂದ ದೂರ ಅನ್ನುವ ಹಾಗೆ ತಮ್ಮ ಮನೆಗಳನ್ನ ಕಟ್ಟಿಕೊಂಡು ಇದ್ದರು. ಈ ಶ್ರೀಮಂತ ಜನ ತಿಬೇರಿಯಸ್ ಬೆಟ್ಟದ ತಪ್ಪಲಲ್ಲಿ ತಮ್ಮ ಭವ್ಯ ಮನೆಗಳನ್ನ ನಿರ್ಮಿಸಿಕೊಂಡಿದ್ದರು.

ನಜರೇತದ ಮಧ್ಯಭಾಗದಲ್ಲಿ ಕುಲುಮೆಯವರು, ಪಾತ್ರೆ ಪಡಗ ಮಾಡುವವರು, ನೇಯ್ಗೆಯವರು, ಬಣ್ಣ ಹಾಕುವವರು, ಮಣ್ಣು – ಮರದಲ್ಲಿ ಪ್ರತಿಮೆ ಮಾಡುವವರು, ಬಡಗಿಗಳು, ಕೂಲಿಗಳು, ಹೇಸರುಕತ್ತೆ ಇತ್ಯಾದಿಗಳನ್ನು ಇರಿಸಿಕೊಂಡು ಹೇರನ್ನು ಸಾಗಿಸುವವರು, ಹಾಲು ಮಾರುವವರು, ಈ ಬಗೆಯ ಕೆಲಸ ಮಾಡುವವರು ಒಂದೆಡೆ ಇದ್ದು ಇವರೆಲ್ಲ ಊರ ಬೆಳವಣಿಗೆಗೆ ಕಾರಣರಾಗಿದ್ದರು. ಬಡಗಿ, ಕಮ್ಮಾರ, ಕುಂಬಾರ ಮೊದಲಾದ ಕುಶಲಕರ್ಮಿಗಳಲ್ಲಿ ತುಂಬ ಚೆನ್ನಾಗಿ ಕೆಲಸ ಮಾಡುವವರೂ ಇದ್ದರು. ಈ ಕುಶಲಕರ್ಮಿಗಳಿಂದ ಕೆಲಸ ಮಾಡಿಸಿಕೊಳ್ಳಲು ಜನ ಹತ್ತಿರದ ಸುಮಾರಿಯ, ಅರಿಮತೇಯ, ಜರುಸಲೇಂ, ಬೇಥನಿ, ಜುದೇಯ ಮೊದಲಾದ ದೊಡ್ಡ ಪಟ್ಟಣಗಳಿಂದ ಇಲ್ಲಿಗೆ ಬರುತ್ತಿದ್ದರು. ಹಾಗೆ ನೋಡಲು ಹೋದರೆ ತುಸು ದೂರದ ಮೃತ ಸಮುದ್ರ, ಜೋರ್ಡಾನ್ ಹೊಳೆಗಳ ದಡದಲ್ಲಿಯ ಊರುಗಳಿಂದಲೂ ಇವರಿಗೆ ಬೇಡಿಕೆ ಬರುತ್ತಿತ್ತು. ಇವರಲ್ಲಿ ಕೆಲವರು ಉತ್ತಮ ಕೆಲಸಗಾರರು, ಪ್ರಾಮಾಣಿಕರು, ಶಾಂತ ಸ್ವಭಾವದವರು, ಮೆದು ನುಡಿಯವರು ಎಂಬ ಹೆಸರನ್ನು ಕೂಡ ಮಾಡಿದ್ದರು. ದೂರದಿಂದ ಬರುವ ಗಿರಾಕಿಗಳು ಇಂಥವರನ್ನೇ ಒಪ್ಪಿಕೊಂಡಿದ್ದರು ಅನ್ನುವುದು ಕೂಡ ಒಂದು ವಿಶೇಷವೇ.

ಇವರಲ್ಲಿ ತುಂಬ ಹೆಸರು ಮಾಡಿದವನು ಅಂದರೆ ಬೆತ್ಲಹೇಮಿನ ಜೋಸೆಫ್ ಎಂಬಾತ. ಈತನೊಬ್ಬ ಬಡಗಿ. ಇವನದೊಂದು ಅಂಗೈ ಅಗಲದ ಅಂಗಡಿ. ಒಳಗೆ ಹೊರಗೆಲ್ಲ ಕತ್ತರಿಸಿದ ಮರದ ಪಟ್ಟಿಗಳು, ಹಲಗೆ, ದುಂಡಿಗಳು, ಅರೆ ಬರೆ ಮುಗಿಸಿದ ಕುರ್ಚಿ, ಬೆಂಚು, ಮೇಜು, ತೊಟ್ಟಿಲು, ಪೆಟ್ಟಿಗೆ ಸಂದೂಕ, ಮಂಚ, ಮುಂದೆ ಇವನ್ನೆಲ್ಲ ಮಾಡಲು ಬೇಕಾದ ಸಾಮಗ್ರಿ, ಮೊಳೆ, ಕಬ್ಬಿಣದ ಪಟ್ಟಿ, ಇತ್ಯಾದಿ. ಇವುಗಳ ನಡುವೆ ಜೋಸೆಫ. ಕೈಯೊಂದು ಅಳತೆ ಪಟ್ಟಿ, ಕಿವಿಗೆ ಸಿಕ್ಕಿಸಿಕೊಂಡ ಒಂದು ಸೀಸದ ತುಂಡನ್ನ ಇರಿಸಿಕೊಂಡು, ಆಗಾಗ್ಗೆ ಏನನ್ನೋ ಕತ್ತರಿಸುವ, ಉಜ್ಜು ಗೊರಡು ಹಾಕುವ, ಪಟ್ಟಿ ಹೊಡೆಯುವ ಕೆಲಸದಲ್ಲಿ ನಿರತನಾಗಿರುತ್ತಿದ್ದ. ಆದರೆ ಯಾವ ಕೆಲಸವೇ ಇರಲಿ ಈತ ಸಮಾಧಾನಿ. ಮುಖದ ಮೇಲೆ ಮುಗುಳು ನಗೆ. ಸದಾ ಸಮಾಧಾನ ಚಿತ್ತ.

**ಡಾ॥ ನಾ. ಡಿಸೋಜ**



ಜೋಸೆಫ್ ಊರಿಗೆಲ್ಲ ಪರಿಚಿತ. ಯಾರೂ ಇವನ ಬಗ್ಗೆ ಒಂದು ಅಪಸ್ವರ ಎತ್ತುತ್ತಿರಲಿಲ್ಲ. ತಾತ ಅಣ್ಣ ಎಂದೇ ಪ್ರತಿಯೊಬ್ಬರೂ ಮಾತನಾಡುವುದು. ಇವನು ಕೂಡ ಅಷ್ಟೆ. ಅಣ್ಣಾ ತಮ್ಮ ಎಂದೇ ಎಲ್ಲರನ್ನ ಸಂಬೋಧಿಸುವವ.

ತನ್ನ ಕೆಲಸದ ಬಗ್ಗೆ ಇವನಿಗೆ ತುಂಬ ಕಾಳಜಿ. ಈ ಕೆಲಸ ಇಂತಹ ದಿನ ಮುಗಿಯುತ್ತದೆ, ಇದನ್ನ ಕೊಡುತ್ತೇನೆ ಅಂದರೆ ಅಂದು ಆ ಕೆಲಸ ಸಿದ್ಧವಾಗಿರುತ್ತಿತ್ತು. ಆತ ಮತ್ತೂ ಒಂದು ವಿಷಯದಲ್ಲಿ ಸದಾ ಮುಂದೆ. ಯಾರದ್ದಾದರೂ ಮರಣದ ಪೆಟ್ಟಿಗೆ ಮಾಡಬೇಕು ಎಂದರೆ ಉಳಿದೆಲ್ಲ ಕೆಲಸ ಬಿಟ್ಟು ಈ ಕೆಲಸ ಮಾಡುವವ.

"ಒಬ್ಬ ಮನುಷ್ಯನಿಗೆ ಮಾಡಬೇಕಾಗಿರೋ ಕೊನೆಯ ಸೇವೆ ಅಂದರೆ ಇದು... ಇದನ್ನ ಮಾಡಿ ಮುಗಿಸಬೇಕು" ಅನ್ನುವವ. ಯಾರದ್ದಾದರೂ ಮನೆಯಿಂದ ಮರಣದ ಸುದ್ದಿ ಬಂದಿದೆ ಎಂದರೆ ಈತ ಹಲಗೆಪಟ್ಟಿ ಹೆಗಲಿಗೆ ಏರಿಸಿಕೊಂಡು ಕೊಡತಿ, ಉಳಿ ಮೊಳೆ ಹಿಡಿದುಕೊಂಡು ಹೊರಟನೇ. ಸತ್ತವರ ಅಂದಾಜಿನ ಅಳತೆ ತೆಗೆದುಕೊಂಡು ಕೆಲಸ ಪ್ರಾರಂಭಿಸಿದನೆ. ಸತ್ತವರ ನೆಂಟರು ಇಷ್ಟರು ಬಂದರು ಅನ್ನುವಾಗ ಇವನ ಪೆಟ್ಟಿಗೆ ಸಿದ್ದ ಎಂದು ಅರ್ಥ. ಎಲ್ಲ ಕೆಲಸದಲ್ಲಿ ಜೋಸೆಫ್ ಹೀಗೆಯೇ.

ಈಗ ಏಳೆಂಟು ವರ್ಷಗಳಿಂದ ಜೋಸೆಫ್ ಕೆಲಸದ ಮೇಲಿನ ಗಮನವನ್ನ ಅವನ ಮಗ ಇಮ್ಮಾನುವೆಲ್ ಕಸಿದುಕೊಂಡಿದ್ದಾನೆ. ಇಮ್ಮಾನುವೆಲ್ ಹುಟ್ಟಿದ್ದು ಬೆತ್ಲಹೇಮಿನಲ್ಲಿಯೇ. ನಡುವೆ ಒಂದೆರಡು ವರ್ಷ ಆತ ಬೇರೆ ಬೇರೆ ಕಡೆ ಬೆಳೆದು ದೊಡ್ಡವನಾಗಿದ್ದಾನೆ. ಕಾರಣ ದೇಶವನ್ನಾಳುವ ದೊರೆ ಚಿಕ್ಕ ಮಕ್ಕಳನ್ನ ಶಿಕ್ಷೆಗೆ ಒಳಪಡಿಸುವ ವಿಚಿತ್ರ ಪದ್ಧತಿ ಜಾರಿಗೆ ತಂದಾಗ ಹೆಂಡತಿ ಮಗನ ಜೊತೆ ಜೋಸೆಫ್ ಊರು ಬಿಟ್ಟು ಬೇರೆಡೆ ವಲಸೆ ಹೋದದ್ದು ನಿಜ. ಆದರೆ ಈಗ ಆ ಭೀತಿ ಇಲ್ಲ. ಜೋಸೆಫ್, ಅವನ ಮಗ, ಹೆಂಡತಿ ಮೇರಿ, ಇದೇ ವಯಸ್ಸಿನ ಇತರೆ ಮಕ್ಕಳು ಈಗ ಸುಖವಾಗಿದ್ದಾರೆ.

ಜೋಸೆಫ್ ಮತ್ತು ಮೇರಿಯರ ಬದುಕಿನಲ್ಲಿ ಹೊಸ ಬೆಳದಿಂಗಳನ್ನ ತಂದವನು ಈ ಇಮ್ಮಾನುವೆಲ್. ಜೋಸೆಫನ ಇಳಿ ವಯಸ್ಸಿನಲ್ಲಿ ಹುಟ್ಟಿದವನು ಇಮ್ಮಾನುವೆಲ್. ತುಂಬ ಮುದ್ದಾದ ಹುಡುಗ. ಉದ್ದ ತಲೆ ಕೂದಲು, ತಂದೆಯ ಹಾಗೆಯೇ ಸದಾ ಸಮಾಧಾನ ಚಿತ್ತ, ಮುಖದ ಮೇಲೆ ಸದಾ ತಿಳಿನಗೆ. ಹಿರಿಯರಿಗೆ ಗೌರವ, ದೈವಭಕ್ತಿ, ಎಲ್ಲರೆದುರು ತಗ್ಗಿಬಗ್ಗಿ ನಡೆಯುವವ. ತಂದೆಯ ಕಾರ್ಯಾಗಾರದಲ್ಲಿ ಇದ್ದುಕೊಂಡು ತಂದೆಗೆ ಇತರೆ ಕೆಲಸಗಾರರಿಗೆ ಸಹಾಯ ಮಾಡುವ ಮನೋಭಾವ, ಅತ್ತ ತಾಯಿ ಮೇರಿಗೂ ಒಂದಲ್ಲಾ ಒಂದು ಕೆಲಸದಲ್ಲಿ ನೆರವಾಗುವವ.

ಈ ಇಮ್ಮಾನುವೆಲ್ ತನ್ನ ಓರಗೆಯ ಮಕ್ಕಳಿಗೆ ಅದೆಷ್ಟು ಪ್ರಿಯನಾಗಿದ್ದನೆಂದರೆ ಆ ಕೇರಿಯ ಅವನ ವಯಸ್ಸಿನ ಮಕ್ಕಳೆಲ್ಲ ಜೋಸೆಫನ ಅಂಗಡಿಯಲ್ಲಿ. ಈ ಮಕ್ಕಳು ಬೆಳಕು ಹರಿದಾಕ್ಷಣ ಇಲ್ಲಿಗೆ. ಇಮ್ಮುನನ್ನ ಕರೆದುಕೊಂಡೇ ಅವು ಶಾಲೆಗೆ ಹೋಗುತ್ತಿದ್ದುದು. ಅಲ್ಲಿ ಪಾಠ ಓದು ಬರಹವೆಲ್ಲ ಇಮ್ಮು ಜೊತೆಗೆ. ಸಂಜೆ ಶಾಲೆ ಮುಗಿದಾಕ್ಷಣ ಮತ್ತೆ ಇಮ್ಮು ಮನೆ. ಜೋಸೆಫನ ಬಡಗಿ ಶಾಲೆ ಈ ಮಕ್ಕಳ ಆಟದ ಇನ್ನೊಂದು ಜಾಗವೂ ಹೌದು, ಕಲಿಕೆಯ ಮತ್ತೊಂದು ಜಾಗವೂ ಹೌದು. ಮಕ್ಕಳು ಅಲ್ಲಿರುವ ಹತ್ಯಾರಗಳನ್ನ ಹಿಡಿದು ಅದು ಇದು ಮಾಡುತ್ತಿದ್ದರು. ಜೋಸೆಫ್ ಈ ಮಕ್ಕಳ ಮೇಲೆ ಒಂದು ಕಣ್ಣನ್ನ ಇರಿಸಿಕೊಂಡೇ ಇರುತ್ತಿದ್ದ. ಅಲ್ಲಿ ಬಳಸುತ್ತಿದ್ದ ಉಳಿ ಕೊಡತಿ ಗರಗಸ ಬಾಚಿ ಇತ್ಯಾದಿಗಳನ್ನ ಈ ಮಕ್ಕಳು ಎಲ್ಲಿ ದುರುಪಯೋಗಪಡಿಸಿಕೊಂಡು ಮೈ ಕೈಗೆ ಗಾಯ ಮಾಡಿಕೊಳ್ಳುತ್ತಾರೋ ಎಂಬ ಭೀತಿ ಇವನಿಗೆ. ಈ ಕಾರಣದಿಂದಲೇ ಸದಾ ಆತ ಮಕ್ಕಳಿಗೆ "ಹುಷಾರು, ಬಾಚಿ ಕೈ ಮೇಲೆ ಬಂದೀತು. ಗರಗಸ ಕೈಗೆ ತಾಗೀತು" ಎಂದು ಹೇಳುತ್ತಲೇ ಇರುತ್ತಿದ್ದ.

ಜೊತೆಗೆ, ಮಕ್ಕಳಿಗೆ ಈ ಹತ್ಯಾರ ಹಿಡಿದು ಏನನ್ನಾದರೂ ಮಾಡಬೇಕು ಅನ್ನುವ ಹಂಬಲ. ಅದನ್ನೂ ಪ್ರೋತ್ಸಾಹಿಸುತ್ತಿದ್ದ ಜೋಸೆಫ್. ಮಕ್ಕಳಿಗೆ ಅದು ಇದು ಮಾಡಿಯೂ ಕೊಡುತ್ತಿದ್ದ. ಅವುಗಳನ್ನ ಹೇಗೆ ಮಾಡಬೇಕು ಎಂಬುದನ್ನ ಹೇಳಿಕೊಡುತ್ತಿದ್ದ. ಮಕ್ಕಳು ಈ ಆಟಿಗೆಗಳನ್ನ ಕೈಯಲ್ಲಿ ಹಿಡಿದು ಸಂಭ್ರಮಿಸಿದರೆ. ಅದನು ನೋಡಿ ಜೋಸೆಫ್ ಸಂತಸಪಡುತ್ತಿದ್ದ.

ಮಕ್ಕಳು ಅಲ್ಲಿ ದೊರೆಯುತ್ತಿದ್ದ ಮರದ ಹಲಗೆ, ಪಟ್ಟಿ, ದಿಮ್ಮಿಗಳಿಂದ ಬುಗುರಿ, ಚಿನ್ನಿ, ದಾಂಡು, ಚೆಂಡು ಇತ್ಯಾದಿಗಳನ್ನ ಮಾಡುತ್ತಿದ್ದರು. ಅವುಗಳನ್ನ ತಾವೇ ಮಾಡಿದ್ದು ಅನ್ನುವ ಸಂತಸ ಅವುಗಳಿಗೆ. ಈ ಸಂತಸಕ್ಕೆ ಪ್ರೋತ್ಸಾಹದ ನೀರೆರೆಯುತ್ತಿದ್ದ ಜೋಸೆಫ್. ಮಕ್ಕಳು ಮಾಡುತ್ತಿದ್ದ ತಪ್ಪುಗಳನ್ನ ಆತ ತಿದ್ದುತ್ತಿದ್ದ. ಬಾಚಿ ಹೀಗೆ ಹಿಡಿಯಿರಿ, ಇಲ್ಲಿ ಹೊಡೆಯಿರಿ, ಗರಗಸದಿಂದ ಇಲ್ಲಿ ಕತ್ತರಿಸಿ ಎಂದೆಲ್ಲ ಹೇಳಿಕೊಡುತ್ತಿದ್ದ. ಮಕ್ಕಳು ಕೂಡ ಸಂತಸದಿಂದ ಕಲಿಯುತ್ತಿದ್ದವು.

ಬೆಥನಿ ಲಾಜರಸ್ಸನ ಮಗ ಸಿಲ್ಲು ಒಂದು ಪುಟ್ಟ ಬುಗುರಿ ಮಾಡಿದ. ಜೋಸೆಫ್ ಅದಕ್ಕೊಂದು ಮೊಳೆ ಹೊಡೆದು ಕೊಟ್ಟ, ಹಗ್ಗ ಸುತ್ತಿ ನೆಲಕ್ಕೆ ಬಿಟ್ಟಾಗ ಅದು ಸುರುಗಟ್ಟಿಕೊಂಡು ಸುತ್ತಿ ನಿದ್ದೆ ಮಾಡಿತು. ಅಂಗಡಿಯ ಕೆಲಸಗಾರರು ಇತರೆ ಮಕ್ಕಳು ಇದನ್ನ ನೋಡಿ ಕುಣಿದಾಡಿದರು. ಜುದೇಯದ ಸಿಂಗಾರಿ ಮಗ ಚಿಂಗಾರಿ ಒಂದು ಚಕ್ರ ಕೆತ್ತಿದ. ಅದು ನೆಲದ ಮೇಲೆ ಅಷ್ಟು ದೂರ ಉರುಳಿಕೊಂಡು ಹೋದಾಗ ಇತರರು ಅದನ್ನ ನೋಡಿ ಕುಣಿದಾಡಿದರು. ನಾಯಿನ್‌ನ ಲಾಜರಸ ಒಂದು ಸಣ್ಣ ತೊಟ್ಟಿಲು ಮಾಡಿದ. ನಜರೇತಿನ ದುಮಿಂಗ ಮರದ ಪಟ್ಟಿಗಳನ್ನ ಜೋಡಿಸಿ ಒಂದು ಸಣ್ಣ ಮನೆ ಮಾಡಿದ. ಜೋಸೆಫ್ ಇವರೆಲ್ಲರ ಬೆನ್ನು ತಟ್ಟಿದ. ಜೊತೆಗೆ "ಉಳಿ ಬಾಚಿ ಹಿಡೀತೀರಾ... ಹುಷಾರು" ಎಂದು ಹೇಳಲು ಮರೆಯಲಿಲ್ಲ.

## ನಾನೊಂದು ಬಸ್ಸಾಗಿ, ನಾ ಮಾಡಿದ ತಪ್ಪೇನು?

**ಕು**ಡಿಯಲು ನೀರಿಲ್ಲ
ರೈತನಿಗೆ ಬದುಕಿಲ್ಲ
ಗಂಜಿಗೂ ಗತಿಯಿಲ್ಲ,

ಭೂಮಿಯ ಬಿರುಕಲ್ಲಿ
ಪ್ರತಿಭಟನೆಯ ಕಾವಿನಲ್ಲಿ
ವ್ಯವಸ್ಥೆಯ ವಿರುದ್ಧ ಕೂಗಿನಲ್ಲಿ

ನಾನೊಂದು ಬಸ್ಸಾಗಿ
ನಿಮ್ಮ ಸೇವೆ ಮಾಡುತ್ತಿದ್ದಾಗ

ನನಗೆ ಹಚ್ಚಿದ ಬೆಂಕಿಯಲ್ಲಿ
ಕಲ್ಲೇಟಿಗೆ ಪುಡಿಯಾದ ಗಾಜಿನಲ್ಲಿ
ಮರೆಯಾದ ನನ್ನ ಕಣ್ಣೀರ ಹನಿಗಳಲ್ಲಿ
ಅಡಗಿದ ಯಾತನೆ ನಿಮಗೇಕೆ ತಿಳಿಯಲಿಲ್ಲ?

ನಾ ಮಾಡಿದ ತಪ್ಪಾದರೂ ಏನು?
ನಾನೊಂದು ಬಸ್ಸಾಗಿ
ನಿಮ್ಮ ಸೇವೆಗೆ ಜಂಗಮವಾಗಿದ್ದೇ ತಪ್ಪೇ?...

**ವೆಂಕಟೇಶ ಕೆ. ಜನಾದ್ರಿ, ಕನಕಗಿರಿ**
ಲೆಕ್ಕಪತ್ರ ಅಧೀಕ್ಷಕ, ಈಕರಸಾ.ಸಂಸ್ಥೆ
ಕೇಂದ್ರ ಕಛೇರಿ, ಕಲ್ಬುರ್ಗಿ-೫೮೫೧೦೩

ಮಕ್ಕಳೆಲ್ಲ ತನ್ನ ಬಡಗಿ ಶಾಲೆಯಲ್ಲಿ ಒಂದಲ್ಲ ಒಂದನ್ನ ಕಲಿಯುವಾಗ ತನ್ನ ಮಗ ಇಮ್ಮಾನುವೆಲ್ ಏನು ಮಾಡುತಿದ್ದಾನೆ ಅನ್ನುವ ಕುತೂಹಲ ಜೋಸೆಫ್‌ನನ್ನ ಕಾಡದೆ ಇರಲಿಲ್ಲ. ಮಗ ಇಮ್ಮಾನುವೆಲ್ ಬಹಳ ಮಾತು ಆಡುವವನಲ್ಲ. ಸದಾ ಶಾಂತ ಗಂಭೀರ. ಎಷ್ಟು ಬೇಕೋ ಅಷ್ಟು ಮಾತು. ಈ ಮಾತು ಕೂಡ ಅರ್ಥಪೂರ್ಣ. ನೇರವಾಗಿ ಮನಸ್ಸಿಗೆ ತಾಗುವಂತಹದು.

ತನ್ನ ವಯಸ್ಸಿಗೆ ಮೀರಿದ ಒಂದು ಪ್ರೌಢಿಮೆ ಅವನ ಮಾತಿನಲ್ಲಿ ಇರುತ್ತಿತ್ತು. ಸದಾ ಯಾವುದೋ ಲೋಕದಲ್ಲಿ ಇದ್ದಂತೆ ಆತ ಮಾತನಾಡುತ್ತಿದ್ದ. ನೋಡಲು ಹುಡುಗನಂತೆ ಇದ್ದರೂ ಮಾತಿನಲ್ಲಿ ಆತ ಸದಾ ಹಿರಿಯನಂತೆ ಗೋಚರಿಸುತ್ತಿದ್ದ. ಬಾಯಿ ತೆರೆದರೆ ನಾಳೆಗಳ ಕುರಿತು ಆತ ಮಾತನಾಡುತ್ತಿದ್ದ. ಬಹಳ ದೂರದಲ್ಲಿ ಇರುವ ಒಂದು ಸತ್ಯವನ್ನ ತಂದು ಮುಂದೆ ನಿಲ್ಲಿಸುತ್ತಿದ್ದ. ಇದರಿಂದಾಗಿ ಅವನ ತಾಯಿ, ಅಜ್ಜಿ ಅನ್ನಾ, ತಂದೆ ಜೋಸೆಫ್ "ನಮಗೆ ಅರ್ಥ ಆಗುವ ಹಾಗೆ ಮಾತನಾಡು ಇಮ್ಮು" ಎಂದು ಗೋಗರೆಯುತ್ತಿದ್ದರು. ಆದರೂ ಆತನ ಮಾತಿನ ರೀತಿ, ವರ್ತನೆ ಬದಲಾಗಿರಲಿಲ್ಲ. ಹೀಗಾಗಿ ಈ ತಂದೆ ತಾಯಿಗೆ ಇದೊಂದು ಚಿಂತೆ ಆಗಿತ್ತು. ಈ ಇಮ್ಮಾನುವೆಲ್ ಕೂಡ ಉಳಿದ ಮಕ್ಕಳ ಹಾಗೇ ಏನೋ ಮಾಡುತ್ತಿದ್ದಾನೆ ಎಂಬುದು ಜೋಸೆಫನ ನಿರೀಕ್ಷೆ. ಆದರೆ ಮಗ ತೋರಿಸುತ್ತಿಲ್ಲವೆ? ಬಡಗಿ ಶಾಲೆಯ ಮೂಲೆಯೊಂದರಲ್ಲಿ ಮಗ ಎರಡು ಮೂರು ಮರದ ಪಟ್ಟಿಗಳನ್ನ ಜೋಡಿಸಿಕೊಂಡು ಏನೋ ಮಾಡುತ್ತಿದ್ದಾನೆ. ಆದರೆ ಅದು ಏನು ಎಂಬುದನ್ನ ತಿಳಿಯಲು ಜೋಸೆಫ್ ಯತ್ನಿಸಿದ. ಆದರೆ ಅವನಿಂದ ಸಾಧ್ಯವಾಗಲಿಲ್ಲ. ಒಮ್ಮೆ ಹೆಂಡತಿ ಮೇರಿಯ ಮುಂದೆ ಪ್ರಸ್ತಾಪಿಸಿ ನೋಡಿದ. ಆಕೆ ಕೂಡ ನನಗೆ ತಿಳಿಯುತ್ತಿಲ್ಲ. ಆದರೆ ಇಮ್ಮು ಏನೋ ಮಾಡುತ್ತಿದ್ದಾನೆ ಎಂದಳು.

ಅದು ಏನು ಅನ್ನುವುದನ್ನ ಕಂಡುಹಿಡಿಯಲು ಗಂಡ ಹೆಂಡತಿಗೆ ಏಳೆಂಟು ದಿನಗಳು ಬೇಕಾದವು. ಕೊನೆಗೊಂದು ದಿನ ಜೋಸೆಫ್ ಮೂಲೆಯಲ್ಲಿ ಮಗ ಮಾಡಿ ಇರಿಸಿದ ಕ್ರೂಜೆಯನ್ನ ಹಿಡಿದುಕೊಂಡು ಬಂದ. ಒಂದು ಉದ್ದ ಪಟ್ಟಿ ಅದರ ಅಡ್ಡಕ್ಕೆ ಇನ್ನೊಂದು ಸಣ್ಣ ಪಟ್ಟಿ . ಅದನ್ನ ನೋಡಿದ್ದೆ ಜೋಸೆಫನ ಮೈ ಸಣ್ಣಗೆ ಬೆವರಿತು. ಈ ಕ್ರೂಜೆ ರೋಮನ್ನರು ಕಳ್ಳರಿಗೆ, ಕೊಲೆಗಾರರಿಗೆ, ದರೋಡೆಕೋರರಿಗೆ, ಸಮಾಜ ದ್ರೋಹಿಗಳಿಗೆ ಶಿಕ್ಷೆ ನೀಡಲು ಉಪಯೋಗಿಸುತ್ತಿದ್ದ ಒಂದು ಸಾಧನ. ಈ ವ್ಯಕ್ತಿಗಳನ್ನ ವಿಚಾರಣೆ ಮಾಡಿ, ಅವರಿಗೆ ಶಿಲುಬೆಯ ಶಿಕ್ಷೆ ವಿಧಿಸಿ, ಊರ ಹೊರಗಿನ ಒಂದು ಪ್ರದೇಶಕ್ಕೆ ಅವರ ಹೆಗಲ ಮೇಲೆ ಈ ಶಿಲುಬೆ ಹೊರೆಸಿ ಕರೆತಂದು ಅಲ್ಲಿ ಅವರನ್ನ ಶಿಲುಬೆಗೆ ಏರಿಸಿ ಕೊಲ್ಲುತ್ತಿದ್ದರು. ಹೀಗಾಗಿ ಈ ಶಿಲುಬೆಯ ಆಕಾರ ಕಂಡರೆ ಜನ ಹೆದರುತ್ತಿದ್ದರು. ಬೆದರುತ್ತಿದ್ದರು. ಇಂತಹ ಒಂದು ಶಿಲುಬೆಯ ಮಾದರಿಯನ್ನ ಮಗ ಆಟಿಗೆಯನ್ನಾಗಿ ಮಾಡಿಕೊಂಡಿದ್ದಾನೆಯೇ? ಜೋಸೆಫ್ ತನ್ನ ಕೈಲಿದ್ದ ಕ್ರೂಜೆಯನ್ನ ದಿಟ್ಟಿಸಿದ. ಅದು ಅವನಿಗೆ ಹೊಸದಾಗಿ ಇರಲಿಲ್ಲ. ಎಷ್ಟೋ ಸಾರಿ ಇಂತಹ ಒಂದು ಕ್ರೂಜೆ ಮಾಡಿಕೊಡುವಂತೆ ಅವನ ಮುಂದೆ ಬೇಡಿಕೆ ಇಡುವುದಿತ್ತು. ನಜರೇತದ ಹತ್ತಿರದ ಯಾವುದೋ ಊರಿನ ಹೆಸರು ಹೇಳಿ ಅಲ್ಲೊಬ್ಬ ಸಮಾಜದ್ರೋಹಿಗೆ ಶಿಲುಬೆಯ ಮೇಲಿನ ಶಿಕ್ಷೆ ನೀಡಬೇಕೆಂದು ಅದಕ್ಕಾಗಿ ಈ ಕ್ರೂಜೆ ಬೇಕೆಂದೂ ಹೇಳುತ್ತಿದ್ದರು. ಆಗ ಜೋಸೆಫ ವಿನಯದಿಂದ "ಅಣ್ಣಾ, ನಾನು ಈ ಒಂದು ಕೆಲಸ ಮಾಡಲಾರೆ... ನೀವು ಬೇರೊಬ್ಬರಿಂದ ಈ ಕೆಲಸ ಮಾಡಿಸಿಕೊಳ್ಳಬಹುದಲ್ಲ..." ಎಂದು ವಿನಯದಿಂದ ಹೇಳುವುದಿತ್ತು. ಆದರೆ ಈಗ ಈ ಪರಿಸ್ಥಿತಿ ಬದಲಾಯಿತೆ ? ತನ್ನ ಮಗನೇ ಈ ಅಪಾಯಕಾರಿಯಾದ ವಸ್ತುವನ್ನ ಸಿದ್ಧಪಡಿಸಲು ಮುಂದಾದನೆ? ಜೋಸೆಫ "ಇದು ಏನೋ ಅಶುಭವನ್ನ ಸಾರುತ್ತಿದೆ ಮೇರಿ" ಎಂದು ಹೆಂಡತಿಯ ಮುಖ ನೋಡಿದ. ಮೇರಿ ತುಟಿ ಕಚ್ಚಿಕೊಂಡಳು. ಸಣ್ಣಗೆ ಅವಳ ಹೃದಯ ಕಂಪಿಸಿತು. "ದೇವರೇ, ಇಮ್ಮುನ ಯಾವ ಸ್ನೇಹಿತರೂ ಇಂತಹ ಆಟಿಗೆ ಮಾಡಿಕೊಂಡಿಲ್ಲ. ಚಿನ್ನಿ, ದಾಂಡು, ಬುಗುರಿ, ಗಾಡಿ, ಗಾಲಿ, ಬೊಂಬೆ, ಎಂದೆಲ್ಲ ಮರದಲ್ಲಿ ಕೆತ್ತಿ ಅದನ್ನ ಕೈಯಲ್ಲಿ ಹಿಡಿದು ಅವರು ತಿರುಗಾಡುವಾಗ ಎಷ್ಟು ಚೆನ್ನಾಗಿ ಕಾಣುತ್ತದಲ್ಲ. ಇವನೇಕೆ ಇದನ್ನ ಮಾಡಿಕೊಂಡ. ಸೈತಾನ ಇವನಿಗೆ ಯಾವ ಕಾರಣಕ್ಕೆ ಇಂತಹ ಪ್ರೇರಣೆ ನೀಡಿದ ದೇವರೇ..."

ಮೇರಿ ಸೊಂಟದ ವಸ್ತ್ರದ ತುದಿಯನ್ನ ಬಾಯಿಗೆ ತುರುಕಿಕೊಂಡು ಅಳತೊಡಗಿದಳು. ಜೋಸೆಫ ಅವಳಿಗೆ ಏನು ಉತ್ತರ ನೀಡಬೇಕು ಅನ್ನುವುದು ತಿಳಿಯದೆ ಆತಂಕದಲ್ಲಿ ನಿಂತ. "ನಾನು ಇಮ್ಮುನ ಜೊತೆ ಮಾತನಾಡಿ ಅವನ ಹೃದಯದಲ್ಲಿ ಏನು ಇದೆ ಎಂಬುದನ್ನ ತಿಳಿಯುತ್ತೇನೆ ನೀನು ಆತಂಕಕ್ಕೆ ಒಳಗಾಗಬೇಡ... ನಮ್ಮ ಮಗ ಅಡ್ಡ ಹಾದಿ ಹಿಡಿಯಲಾರ, ಅಳಬೇಡ" ಎಂದು ಮೇರಿಗೆ ಸಮಾಧಾನ ಮಾಡಿದ ಬಡಗಿ ಜೋಸೆಫ. ಯೋಚಿಸುತ್ತಲೇ ಮೇರಿ ಮನೆಯ ಕೆಲಸಗಳಲ್ಲಿ ತೊಡಗಿಕೊಂಡಳು.

ಜೋಸೆಫನಿಗೆ ಈ ವಿಷಯ ಮರೆಯಲಾಗಲಿಲ್ಲ. ಚಿಕ್ಕ ಮಕ್ಕಳು ಏನೆಂದರೂ ಚಿಕ್ಕ ಮಕ್ಕಳೇ. ಅವರು ದೊಡ್ಡವರಂತೆ ಯೋಚಿಸಲಿಕ್ಕೆ ಸಾಧ್ಯವಿಲ್ಲವಾದರೂ ದೊಡ್ಡವರಾದ ಮೇಲೆ ಅವರು ಏನಾಗುತ್ತಾರೆ ಅನ್ನುವುದು ಚಿಕ್ಕಂದಿನ ಅವರ ವರ್ತನೆ ಸಾರಿ ಹೇಳುತ್ತದೆ ಅಲ್ಲವೆ? ಚಿಕ್ಕಮಕ್ಕಳು ಚಿಕ್ಕಂದಿನಲ್ಲಿ ಆಟ ಆಡಲಿಕ್ಕೆಂದು ಏನೋ ಒಂದನ್ನ ಮಾಡಿಕೊಳ್ಳುತ್ತಾರೆ ಅಂದರೆ ಅದರಲ್ಲಿ ಅವರಿಗೆ ಪ್ರಿಯವಾದದ್ದು ಏನೋ ಇರುತ್ತದೆ. ಈಗ ಇಮ್ಮಾನುವೆಲ್‌ನ ಸಂಗಾತಿಗಳಾದ ಮಕ್ಕಳು ಆಡಲಿಕ್ಕೆ ಏನೆಲ್ಲ ಮಾಡಿಕೊಂಡಿಲ್ಲ. ಬುಗುರಿ, ಚಿನ್ನಿ, ಚೆಂಡು ದಾಂಡು, ಮನೆ, ಗಾಡಿ, ಗೊಂಬೆ, ಇವೆಲ್ಲ ಮಕ್ಕಳ ವಯಸ್ಸಿಗೆ ಸುಖ ಸಂತೋಷ ನೀಡುವಂತಹ ವಸ್ತುಗಳು. ಆದರೆ ಈ ಕ್ರೂಜೆ ಯಾವ ಮಗುವಿಗೆ ಸಂತಸ ಸಂಭ್ರಮ ನೀಡುತ್ತದೆ. ಇದನ್ನ ಕೈಯಲ್ಲಿ ಹಿಡಿದರೆ ಯಾವ ಮಗು ಸಂಭ್ರಮಪಡುತ್ತದೆ !

ಜೋಸೆಫ ಎಂಟು ದಿನ ಇದೇ ವಿಷಯ ಕುರಿತು ಚಿಂತಿಸಿದ. ಅವನಿಗೆ ಒಂದು ದಾರಿ, ಒಂದು ಉತ್ತರ ದೊರಕಲಿಲ್ಲ. ಅದೊಂದು ದಿನ ಜೋಸೆಫ ಒಬ್ಬನೇ ತನ್ನ ಅಂಗಡಿಯಲ್ಲಿ ಇದ್ದ. ಇಮ್ಮಾನುವೆಲ್ ಮೂಲೆಯಲ್ಲಿ ಕುಳಿತು ಆ ಕ್ರೂಜೆಗೆ ಅಲಂಕಾರ ಮಾಡುತ್ತಿದ್ದ. ಜೋಸೆಫ್ ನೇರವಾಗಿ ಮಗನ ಬಳಿ ಹೋದಾಗ ಮಗ ಕೊಂಚ ಗಾಬರಿಗೊಂಡ. "ಗಾಬರಿ ಬೇಡ ಇಮ್ಮು, ನಾನು ಬಹಳ ದಿನಗಳಿಂದ ಒಂದು ಪ್ರಶ್ನೆ ಕೇಳಬೇಕೆಂದಿದ್ದೆ... ಇಂದು ಅದು ಸಾಧ್ಯವಾಗಿದೆ. ಮಗೂ, ನಿನ್ನ ಸಂಗಾತಿಗಳೆಲ್ಲ ಆಟ ಆಡಲು ವಿವಿಧ ವಸ್ತುಗಳನ್ನ ಮಾಡಿಕೊಂಡಿದ್ದಾರೆ. ಆದರೆ ನೀನು ನೋಡಿದರೆ ಭೀತಿ ಹುಟ್ಟಿಸುವ ಈ ಆಟಿಗೆಯನ್ನ ಮಾಡಿಕೊಂಡಿರುವಿ... ಇದರ ಆಂತರ್ಯ ಏನು ಮಗು? ಈ ಕ್ರೂಜೆಯಲ್ಲಿ ನೀನು ಏನನ್ನ ಕಂಡೆ... ಇದನ್ನ ನೋಡಿದರೆ ನಿನಗೆ ಹೆದರಿಕೆ ಭೀತಿ ಆಗುವುದಿಲ್ಲವೆ ?" ಅಡ್ಡ ಮೇಜಿನ ಮೇಲೆ ಇರಿಸಿದ ಕ್ರೂಜೆಯನ್ನ ಇಮ್ಮಾನುವೆಲ್ ಕೈಗೆತ್ತಿಕೊಂಡ ಹಾಗೂ ಅದನ್ನ ತನ್ನ ಎದೆಗೆ ಒತ್ತಿಕೊಂಡು ನುಡಿದ "ಇಲ್ಲ ಅಪ್ಪ... ಇದರಲ್ಲಿ ನನಗೆ ಭೀತಿ ಆತಂಕ ಕಾಣುತ್ತಿಲ್ಲ. ಮುಂದೊಂದು ದಿನ ಜನ ಇದರ ಮೂಲಕ ತಮ್ಮ ರಕ್ಷಣೆಯನ್ನ ಪಡೆಯಲಿದ್ದಾರೆ ಎಂಬುದು ನನ್ನ ನಂಬಿಕೆ. ಇಂತಹ ವಸ್ತುವನ್ನ ನಾನು ಭೀತಿ ಆತಂಕದಿಂದ ಏಕೆ ನೋಡಲಿ? ಯಾವ ವಸ್ತು ಜಗತ್ತಿನ ಎಲ್ಲರ ಬಿಡುಗಡೆಯ ಸಂಕೇತವಾಗಲಿದೆಯೋ ಅದು ನನ್ನಲ್ಲಿ ಭೀತಿಯನ್ನ ಹುಟ್ಟಿಸುವುದು ಹೇಗೆ? ಇದನ್ನ ಹಿಡಿದವರಿಗೆ ಮುಕ್ತಿ ಸಿಗಲಿರುವಾಗ ನಾನಿದನ್ನ ಶಾಪ ಎಂದು ಹೇಗೆ ತಿಳಿಯಲಿ" ಇಮ್ಮಾನುವೆಲ್ ತನ್ನ ಮಾತಿನ ಓಘಕ್ಕೆ ಸಿಲುಕಿ ಮೈಮರೆತಿರಲು ಜೋಸೆಫ್ ತುಂಬಿ ಬಂದ ತನ್ನ ಕಣ್ಣುಗಳನ್ನ ಒರೆಸಿಕೊಂಡ. ಇಮ್ಮಾನುವೆಲ್ ಮತ್ತೆ ಮತ್ತೆ ಆ ಕ್ರೂಜೆಯನ್ನ ತುಟಿಗೆ, ಕಣ್ಣಿಗೆ ಒತ್ತಿಕೊಳ್ಳುತ್ತಿರಲು ಜೋಸೆಫ್ ಅವಕ್ಕಾಗಿ ಆ ದೃಶ್ಯವನ್ನ ನೋಡುತ್ತ ನಿಂತ.

ಡಾ|| ನಾ. ಡಿಸೋಜ
ನೆಹರು ನಗರ, ಸಾಗರ – ೫೭೭ ೪೦೧, ಶಿವಮೊಗ್ಗ ಜಿಲ್ಲೆ






## ಮುಂತಾಜ್ ಮತ್ತು ಇತರೆ ಕಥೆಗಳು

*ನೂರ್‌ಜಹಾನ್*

**ಪುಟ :** ೧೫೨

**ಬೆಲೆ : ರೂ.** ೧೫೦

**ಆಶಾ ಪ್ರಕಾಶನ,** ಹೊಸಪೇಟೆ

*ಭಾರತದಲ್ಲಿ ಬಡ ಮುಸ್ಲಿಂರ ಬದುಕು ಕಷ್ಟದ ಲೋಕವಾಗಿದೆ. ಅದೂ ಕೂಡ ಮಹಿಳೆಯರ ಕಷ್ಟಕಾರ್ಪಣ್ಯಗಳನ್ನು ಹತ್ತಿರದಿಂದ ನೋಡಿದವರಿಗೆ ಮತ್ತು ಅದನ್ನು ಅನುಭವಿಸಿದವರಿಗೆ ಮಾತ್ರ ಅದರ ಆಳ–ವಿಸ್ತಾರದ ಅರಿವಿರುತ್ತದೆ. ಈ ಆಳ–ವಿಸ್ತಾರದ ಅನುಭವವಿರುವ ನೂರ್‌ಜಹಾನ್ ಅವರ 'ಮುಂತಾಜ್ ಮತ್ತು ಇತರೆ ಕಥೆಗಳು' ಇದರಲ್ಲಿ ದಟ್ಟವಾಗಿ ನೋಡಬಹುದು. ಹನ್ನೊಂದು ಕಥೆಗಳೂ ಕಷ್ಟಗಳನ್ನು ತಮ್ಮ ಹೆಗಲ ಮೇಲೆ ಹೊತ್ತುಕೊಂಡೇ ಸಾಗುತ್ತವೆ. ಹೈದ್ರಾಬಾದ್–ಕರ್ನಾಟಕ ಪರಿಸರವಾಗಲಿ, ಮುಸ್ಲಿಂರು ಇರುವ ಯಾವುದೇ ಸ್ಲಂ, ಮೊಹಲ್ಲಾಗಳಾಗಲಿ ಅವರ ಸಮಸ್ಯೆಗಳು ಒಂದೇ ರೀತಿಯಾಗಿರುತ್ತವೆ. ಕೆಲವು ಕಡೆ ಮುಸ್ಲಿಂರ ಜೊತೆಗೆ ಇತರೆ ಜನಾಂಗಗಳ ಕುಟುಂಬಗಳು ಇರುತ್ತವೆ. ದಲಿತ, ಹಿಂದುಳಿದ ಮತ್ತು ಮುಸ್ಲಿಂ ಮಹಿಳೆಯರ ನೋವು ನಿರಾಸೆ, ನಿಟ್ಟುಸಿರು, ಅವಮಾನ ಅವರ ದೈನಂದಿನ ಬದುಕಿನಲ್ಲಿ ಮಡುಗಟ್ಟಿ ನಿಂತಿರುತ್ತದೆ. ಸಾಮಾಜಿಕ, ಕೌಟುಂಬಿಕ ಸಂಕೋಲೆಗಳ ಮಧ್ಯೆ ಸಿಕ್ಕಿಕೊಂಡ ಹುಳುಗಳಂತೆ ಅವರ ಬದುಕು ಪರಿತಪಿಸುತ್ತಿರುತ್ತದೆ. ಅನಕ್ಷರತೆ, ಬಡತನ, ವರದಕ್ಷಿಣೆ, ಬಾಲ್ಯವಿವಾಹ, ತಲಾಖ್, ಬಹುಪತ್ನಿತ್ವಗಳಿಂದ ಜರ್ಝರಿತವಾಗಿರುವ ಮಹಿಳಾಲೋಕ ಗಂಡು ಜೀವಿಗಳಿಂದ ತಲ್ಲಣಿಸಿ ಹೋಗಿರುತ್ತದೆ. ಆದರೂ ಗಟ್ಟಿ ಮನಸ್ಸಿನ ಈ ಮಹಿಳೆಯರು ಕುಟುಂಬಗಳನ್ನು ತಮ್ಮ ಭುಜಗಳ ಮೇಲೆ ಹೊತ್ತು ಸಾಗುತ್ತಿರುತ್ತಾರೆ. ಸರಳ ಭಾಷೆಯಲ್ಲಿ ಕಥೆಗಳನ್ನು ರಚಿಸಿರುವ ನೂರ್‌ಜಹಾನ್ ಅವರ ಅನುಭವದ ವಿವಿಧ ಮಗ್ಗುಲುಗಳು ಈ ಕಥೆಗಳಲ್ಲಿ ಅನಾವರಣಗೊಂಡು ಓದುಗರ ಮನಸ್ಸು ಕದಡಿಹೋಗುತ್ತದೆ.*

– ***ಡಾ॥ ಎಂ. ವೆಂಕಟಸ್ವಾಮಿ,*** *ಕಸವನಹಳ್ಳಿ ಮುಖ್ಯರಸ್ತೆ, ಬೆಂಗಳೂರು – ೫೬೦ ೦೩೫*

## ಕರ್ನಾಟಕದ ಲೋಹಿಯಾ ವಿಚಾರಗಳ ಒಂದು ವಿಮರ್ಶೆ

*ಯಡೂರ ಮಹಾಬಲ*

**ಪುಟ :** ೨೯೬ **ಬೆಲೆ : ರೂ.** ೨೦೦

**ಚಿಂತನ ಚಿಲುಮೆ ಪ್ರಕಾಶನ,** ಬೆಂಗಳೂರು

*ಯಡೂರ ಮಹಾಬಲ ಅವರು ಈ ಕೃತಿಯನ್ನು ಬರೆದಿದ್ದು ೩೮ ವರ್ಷಗಳ ಹಿಂದೆ. ಆದರೆ ಅವರು ಖಾಯಂ ನೌಕರಿಗೆ ಸೇರಿದ ಕಾರಣ ಪ್ರಕಟಿಸಲಾಗಿಲ್ಲ. ಇಂತಹ ವಿಚಾರಗಳ ಕೃತಿಯೊಂದು ಇದುವರೆಗೂ ಬಂದಿಲ್ಲ. ಈಗ ಒಂದಷ್ಟು ಪರಿಷ್ಕರಿಸಿ ಪ್ರಕಟಿಸಿದ್ದೇನೆ ಎಂದು ಹೇಳುತ್ತಾರೆ. ಮಾರ್ಕ್ಸ್‌ನ ಅರ್ಥಶಾಸ್ತ್ರದ ಟೀಕೆ, ಲೋಹಿಯಾ ಇತಿಹಾಸ ದೃಷ್ಟಿ, ಸಮಾಜವಾದ, ಹೊಸ ನಾಗರಿಕತೆಯ ಕನವರಿಕೆ, ಹಿಂಸೆ ಮತ್ತು ಅಹಿಂಸೆಯ ಪ್ರಶ್ನೆ, ಜಾತಿ ಸಮಸ್ಯೆ, ಭಾರತ–ಚೀನಾ ಗಡಿ ವಿವಾದ ಮತ್ತು ಭಾರತದ ಸೋಷಲಿಸ್ಟ್ ರಾಜಕೀಯ ಇಲ್ಲಿನ ಮುಖ್ಯ ಶೀರ್ಷಿಕೆಗಳು. ಜಾತಿ ಮತ್ತು ವರ್ಗಗಳ ಸ್ವರೂಪ ಮತ್ತು ಚಲನೆಗಳನ್ನು ಲೋಹಿಯಾ ಪರಿಗ್ರಹಿಸಿರುವ ರೀತಿ ಏಕೆ ಸರಿಯಾದ ಕ್ರಮವಲ್ಲ ಮತ್ತು ವೈಜ್ಞಾನಿಕ ನಿಷ್ಕರ್ಷೆಗೆ ಒಳಪಡಿಸಿದಾಗ ಸತ್ಯಕ್ಕೆ ಪೂರಕವಾಗಿಲ್ಲ ಎಂಬುದಾಗಿ ಇಲ್ಲಿ ಲೇಖಕರು ಚರ್ಚಿಸಿದ್ದಾರೆ. ಮಾರ್ಕ್ಸ್‌ನ ಅರ್ಥಶಾಸ್ತ್ರ ಕುರಿತಾಗಿ ಲೋಹಿಯಾ ತಳೆದಿರುವ ನಿಲುವುಗಳು ತಲೆಬುಡರಹಿತ ಮತ್ತು ವರ್ಗ ಎಂದರೆ ಚಲನಸಾಮರ್ಥ್ಯವುಳ್ಳ ಜಾತಿ ಎನ್ನುವುದು ಸರಿಯಲ್ಲ ಎಂಬುದಾಗಿಯೂ ಲೇಖಕರು ಹೇಳುತ್ತಾರೆ. "ಮೇಲ್ಮಟ್ಟದ ಜನರ ಹೃದಯ ಪರಿವರ್ತನೆಯಾಗುವಂತಹ, ಕೆಳಮಟ್ಟದ ಜನ ಮೇಲಕ್ಕೇರಬೇಕೆಂಬ ತಿಳುವಳಿಕೆ ಪಡೆಯುವಂತಹ ಕ್ರಾಂತಿಯನ್ನು ನಾನು ಇಚ್ಛಿಸುತ್ತೇನೆ. ಈ ಎರಡು ವರ್ಗಗಳು ಪರಸ್ಪರ ಸಹಕರಿಸತೊಡಗಿದರೆ ಪ್ರಪಂಚಕ್ಕೆ ಅದೊಂದು ಆದರ್ಶ ಸಮಾಜವಾದದ ಮಾರ್ಗವಾಗುತ್ತದೆ" ಎನ್ನುವುದು ಲೋಹಿಯಾ ಅವರ ಆಸೆ. ಸಾಕಷ್ಟು ವಿವರಣೆಗಳನ್ನು, ಚರ್ಚೆಗಳನ್ನು ಹೊಂದಿರುವ ಈ ಕೃತಿ ಒಳ್ಳೆಯ ಆಕರ ಕೃತಿಯಾಗಿದ್ದು ಲೋಹಿಯಾ ಅವರ ಬಗ್ಗೆ ಕುತೂಹಲ ಇರುವವರೆಲ್ಲ ಓದುವ ಕೃತಿಯಾಗಿದೆ.*

– ***ಡಾ॥ ಎಂ. ವೆಂಕಟಸ್ವಾಮಿ,*** *ಕಸವನಹಳ್ಳಿ ಮುಖ್ಯರಸ್ತೆ, ಬೆಂಗಳೂರು – ೫೬೦ ೦೩೫*



## ಬುದ್ಧ ಬಸವ ಅಂಬೇಡ್ಕರ್ – ಸಮಾನ ಚಿಂತನೆ

*ಡಾ॥ ಸಿ. ವೀರಣ್ಣ*

**ಪುಟ :** ೫೦+೮ **ಬೆಲೆ : ರೂ.** ೫೦

**ಕರ್ನಾಟಕ ಸಾಹಿತ್ಯ ಪರಿಷತ್ತು,** ೮೩/ಇ, ೧೫ನೇ ಮುಖ್ಯರಸ್ತೆ ವಿಜಯನಗರ, ಬೆಂ–೪೦

*ಡಾ॥ ಸಿ. ವೀರಣ್ಣ ಕನ್ನಡ ಸಾಹಿತ್ಯವನ್ನು ವಾಸ್ತವವಾದಿ ನೆಲೆಯಿಂದ ವಿಶ್ಲೇಷಿಸುವ ಪ್ರಮುಖ ಚಿಂತಕರಲ್ಲೊಬ್ಬರು. ಕನ್ನಡ ಸಾಹಿತ್ಯ ಚರಿತ್ರೆಯನ್ನೇ ಅಂಥ ಒಂದು ಒಳನೋಟದಿಂದ ರಚಿಸಿಕೊಟ್ಟಿದ್ದಾರೆ. ಪ್ರಸ್ತುತ ಅವರು ರಚಿಸಿರುವ ಕಿರುಹೊತ್ತಿಗೆ 'ಬುದ್ಧ ಬಸವ ಅಂಬೇಡ್ಕರ್ ಸಮಾನ ಚಿಂತನೆ'. ಇತಿಹಾಸ, ಸಮಾಜ, ಪ್ರಭುತ್ವ, ದೇವರು–ಧರ್ಮ–ಜಾತಿ, ಸಂಪತ್ತು, ಸ್ತ್ರೀ, ಇಂಥ ಹಲವಾರು ವಿಷಯಗಳಲ್ಲಿ ಮೂವರು ಚಿಂತಕರ ಸಮಾನ ಗ್ರಹಿಕೆ ಮತ್ತು ವಿಶ್ಲೇಷಣೆಗಳನ್ನು ಅವರ ಚಿಂತನೆಯಿಂದಲೇ ಆಯ್ದುಕೊಟ್ಟಿದ್ದಾರೆ. ಮಾರ್ಕ್ಸ್‌ವಾದಿ ಚಿಂತನೆಯ ಪ್ರಮುಖ ವಿಶ್ಲೇಷಣೆಗಳಲ್ಲೊಂದಾದ ಐತಿಹಾಸಿಕ ವಾಸ್ತವವಾದದ ನೆಲೆಯಿಂದ ಆರಂಭವಾಗುವ ಈ ಕೃತಿ ಬುದ್ಧ, ಬಸವ ಅಂಬೇಡ್ಕರ್ ಅವರ ಚಿಂತನೆಗಳ, ಮಹತ್ವದ ಹೇಳಿಕೆಗಳಿಂದ ಮುಂದುವರೆಯುತ್ತದೆ. ಜನಪರವಾದ ಚಿಂತಕರು ಯಾವ ಕಾಲದಲ್ಲಿದ್ದರೂ ಮೂಲಭೂತ ಪ್ರಶ್ನೆಗಳನ್ನು ಮನುಷ್ಯನ ಬದುಕುಕೇಂದ್ರಿತವಾಗಿಯೇ ನೋಡುತ್ತಾರೆ ಮತ್ತು ತಮ್ಮ ಅನುಭವಗಳ ಮೂಲಕ ಸಮಾಜಮುಖಿಯಾಗಿ ಪರಿಹಾರಗಳನ್ನು ಸೂಚಿಸುತ್ತಾರೆ. ಮೂರು ಚಿಂತನಧಾರೆಗಳು ಹೇಗೆ ಸಮಾಜ ಮುಖಿಯಾಗಿವೆ ಎನ್ನುವುದನ್ನು ಈ ಕೃತಿ ಆಧಾರಗಳ ಮೂಲಕ ತೋರಿಸುತ್ತದೆ.*

– ***ಶ್ರೀಸುಮಿತ್ರಾಸುತ ಅಗಸಬಾಳ,*** *ಬೆಂಗಳೂರು–೫೬೦ ೦೫೮*

## ಜೋಯ್ಡಾ ಕಾಡೊಳಗಿನ ಒಡಲು



*ಡಾ॥ ವಿಠ್ಠಲ ಭಂಡಾರಿ, ಯಮುನಾ ಗಾಂವ್ಕರ್*

**ಪುಟ :** ೧೮೪+೪ **ಬೆಲೆ : ರೂ.** ೧೪೦

**ಬಂಡಾಯ ಪ್ರಕಾಶನ,** ಅರೇಅಂಗಡಿ, ಹೊನ್ನಾವರ, ಉತ್ತರಕನ್ನಡ – ೫೮೧ ೩೩೪

*ಕರ್ನಾಟಕದ ತಾಲ್ಲೂಕು ಕೇಂದ್ರಗಳಲ್ಲಿ ಉತ್ತರಕನ್ನಡ (ಕಾರವಾರ) ಜಿಲ್ಲೆಯ ಜೋಯ್ಡಾ ವಿಶಿಷ್ಟವಾದದ್ದು. ಈ ಜೋಯ್ಡಾ ಎಂಬ ಊರು ಹಳ್ಳಿಯೆಂದರೆ ಕೋಪಗೊಳ್ಳುತ್ತದೆ, ನಗರವೆಂದರೆ ನಾಚಿಕೊಳ್ಳುತ್ತದೆ. ವಾಹನದಲ್ಲಿ ಹೊರಟರೆ ಜೋಯ್ಡಾ ಬಂತು ಅಂತ ಹೇಳಿದರೆ ಎಲ್ಲಿ ಎಂದು ನೋಡುವಷ್ಟರಲ್ಲಿ ಆ ಊರು ದಾಟಿಯೇ ಹೋಗುತ್ತದೆ. ಜೋಯ್ಡಾ ಊರಿನಂತೆ ಆ ತಾಲ್ಲೂಕು ಸಹ ಅಷ್ಟೇ ವಿಶಿಷ್ಟವಾದದ್ದು. ವಿಸ್ತೀರ್ಣ ೧೯೧೦.೪೪ ಚ.ಕಿ.ಮೀ, ೩ ಹೋಬಳಿ, ೧೫ ಗ್ರಾಮ ಪಂಚಾಯಿತಿ, ೧೧೪ ಜನವಸತಿ ಪ್ರದೇಶ. ಜನಸಂಖ್ಯೆ ಮಾತ್ರ ೫೨೦೧೨. ಅಪಾರವಾದ ನೈಸರ್ಗಿಕ ಸಂಪತ್ತನ್ನು, ಸಾಂಸ್ಕೃತಿಕ ಸಂಪತ್ತನ್ನು ಹೊಂದಿದೆ. ಆದರೆ ಅಭಿವೃದ್ಧಿಯಲ್ಲಿ ತೀರ ಹಿಂದೆ ಬಿದ್ದಿದೆ. ಅಲ್ಲಿಯ ಸಾಮಾನ್ಯ ಜನರ ಬದುಕು ಅಸಹನೀಯವಾಗಿದೆ. ಅದರಲ್ಲೂ ಆದಿವಾಸಿಗಳು, ಮೂಲನಿವಾಸಿಗಳು, ಕಾಡು ಜನರ ಬದುಕು ಅಭಿವೃದ್ಧಿಯ ಅಂಚಿನಲ್ಲೂ ಇಲ್ಲ. ಮುಖ್ಯವಾಗಿ ಅವರನ್ನು ಇನ್ನೂ ಟ್ರೈಬಲ್‌ಗಳೆಂದೇ ಗುರ್ತಿಸಿಲ್ಲ. ಇಂಥ ಜನರ ಅಸ್ಮಿತೆ, ಅಭಿವೃದ್ಧಿಗಾಗಿ ನಡೆದ ಹೋರಾಟಗಳ ಭಾಗವಾಗಿರುವ ಡಾ॥ ವಿಠ್ಠಲ ಭಂಡಾರಿ ಹಾಗೂ ಯಮುನಾ ಗಾಂವ್ಕರ ಆ ತಾಲೂಕಿನ ಸ್ಥಿತಿಗತಿಗಳ ಕುರಿತು ಪ್ರಾಥಮಿಕ ಮಾಹಿತಿ ವರದಿ (ಎಫ್ ಐ ಆರ್)ಯನ್ನು ನಾಗರಿಕ ಸಮಾಜದ ಮುಂದೆ 'ಜೋಯ್ಡಾ ಕಾಡೊಳಗಿನ ಒಡಲು' ಎಂಬ ಕೃತಿಯ ಮೂಲಕ ಇಟ್ಟಿದ್ದಾರೆ. ನಾಡಿಗೆ ಬೆಳಕು (ವಿದ್ಯುತ್) ಕೊಡುವ ಕಾಳಿ ನದಿ ಪ್ರದೇಶದ ಜನತೆಯ ಕತ್ತಲೆ ಬದುಕಿನ ಭೀಕರ ಸತ್ಯಗಳನ್ನು ಈ ಲೇಖನಗಳ ಸಂಕಲನದಲ್ಲಿ ಬಿಚ್ಚಿಟ್ಟಿದ್ದಾರೆ. ಚಂದ್ರ ಲೋಕಕ್ಕೆ ಏಣಿ ಇಟ್ಟಿರುವ ನಾವು ಏಣಿ ಕೆಳಗಿನ 'ಜೋಯ್ಡಾ' ಎಂಬ ಪ್ರದೇಶದ ಕುರಿತು ತಿಳಿಯಬೇಕಾದದ್ದು ಮುಖ್ಯ. ಅಂಥ ಮಾಹಿತಿಯನ್ನು ಈ ಕೃತಿ ಹೊಂದಿದೆ.*

– ***ಶ್ರೀಸುಮಿತ್ರಾಸುತ ಅಗಸಬಾಳ,*** *ಬೆಂಗಳೂರು–೫೬೦ ೦೫೮*

ಕ್ಯಾಬಿನೆಟ್ ದರ್ಜೆಯ ಸ್ಥಾನ ಪಡೆದಿರುವ ಮಹಿಳೆಯರ ಶೇಕಡವಾರು ಅಂಶದಲ್ಲಿ ಭಾರತ ೧೮೧ ರಾಷ್ಟ್ರಗಳ ಪೈಕಿ ೮೮ನೇ ಸ್ಥಾನ ಹೊಂದಿದೆ. ೨೦೧೭ರಲ್ಲಿ ಭಾರತವು ೬ ಮಂದಿ ಮಹಿಳಾ ಸಚಿವರು ಹಾಗೂ ೯ ಮಂದಿ ಸಚಿವ ಸಂಪುಟದ ಸಮಾನ ಸ್ಥಾನದಲ್ಲಿದ್ದಾರೆ. ೧೯೫೨ರಿಂದ ಚುನಾವಣೆಯಲ್ಲಿ ಸ್ಪರ್ಧಿಸುವ ಮಹಿಳೆಯರ ಸಂಖ್ಯೆ ಕ್ರಮೇಣ ಏರಿಕೆಯಾಗುತ್ತಿದೆ, ಆದರೆ ಇದು ಗೆಲ್ಲುವ ಅಭ್ಯರ್ಥಿಗಳ ಏರಿಕೆಯಲ್ಲಿ ಪ್ರತಿಬಿಂಬಿತವಾಗುತ್ತಿಲ್ಲ.



# ರಾಜಕೀಯದಲ್ಲಿ ಮಹಿಳೆಯರು, ೨೦೧೭ ವರದಿ ಭಾರತದ ಸ್ಥಿತಿಗತಿಗಳೇನು?

ಅಂತರ ಸಂಸದೀಯ ಸಂಸ್ಥೆ ಎಂಬ ಜಾಗತಿಕ ಸಂಸ್ಥೆಯು ರಾಜಕೀಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಎಂಬ ವಿಷಯವಾಗಿ ಒಂದು ವರದಿಯನ್ನು ನೀಡಿದೆ (೨೦೧೭). ಇದರ ಹಿನ್ನೆಲೆಯಲ್ಲಿ ಭಾರತದ ಪರಿಸ್ಥಿತಿಯೇನು ಎಂಬುದನ್ನು ಈ ಲೇಖನ ವಿಶ್ಲೇಷಿಸುತ್ತದೆ.

ಮಹಿಳೆಯರು ವಿಶ್ವದ ಜನಸಂಖ್ಯೆಯ ಸುಮಾರು ಅರ್ಧದಷ್ಟಿದ್ದಾರೆ. ಜಾಗತಿಕವಾಗಿ ಒಟ್ಟು ಜನಸಂಖ್ಯೆಯ ೫೦.೬% ಪುರುಷರು ಹಾಗೂ ೪೯.೬% ಮಹಿಳೆಯರು ಇದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ಭಾರತದಲ್ಲಿ ೫೧.೫% ಪುರುಷರು ಹಾಗೂ ೪೮.೫% ಮಹಿಳೆಯರು ಇದ್ದಾರೆಂದು ವರದಿಯಾಗಿದೆ. ಸಾಮಾಜಿಕ ಚೌಕಟ್ಟಿನಲ್ಲಿ ಈಗಲೂ ಪುರುಷ ಪ್ರಾಧಾನ್ಯತೆ ಅಧಿಕವಾಗಿದ್ದು ಲಿಂಗ ಸಮಾನತೆ ಮತ್ತು ಸಮಾನ ಅಭಿವೃದ್ಧಿಗೆ, ಅದರಲ್ಲೂ ರಾಜಕಾರಣದಲ್ಲಿ ಬಹಳ ಹಿನ್ನಡೆಯಾಗಿದೆ. ನಿರ್ಣಯ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಮಹಿಳೆಯರು ಸಾಂಸ್ಥಿಕವಾಗಿ ಹಾಗೂ ಸಾಮಾಜಿಕ, ರಾಜಕೀಯ ವ್ಯವಸ್ಥೆಗಳಿಂದ ಹೊರಗಿಡಲ್ಪಟ್ಟಿದ್ದಾರೆ. ಮಹಿಳೆಯರ ಅಸಮರ್ಪಕ ಅಭಿವೃದ್ಧಿಗೆ, ಕಾನೂನು ರಚನಾತ್ಮಕ ಪ್ರಕ್ರಿಯೆಯಲ್ಲಿ ರಾಜಕೀಯವಾಗಿ ಅವರ ಪ್ರತಿನಿಧಿತ್ವದ ಕೊರತೆಯೇ ಬಹು ಮುಖ್ಯ ಕಾರಣವಾಗಿದೆ. ವಿಶ್ವದ ರಾಜಕೀಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯನ್ನು ಅಂತರ ಸಂಸದೀಯ ಒಕ್ಕೂಟವು (ಐ.ಪಿ.ಯು.) ವಾರ್ಷಿಕವಾಗಿ ದಾಖಲಿಸುತ್ತದೆ. ಈ ಸಂಸ್ಥೆ ರಾಜಕೀಯದಲ್ಲಿ ಮಹಿಳೆಯರು – ೨೦೧೭ ವರದಿಯನ್ನು ನೀಡಿದ್ದು, ದೇಶದ ರಾಜಕೀಯ ಮತ್ತು ಆಡಳಿತದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯ ಸಾರಾಂಶವನ್ನು ನೀಡುತ್ತದೆ. ಸಂಸತ್ತಿನಲ್ಲಿ ಮಹಿಳೆಯರ ಪ್ರಾತಿನಿಧಿತ್ವ ಮತ್ತು ಸಂಪುಟದಲ್ಲಿ ಹೊಂದಿರುವ ಕ್ಯಾಬಿನೆಟ್ ದರ್ಜೆಯ ಸ್ಥಾನಗಳ ಆಧಾರದ ಮೇಲೆ ಈ ದಾಖಲೆಗಳನ್ನು ತಯಾರಿಸಲಾಗುತ್ತದೆ. ಉನ್ನತ ಮಟ್ಟದ ಅರಿವು ಮತ್ತು ಹಕ್ಕೊತ್ತಾಯ ಇದ್ದರೂ ಸಹ ರಾಜಕೀಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಸಂಶಯಾತ್ಮಕವಾಗಿ ಬಹಳ ಕಡಿಮೆ ಎಂದು ಇದರಲ್ಲಿ ಪ್ರಮುಖವಾಗಿ ತಿಳಿಸಲಾಗಿದೆ.

ಅಂತರ ಸಂಸದೀಯ ಒಕ್ಕೂಟದ ಪ್ರಕಾರ ಮಹಿಳೆಯರು ಜಾಗತಿಕವಾಗಿ ಸಂಸತ್ತಿನ ಕೇವಲ ೨೩.೪% ಸ್ಥಾನಗಳನ್ನು ಹೊಂದಿದ್ದಾರೆಂದು ತಿಳಿಯುತ್ತದೆ. ಸಂಸತ್ತಿನಲ್ಲಿ ಮಹಿಳೆಯರ ಶೇಕಡಾವಾರು ಸಂಖ್ಯೆ ವಿವಿಧ ಪ್ರಾಂತೀಯ ಹಾಗೂ ಉಪ–ಪ್ರಾಂತೀಯ ಆಧಾರದ ಮೇಲೆ ಕಡಿಮೆಯಾಗುತ್ತದೆ. ಭಾರತದಲ್ಲಿ, ಪಿತೃಪ್ರಭುತ್ವ ಸಮಾಜದ ವ್ಯವಸ್ಥೆಯಿಂದಾಗಿ ಮಹಿಳೆಯರಿಗೆ ಹಿಂದಿನಿಂದಲೂ ಆಡಳಿತಾತ್ಮಕ ಪ್ರಕ್ರಿಯೆಯಲ್ಲಿ ನೈತಿಕವಾಗಿ ಸಿಗಬೇಕಿದ್ದ ಅವಕಾಶವನ್ನು ನಿರಾಕರಿಸಲಾಗಿದೆ. ವ್ಯವಸ್ಥೆಯಲ್ಲಿರುವ ಜಾತಿ ಮತ್ತು ಸ್ಥಾನಮಾನ ಎಂಬ ಅಸಮಾನತೆಗಳು ಲಿಂಗಾಧಾರಿತ ತಾರತಮ್ಯತೆಯನ್ನು ಮತ್ತಷ್ಟು ಜಟಿಲಗೊಳಿಸಿವೆ. ಹಾಗಾಗಿ ಪ್ರಜಾಪ್ರಭುತ್ವವನ್ನು ಶಕ್ತಗೊಳಿಸಲು ಲಿಂಗಾಧಾರಿತ ಆಡಳಿತ ಒಂದು ನಿರ್ಣಾಯಕ ಹಾಗೂ ವ್ಯವಸ್ಥೆಯ ಪೂರ್ವಾಪೇಕ್ಷಿತ ಅಂಶವಾಗುತ್ತವೆ. ಸಾಮಾಜಿಕ–ಸಾಂಸ್ಕೃತಿಕ ವೈವಿಧ್ಯತೆ ಇದ್ದರೂ ದಕ್ಷಿಣ ಏಷ್ಯಾ ಪ್ರಾಂತ್ಯದ ಸಂಸತ್ತುಗಳಲ್ಲಿ ಮಹಿಳೆಯರ ಪ್ರತಿನಿಧಿತ್ವದಲ್ಲಿ ತುಲನಾತ್ಮಕವಾಗಿ ವಿಶ್ವ (೨೩.೪) ಮತ್ತು ಏಷ್ಯಾ(೧೯.೬)ಗಿಂತ ಹಿಂದೆ ಉಳಿದಿದೆ. ಭಾರತದ ಸಂಸತ್ತಿನಲ್ಲಿ ಮಹಿಳೆಯರ ಪ್ರತಿನಿಧಿತ್ವದ ಸಂಖ್ಯೆ ೧೨, ಇದು ವಿಶ್ವ ಮತ್ತು ಏಷ್ಯಾಗಿಂತ ಕಡಿಮೆ ಇದೆ. ವಿಶ್ವದ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಒಂದಾದ ಭಾರತದಲ್ಲಿ ಬಹಳ ಹಿಂದೆಯೇ ಮಹಿಳೆಯರಿಗೆ ಮತದಾನದ ಹಕ್ಕು ನೀಡಿದ್ದರೂ ಸಹ ಅದು ಸಂಸತ್ತು ಮತ್ತು ವಿಧಾನ ಸಭೆಗಳಲ್ಲಿನ ಮಹಿಳೆಯರ ರಾಜಕೀಯ ಸಬಲೀಕರಣವನ್ನು ಪ್ರತಿಬಿಂಬಿಸುವುದಿಲ್ಲ.

ಹತ್ತನೇ ಸಾಮಾನ್ಯ ಚುನಾವಣೆಯನಂತರ ಸಂಸತ್ತಿನಲ್ಲಿ ಮಹಿಳೆಯರ ಸಹಭಾಗಿತ್ವ ಕ್ರಮೇಣ ಏರಿಕೆಯಾಗಿರುವ ಬಗ್ಗೆ ದಾಖಲೆಗಳು ತಿಳಿಸುತ್ತವೆ. ಇತ್ತೀಚೆಗೆ ೨೦೧೪ರಲ್ಲಿ ನಡೆದ ಚುನಾವಣೆಯಲ್ಲಿ ಶೇಕಡ ೧೧.೮ರಷ್ಟು ಮಹಿಳೆಯರು ಚುನಾಯಿತರಾಗಿದ್ದಾರೆ. ೨೦೧೭ ಜನವರಿಯ ಮಾಹಿತಿ ಪ್ರಕಾರ ಸಂಸತ್ತಿನ ಮೇಲ್ಮನೆಯಲ್ಲಿ (ರಾಜ್ಯಸಭೆ) ಶೇಕಡ ೧೧, ಅಂದರೆ ೨೪೫ ಸದಸ್ಯರ ಪೈಕಿ ೨೭ ಮಹಿಳಾ ಸದಸ್ಯರಿದ್ದಾರೆ ಮತ್ತು ಲೋಕಸಭೆಯಲ್ಲಿ ಸರಾಸರಿ ೧೧.೪ರಷ್ಟಿದ್ದಾರೆ. ಅಂತರ ಸಂಸದೀಯ ಒಕ್ಕೂಟದ ಪ್ರಕಾರ ಸಂಸತ್ತಿನಲ್ಲಿ ಕೇವಲ ಶೇಕಡ ೧೨ರಷ್ಟು ಮಹಿಳಾ ಪ್ರತಿನಿಧಿತ್ವದೊಂದಿಗೆ ಭಾರತವು ೧೯೦ ರಾಷ್ಟ್ರಗಳ ಪೈಕಿ ೧೪೮ನೇ ಸ್ಥಾನ ಪಡೆದಿದೆ. ಸೂಡಾನ್ (೩೦.೫), ದಕ್ಷಿಣ ಸೂಡಾನ್ (೨೮.೫), ಪಾಕಿಸ್ತಾನ (೨೦.೬) ಮತ್ತು ಬಾಂಗ್ಲಾದೇಶ (೨೦.೩) ಮಹಿಳಾ ಸಂಸತ್ತಿನ ಪ್ರತಿನಿಧಿತ್ವದೊಂದಿಗೆ ಭಾರತಕ್ಕಿಂತ ಮೊದಲಿನ ಸ್ಥಾನ ಪಡೆದಿವೆ.

ಕ್ಯಾಬಿನೆಟ್ ದರ್ಜೆಯ ಸ್ಥಾನ ಪಡೆದಿರುವ ಮಹಿಳೆಯರ ಶೇಕಡವಾರು ಅಂಶದಲ್ಲಿ ಭಾರತ ೧೮೧ ರಾಷ್ಟ್ರಗಳ ಪೈಕಿ ೮೮ನೇ ಸ್ಥಾನ ಹೊಂದಿದೆ. ೨೦೧೭ರಲ್ಲಿ ಭಾರತವು ೬ ಮಂದಿ ಮಹಿಳಾ

**ವೀರೇಶ್ ನಾಯಕ್**

# ನೋವು ಸುಖಿಸುವ ಹೊತ್ತು



**ಆ**ಡುತಾಡುತ ಮಣ್ಣ
ಮೆತ್ತಿದ ಮೈಗೆ
ಅಮ್ಮ ಆರತಿ ಮಾಡಿ ದೊಡ್ಡವಳಾದೆ ಎಂದಾಗ
ಬಾಲ್ಯ ಜಾರಿದ ವೇಳೆ
ನೋವು ಸುಖಿಸುವ ಹೊತ್ತು

ಪದವಿ ಪಡೆದ ದಿನ
ಸಿಹಿ ಸುದ್ದಿ ಹಂಚಿಕೊಂಡ ಸಮಯ
ಹೊರಬೇಕಾದ ಹೊಣೆ ಎದುರಾದಾಗ
ನೋವು ಸುಖಿಸುವ ಹೊತ್ತು

ಬಾಳಸಂಗಾತಿಯ ಕೈಹಿಡಿದು
ತವರನಗಲ ಹೊರಟಾಗ ಹೊಸ ಕನಸಿಗಡಿಯಿಡುವಾಗ
ನೋವು ಸುಖಿಸುವ ಹೊತ್ತು

ಇನಿಯನಪ್ಪುಗೆಯಲಿ
ಹಿತವಾದ ನರಳುವಿಕೆಯಲಿ
ಮೆಲ್ಲಗೆ ಮುಲುಕುವಾಗ
ನೋವು ಸುಖಿಸುವ ಹೊತ್ತು

ನೋವೆಲ್ಲ ಬಸಿರಾಗಿ
ಕಂದ ಮಡಿಲು ತುಂಬಿ ಹಾಲುಗಲ್ಲಕೆ ಮುತ್ತಿಕ್ಕುವಾಗ
ನೋವು ಸುಖಿಸುವ ಹೊತ್ತು
ನಲಿವು ನಗುವಾಗಿತ್ತು

**ಜಯಂತಿ ಕೆ. ಪೈ.**
ಆಕಾಶವಾಣಿ, ಧಾರವಾಡ

ಸಚಿವರು ಹಾಗೂ ೯ ಮಂದಿ ಸಚಿವ ಸಂಪುಟದ ಸಮಾನ ಸ್ಥಾನದಲ್ಲಿದ್ದಾರೆ. ೧೯೫೨ರಿಂದ ಚುನಾವಣೆಯಲ್ಲಿ ಸ್ಪರ್ಧಿಸುವ ಮಹಿಳೆಯರ ಸಂಖ್ಯೆ ಕ್ರಮೇಣ ಏರಿಕೆಯಾಗುತ್ತಿದೆ, ಆದರೆ ಇದು ಗೆಲ್ಲುವ ಅಭ್ಯರ್ಥಿಗಳ ಏರಿಕೆಯಲ್ಲಿ ಪ್ರತಿಬಿಂಬಿತವಾಗುತ್ತಿಲ್ಲ.

ಸಂಸತ್ತಿಗಿಂತ ರಾಜ್ಯಗಳ ವಿಧಾನ ಸಭೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ತೀರಾ ಕಡಿಮೆ. ರಾಜ್ಯಗಳ ಶಾಸಕಾಂಗಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಕೇವಲ ೯%. ವಿಧಾನ ಪರಿಷತ್ತುಗಳಲ್ಲಿ ಕೇವಲ ಶೇಕಡ ೫ರಷ್ಟು ಮಹಿಳೆಯರು ಸದಸ್ಯರಾಗಿದ್ದಾರೆ. ೧೯೯೨ – ೯೩ರಲ್ಲಿ ಆದ ಸಂವಿಧಾನದ ೭೩ ಹಾಗೂ ೭೪ನೇ ತಿದ್ದುಪಡಿಗಳು ಸ್ಥಳೀಯ ನಿರ್ಣಯಾತ್ಮಕ ಪ್ರಕ್ರಿಯೆಗಳಲ್ಲಿ ಸಂಯುಕ್ತ ರಾಜಕಾರಣ ಹಾಗೂ ಮಹಿಳೆಯರ ಭಾಗವಹಿಸುವಿಕೆಯನ್ನು ವಿಸ್ತಾರಗೊಳಿಸಿದೆ. ಮೂರು ಸ್ತರದ ಪಂಚಾಯಿತಿಗಳಲ್ಲಿ ಮಹಿಳೆಯರು ಶೇಕಡ ೪೬ರಷ್ಟು ಸ್ಥಾನಗಳನ್ನು ಹೊಂದಬಹುದಾಗಿದೆ. ಇದು ಸ್ಥಳೀಯವಾಗಿ ಮಾತ್ರವಲ್ಲದೆ, ಶಾಸಕಾಂಗ ಮತ್ತು ಸಂಸತ್ತಿನಲ್ಲಿ ಭಾಗವಹಿಸುವಿಕೆಯನ್ನು ಉತ್ತೇಜಿಸಿದೆ. ಆದರೂ ಸಂಸತ್ತು ಮತ್ತು ವಿಧಾನ ಮಂಡಲಗಳಲ್ಲಿ ಮೂರನೇ ಒಂದು ಭಾಗ ಮೀಸಲಿರಿಸುವ ಉದ್ದೇಶ ಹೊಂದಿದ್ದ ಸಂವಿಧಾನದ ತಿದ್ದುಪಡಿ (೧೦೮ ನೆಯದು) ಮಸೂದೆ ಅಥವಾ ಮಹಿಳಾ ಮೀಸಲು ಮಸೂದೆ, ೨೦೦೮ ಸಂಸತ್ತಿನಲ್ಲಿ ಅಂತ್ಯ ಕಂಡಿದೆ.

ಅಖಿಲ ಭಾರತೀಯ ಸೇವೆಗಳಲ್ಲೂ ಸಹ ಮಹಿಳೆಯರ ಪ್ರತಿನಿಧಿತ್ವ ನಿರಾಶಾದಾಯಕ ಚಿತ್ರ ನೀಡುತ್ತದೆ. ಭಾರತೀಯ ಆಡಳಿತ ಸೇವೆಯಲ್ಲಿ ೧೭%, ಭಾರತೀಯ ಸಂಖ್ಯಾಶಾಸ್ತ್ರ ಸೇವೆಯಲ್ಲಿ ೨೪% ಮತ್ತು ಭಾರತೀಯ ವಿತ್ತ ಸೇವೆಗಳಲ್ಲಿ ೩೦% ಸೇರಿದಂತೆ ಮಹಿಳೆಯರು 'ಎ' ಶ್ರೇಣಿಯ ಸೇವೆಗಳಲ್ಲಿ ಸರಾಸರಿ ೧೫%ರಷ್ಟು ಮಾತ್ರ ತೊಡಗಿಸಿಕೊಂಡಿದ್ದಾರೆ. ಇನ್ನು ನ್ಯಾಯಾಂಗದಲ್ಲಿ ಭಾರತೀಯ ಸರ್ವೋಚ್ಚ ನ್ಯಾಯಾಲಯದಲ್ಲಿ ೨೫ ನ್ಯಾಯಾಧೀಶರ ಪೈಕಿ ಕೇವಲ ಒಬ್ಬರು ಹಾಗೂ ಉಚ್ಚ ನ್ಯಾಯಾಲಯಗಳಲ್ಲಿ ೬೧೩ ನ್ಯಾಯಾಧೀಶರ ಪೈಕಿ ೭೪ ಮಹಿಳೆಯರು ನ್ಯಾಯಾಧೀಶರಾಗಿದ್ದು ಅನುಕ್ರಮವಾಗಿ ಶೇಕಡ ೪% ಮತ್ತು ೧೨%ರಷ್ಟು ಮಾತ್ರ ಮಹಿಳೆಯರು ಭಾರತೀಯ ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳಲ್ಲಿ ನ್ಯಾಯಾಧೀಶರಾಗಿದ್ದಾರೆ.

ರಾಜಕೀಯ ಮತ್ತು ಆಡಳಿತದಲ್ಲಿ ಮಹಿಳೆಯರ ಕಡಿಮೆ ಪ್ರತಿನಿಧಿತ್ವಕ್ಕೆ ಈ ಕೆಳಗಿನ ಅಂಶಗಳು ಕಾರಣವೆನ್ನಬಹುದು; (೧) ರಾಜಕೀಯ ಪಕ್ಷಗಳಲ್ಲಿ ಬದ್ಧತೆಯ ಕೊರತೆ (೨) ಸಾಮಾಜಿಕ ಪಿತೃಪ್ರಭುತ್ವ (೩) ಮಹಿಳಾ ಮೀಸಲಾತಿ ನೀತಿಯ ಅಲಭ್ಯತೆ (೪) ರಾಜಕೀಯದಲ್ಲಿನ ಭ್ರಷ್ಟಾಚಾರ ಮತ್ತು ಅಪರಾಧೀಕರಣ (೫) ವಂಶೀಯತೆ. ರಾಜಕೀಯದಲ್ಲಿ ಮಹಿಳೆಯರು – ೨೦೧೭ ಎಂಬ ಅಂತರ ಸಂಸದೀಯ ಒಕ್ಕೂಟದ ದಾಖಲೆಗಳು ಮಹಿಳಾ ಸಚಿವರುಗಳು ಹೊಂದಿರುವ ಖಾತೆಗಳ ಬಗ್ಗೆ ಆಸಕ್ತಿಕರ ಮಾಹಿತಿಯನ್ನು ಹೊರಹಾಕಿದೆ. ಮಹಿಳೆಯರು ನಿರ್ವಹಿಸಿದ ಖಾತೆಗಳೆಂದರೆ, ಪರಿಸರ, ನೈಸರ್ಗಿಕ ಸಂಪತ್ತು, ಸಮಾಜ ಮತ್ತು ಮಹಿಳಾ ವ್ಯವಹಾರಗಳು, ಲಿಂಗಸಮಾನತೆ, ಕುಟುಂಬ ಮತ್ತು ಯುವಜನ ಹಾಗೂ ಶಿಕ್ಷಣ ಮತ್ತು ಸಂಸ್ಕೃತಿ. ಈ ಕ್ಷೇತ್ರಗಳು ಯಾವುದೇ ರಾಷ್ಟ್ರದ ಸಾಮಾಜಿಕ ಆರ್ಥಿಕತೆಯ ಅಭಿವೃದ್ಧಿಯನ್ನು ನಿರ್ಧರಿಸುವ ಅಂಶಗಳಾಗಿರುತ್ತವೆ. ಒಂದು ರಾಷ್ಟ್ರವಾಗಿ ನಾವು ಸಂಸತ್ತು ಹಾಗೂ ವಿಧಾನಸಭೆಗಳಲ್ಲಿ ಮಹಿಳೆಯರನ್ನು ಆಡಳಿತಾತ್ಮಕವಾಗಿ ತೊಡಗಿಸುವ ನಿಟ್ಟಿನಲ್ಲಿ ಮೀಸಲಾತಿಯನ್ನು ಜಾರಿಗೊಳಿಸಿ ಅವರ ಪಾತ್ರವನ್ನು ಅಂಗೀಕರಿಸಬೇಕಿದೆ. ರಕ್ಷಣಾ ಸಚಿವೆ ಮತ್ತು ಲೋಕಸಭೆಯ ಸಭಾಧ್ಯಕ್ಷೆಯಂತಹ ಉತ್ಕೃಷ್ಟ ಉದಾಹರಣೆಗಳಿದ್ದರೂ ಸಹ ಮಹಿಳೆಯರ ಸಾಮರ್ಥ್ಯ ಅರಿಯುವ ಮತ್ತು ಅವರಿಗೆ ಸಮಾನವಾದ ಅಧಿಕಾರ ಮತ್ತು ಆಧಿಪತ್ಯ ನೀಡುವ ನಿಟ್ಟಿನಲ್ಲಿ ರಾಜಕೀಯ ಪಕ್ಷಗಳ ಉದಾಸೀನತೆ ಮತ್ತು ನಿರಾಕರಣೆ ಒಂದು ಸಂಕುಚಿತ ಮನೋಭಾವ ಮತ್ತು ಪುರುಷ ಪ್ರಾಬಲ್ಯದ ಸಂಕೇತವೆನಿಸುತ್ತದೆ. ಇದು ಭಾರತದ ರಾಜಕೀಯದಲ್ಲಿರುವ ಲಿಂಗ ಪ್ರಾಬಲ್ಯತೆಯನ್ನು ಪ್ರತಿಬಿಂಬಿಸುತ್ತದೆ. ಆಡಳಿತ ವ್ಯವಸ್ಥೆಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯನ್ನು ರಾಜಕೀಯವಾಗಿ ಸಾಧ್ಯವಾಗಿಸುವ ನಿಟ್ಟಿನಲ್ಲಿ ಲಿಂಗಸಮಾನತೆಯನ್ನು ಸಾಧಿಸಲು ಇದು ಅತ್ಯಂತ ಸೂಕ್ತ ಸಮಯ.

**ವೀರೇಶ್ ನಾಯಕ್**
ಸಂಶೋಧನಾ ವಿದ್ಯಾರ್ಥಿ, ರಾಜಕೀಯ, ಆಡಳಿತ ಮತ್ತು ಅಭಿವೃದ್ಧಿ ವಿಭಾಗ
ಭಾರತೀಯ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳ ಸಂಸ್ಥೆ, ಬೆಂಗಳೂರು – ೭೨



ಶಾಲೆಯ ಕಾರ್ಯಕ್ರಮವೊಂದರಲ್ಲಿ ಹಾಡಿದ ಬಾಲಕಿ ಪಟ್ಟಮ್ಮಾಳ್ ಅವರ ಪ್ರತಿಭೆ ಪತ್ರಿಕೆಗಳ ಕಣ್ಣಿಗೂ ಬಿದ್ದು ಸುದ್ದಿಯಾದಾಗ, ಸಂಪ್ರದಾಯಸ್ಥ ತಂದೆಗೆ ಗಾಬರಿಯೇ ಆಗುತ್ತದೆ. ಸಾಲದೆನ್ನುವಂತೆ ಹೊಸ ಪ್ರತಿಭೆಗಳ ಹುಡುಕಾಟದಲ್ಲಿರುವ ಗ್ರಾಮಾಫೋನ್ ಕಂಪನಿಯೊಂದು ಪುಟ್ಟ ಪಟ್ಟಮ್ಮಾಳ್‌ರ ಧ್ವನಿಮುದ್ರಿಕೆಯನ್ನು ಹೊರತರುವ ಅಪೇಕ್ಷೆಯಿಂದ ಅವರ ತಂದೆಯನ್ನು ಸಂಪರ್ಕಿಸುತ್ತದೆ. ಅವರ ಶಾಲೆಯ ಮುಖ್ಯೋಪಾಧ್ಯಾಯಿನಿ ಅಮ್ಮುಕುಟ್ಟಿ ಅಮ್ಮಾಳ್ ಹಾಗೂ ಕುಟುಂಬದ ಮಿತ್ರರಾದ ಡಾ॥ ಆರ್. ಶ್ರೀನಿವಾಸನ್ ಅವರ ಮಧ್ಯಪ್ರವೇಶದಿಂದ ತಂದೆ ಕೊನೆಗೂ ಧ್ವನಿಮುದ್ರಿಕೆಗೆ ಒಪ್ಪಿಗೆ ನೀಡುತ್ತಾರೆ. ಧ್ವನಿಮುದ್ರಿಕೆ ಅಪಾರ ಯಶಸ್ಸು ಪಡೆಯುತ್ತದೆ. ಕಲಾವಿದೆಯಾಗಿ ಪಟ್ಟಮ್ಮಾಳ್ ಅವರ ಪಯಣ ಹೀಗೆ ಶುರುವಾಗುತ್ತದೆ.

# ಸಂಗೀತ ಲೋಕದ ಮಹಾನ್ ಗಾಯಕಿ ಪಟ್ಟಮ್ಮಾಳ್

**ಶ್ರೀಮಾತಾ ರಮಾನಂದ್**

**ಸು**ಡುಬಿಸಿಲಿನ ಊರಿನಲ್ಲಿ ಅಪರೂಪದ ತಂಪಾದ ತಿಳಿಸಂಜೆ. ಗಿಜಿಗಿಜಿಗುಡುವ ಮದ್ರಾಸಿನಲ್ಲೊಂದು ಪ್ರಶಾಂತ ದ್ವೀಪದಂಥಾ ಮನೆ. ಅಂಗಳದಲ್ಲಿ ಕೂತ ಸಂಜೆದೀಪದ ನಗುಮೊಗದ ಹಿರಿಯರು. ಅವರನ್ನು ನೋಡಬೇಕೆನ್ನುವ ಹಂಬಲ ವರ್ಷಗಳಿಂದ ಇದ್ದರೂ, ಮದರಾಸಿನ ಮಾರ್ಗಳಿ ಸಂಗೀತ ಸಂಭ್ರಮವನ್ನು ನೋಡಬೇಕೆಂದು ಹೋಗಿದ್ದ ನಮಗೆ ಆ ಅವಕಾಶ ಸಿಕ್ಕಿದ್ದು ಅಚಾನಕ್ಕಾಗಿಯೇ. ಆ ಸಂಜೆ ನಮ್ಮ ಅದೃಷ್ಟಕ್ಕೆ ಮೇರೆಯೇ ಇರಲಿಲ್ಲ. ಸಾಕ್ಷಾತ್ ಶಾರದೆಯ ಸನ್ನಿಧಿಯಲ್ಲಿ ಹಾಡುವ ದೈವಿಕ ಅನುಭವವೂ ನಮ್ಮದಾಯಿತು. ನಮ್ಮ ಚಿಕ್ಕವಯಸ್ಸು, ಅನನುಭವ – ಇದ್ಯಾವುದೂ ಹಾಡುವವರಿಗೂ ಕೇಳುವವರಿಗೂ ಲಕ್ಷ್ಯದಲ್ಲಿರದ, ಶುದ್ಧ ಸಂಗೀತಾನುಭವದ ಕ್ಷಣಗಳವು. ಮೆಲ್ಲಗೆ ತಲೆದೂಗುತ್ತಾ, ಮನೆಯ ಮಕ್ಕಳ ಹಾಡು ಕೇಳುತ್ತಿರುವ ಹಿರಿಯರಂತೆ, ಮುಗುಳ್ನಗೆಯೊಂದಿಗೆ ತಾಳ ಹಾಕುತ್ತಿದ್ದ ಹಿರಿಜೀವ. ಅವರ ಮೆಚ್ಚಿನ ವಾಗ್ಗೇಯಕಾರರಾದ ಮುತ್ತುಸ್ವಾಮಿ ದೀಕ್ಷಿತರ ಕೃತಿಯೊಂದನ್ನು ಹಾಡಿ ಮುಗಿಸುತ್ತಿದ್ದಂತೆಯೇ ಅವರ ಬಾಯಿಂದ ಹೊರಟ ಮಾತು ನಮ್ಮ ನೆನಪಿನಂಗಳದಲ್ಲಿ ಅವರ ಸಂಗೀತ ತಪಸ್ಸಿನ ಕುರುಹಾಗಿ ಎಂದಿಗೂ ಉಳಿಯುವಂತಹದ್ದು: "ಪಾಟ್ಟು ಮಟ್ಟುಂ ಕೇಕ್ಕುಂ, ಕಾದು ಕೇಕ್ಕಾದು ಮಾ" ('ಹಾಡು ಮಾತ್ರ ಕೇಳಿಸುತ್ತೆ, ಕಿವಿ ಕೇಳಿಸೋದಿಲ್ಲ') !! ಅದು, ಬದುಕಿನ ಎಲ್ಲ ಜಂಜಾಟಗಳ ನಡುವೆಯೂ ಸಂಗೀತವನ್ನು ಕೈಬಿಡದ, ಸಂಗೀತವನ್ನೇ ಉಸಿರಾಗಿಸಿಕೊಂಡ ನಿಷ್ಕಲ್ಮಷ ಮನಸ್ಸಿನ ಮಹಾಸಾಧಕಿಗೆ ಕೊನೆಯ ದಿನಗಳಲ್ಲಿ ಸಂಗೀತದೊಂದಿಗೆ ಮಾತ್ರ ಇರುವಂತೆ ಶಾರದೆಯಿತ್ತ ವರವೇ ಅಲ್ಲವೇ ?!

ಆ ವೇಳೆಗಾಗಲೇ ವ್ಹೀಲ್‌ಚೇರ್ ಮೊರೆಹೊಕ್ಕಿದ್ದ ದೇಹ, (ಈ ಘಟನೆಯಾದ ಕೆಲವು ತಿಂಗಳುಗಳ ನಂತರ ಆಕೆ ಶಾರದೆಯ ಸನ್ನಿಧಿಗೆ ಮರಳಿದರು) ಮನೆಗೆ ಬಂದ ಅತಿಥಿಗಳಿಗೆ ಹಣ್ಣು ಕೊಡು ಎಂದು ನೆನಪಿಸುವುದನ್ನು ಮರೆಯಲಿಲ್ಲ. ಪತ್ನಿಯ ಪ್ರಶಸ್ತಿ–ಬಿರುದುಗಳನ್ನು, ಹಳೆಯ ಭಾವಚಿತ್ರಗಳನ್ನು ಹೆಮ್ಮೆಯಿಂದ ತೋರಿಸುವ ಪತಿ. ಗೌರವಯುತವಾಗಿ ವೃದ್ಧಾಪ್ಯವನ್ನು ಒಪ್ಪಿಕೊಳ್ಳುವ ಹಾಗೂ ಎಷ್ಟೇ ಸಾಧನೆಗಳನ್ನು ತಮ್ಮದಾಗಿಸಿಕೊಂಡರೂ ಸರಳತೆಯನ್ನು ಮೈಗೂಡಿಸಿಕೊಳ್ಳುವ ಬಗೆಯನ್ನು ತಮ್ಮ ನಡೆನುಡಿಯಲ್ಲಿ ನಮಗೆ ಕಲಿಸಿದ ಆ ಹಿರಿಯ ದಂಪತಿ, ಪದ್ಮಭೂಷಣ ಪುರಸ್ಕೃತೆ ಸಂಗೀತ ಕಲಾನಿಧಿ ವಿದುಷಿ ಡಿ. ಕೆ. ಪಟ್ಟಮ್ಮಾಳ್ ಹಾಗೂ ಅವರ ಪತಿ ಶ್ರೀ ಈಶ್ವರನ್ ಅಯ್ಯರ್.

ಮಹಿಳೆಯರು ಸಾರ್ವಜನಿಕ ವೇದಿಕೆಯಲ್ಲಿ ಹಾಡುವುದೇ ಅಸಾಧು ಎಂದು ತಿಳಿದಿದ್ದ ಕಾಲದಲ್ಲಿ ತಮ್ಮ ಪಾಂಡಿತ್ಯ, ಪ್ರತಿಭೆ ಶ್ರದ್ಧೆಗಳಿಂದ ಮುಂದೆ ಬಂದ, ಯಾವ ಪುರುಷ ಕಲಾವಿದರಿಗೂ ತಾವು ಕಮ್ಮಿಯಲ್ಲ ಎಂದು ತೋರಿಸಿದ ನಾಲ್ಕು ಜನ ಮೇರುಪ್ರತಿಭೆಗಳು – ಎಂ. ಎಸ್. ಸುಬ್ಬುಲಕ್ಷ್ಮಿ, ಎಂ. ಎಲ್. ವಸಂತಕುಮಾರಿ, ಟಿ. ಬೃಂದಾ ಹಾಗೂ ಡಿ. ಕೆ. ಪಟ್ಟಮ್ಮಾಳ್ ಅವರು.

ಸಂಪ್ರದಾಯಸ್ಥ ಮನೆತನದಲ್ಲಿ ೨೮ ಮಾರ್ಚ್ ೧೯೧೯ರಂದು ಕಾಂಚೀಪುರದಲ್ಲಿ ಹುಟ್ಟಿದ ದಾಮಲ್ ಕೃಷ್ಣಸ್ವಾಮಿ ಪಟ್ಟಮ್ಮಾಳ್ ಅವರದ್ದು ಅಭಿಜಾತ ಪ್ರತಿಭೆ. ಸಂಗೀತ ಪ್ರಪಂಚದಲ್ಲಿ ಕಾಂಚೀಪುರದ ಹೆಸರು ಚಿರಸ್ಥಾಯಿಯಾಗಿಸಿದ ತಾರೆ ಕಾಂಚೀಪುರಂ ನಯನಾ ಪಿಳ್ಳೆಯವರ ಸಂಗೀತ ಪುಟ್ಟ

ಬಾಲಕಿಯ ಮೇಲೆ ಅಪಾರ ಪ್ರಭಾವ ಬೀರುತ್ತದೆ. ಸಂಪ್ರದಾಯಸ್ಥ ಮನೆತನದ ಹೆಣ್ಣುಮಕ್ಕಳು ಸಂಗೀತ ಕಲಿಯುವುದು – ಅದೂ ಪುರುಷ ಗುರುಗಳಿಂದ ಕಲಿಯುವುದು ಕಲ್ಪನೆಗೂ ಮೀರಿದ ಕಾಲದಲ್ಲಿ, ಏಕಲವ್ಯನಂತೆ ಅವರ ಕಚೇರಿಗಳನ್ನು ಕೇಳಿ, ಅವರು ಹಾಡಿದ ಕೃತಿಗಳನ್ನು ಮನೆಗೆ ಬಂದು ಮನನ – ಅಭ್ಯಾಸ ಮಾಡುವ ಪಟ್ಟಮ್ಮಾಳ್ ಅವರಿಗೆ, ನೇರವಾಗಿ ಅವರಿಂದ ಕಲಿಯುವ ಭಾಗ್ಯ ಲಭಿಸುವುದಿಲ್ಲವಾದರೂ ನಯನಾ ಪಿಳ್ಳೆಯವರ ಪ್ರಭಾವ ಅವರ ಸಂಗೀತದ ಮೇಲೆ ಅಚ್ಚಳಿಯದ ಪರಿಣಾಮ ಬೀರಿರುವುದನ್ನು ನಾವು ಕಾಣಬಹುದು.

ಶಾಲೆಯ ಕಾರ್ಯಕ್ರಮವೊಂದರಲ್ಲಿ ಹಾಡಿದ ಬಾಲಕಿ ಪಟ್ಟಮ್ಮಾಳ್ ಅವರ ಪ್ರತಿಭೆ ಪತ್ರಿಕೆಗಳ ಕಣ್ಣಿಗೂ ಬಿದ್ದು ಸುದ್ದಿಯಾದಾಗ, ಸಂಪ್ರದಾಯಸ್ಥ ತಂದೆಗೆ ಗಾಬರಿಯೇ ಆಗುತ್ತದೆ. ಸಾಲದೆನ್ನುವಂತೆ ಹೊಸ ಪ್ರತಿಭೆಗಳ ಹುಡುಕಾಟದಲ್ಲಿರುವ ಗ್ರ್ಯಾಮಾಫೋನ್ ಕಂಪನಿಯೊಂದು ಪುಟ್ಟ ಪಟ್ಟಮ್ಮಾಳ್‌ರ ಧ್ವನಿಮುದ್ರಿಕೆಯನ್ನು ಹೊರತರುವ ಅಪೇಕ್ಷೆಯಿಂದ ಅವರ ತಂದೆಯನ್ನು ಸಂಪರ್ಕಿಸುತ್ತದೆ. ಅವರ ಶಾಲೆಯ ಮುಖ್ಯೋಪಾಧ್ಯಾಯಿನಿ ಅಮ್ಮುಕುಟ್ಟಿ ಅಮ್ಮಾಳ್ ಹಾಗೂ ಕುಟುಂಬದ ಮಿತ್ರರಾದ ಡಾ॥ ಆರ್. ಶ್ರೀನಿವಾಸನ್ ಅವರ ಮಧ್ಯಪ್ರವೇಶದಿಂದ ತಂದೆ ಕೊನೆಗೂ ಧ್ವನಿಮುದ್ರಿಕೆಗೆ ಒಪ್ಪಿಗೆ ನೀಡುತ್ತಾರೆ. ಧ್ವನಿಮುದ್ರಿಕೆ ಅಪಾರ ಯಶಸ್ಸು ಪಡೆಯುತ್ತದೆ. ಕಲಾವಿದೆಯಾಗಿ ಪಟ್ಟಮ್ಮಾಳ್ ಅವರ ಪಯಣ ಹೀಗೆ ಶುರುವಾಗುತ್ತದೆ. ಗಾಂಧೀ ವಿಚಾರಧಾರೆಯಿಂದ ಪ್ರಭಾವಿತರಾದ ತಂದೆ ಕೃಷ್ಣಸ್ವಾಮಿ ಅಯ್ಯರ್, ತಮ್ಮ ನಿಲುವನ್ನು ಬದಲಿಸಿಕೊಳ್ಳುವುದಷ್ಟೇ ಅಲ್ಲ, ಮಗಳ ಪ್ರತಿಭೆಗೆ ತಕ್ಕ ಮಾರ್ಗದರ್ಶನ, ಅವಕಾಶಗಳು ಸಿಗಬೇಕೆಂದು ಟೊಂಕ ಕಟ್ಟಿ ನಿಲ್ಲುತ್ತಾರೆ. ಕಾಲಕ್ರಮೇಣ, ಇದೇ ಕಾರಣಕ್ಕಾಗಿ ಚೆನ್ನೈಗೇ ಬಂದು ನೆಲೆಸುತ್ತಾರೆ. ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿ ವೇದಿಕೆಯನ್ನೇರಿದ ಮೊದಲ ಕರ್ನಾಟಕ ಸಂಗೀತ ಕಲಾವಿದೆಯಾಗಿ ಪಟ್ಟಮ್ಮಾಳ್ ರೂಪುಗೊಳ್ಳುತ್ತಾರೆ. ಮುತ್ತುಸ್ವಾಮಿ ದೀಕ್ಷಿತರ ವಂಶಸ್ಥರಾದ ಅಂಬಿ ದೀಕ್ಷಿತರು, ಅವರ ಶಿಷ್ಯರಾದ ಜಸ್ಟಿಸ್ ಟಿ. ಎಲ್. ವೆಂಕಟರಾಮ ಅಯ್ಯರ್ – ಇವರುಗಳಿಂದ ದೀಕ್ಷಿತರ ಕೃತಿಗಳ ಪಾಠವಾಗುತ್ತದೆ. ಮುತ್ತುಸ್ವಾಮಿ ದೀಕ್ಷಿತರ ಕೃತಿಗಳನ್ನು ಅವರ ಬಾಯಿಯಿಂದಲೇ ಕೇಳಬೇಕು ಎನಿಸುವಷ್ಟು ಶುದ್ಧ, ಪರಿಪಕ್ವ ಹಾಗೂ ಪರಿಪೂರ್ಣವಾದ ಪ್ರಸ್ತುತಿಗಳು ಪಟ್ಟಮ್ಮಾಳ್ ಹಾಗೂ ಸಹೋದರ ಡಿ. ಕೆ. ಜಯರಾಮನ್ ಅವರದ್ದಾಗುತ್ತವೆ.

೧೯೩೩ರಲ್ಲಿ ಪ್ರಸಿದ್ಧ ವಾಗ್ಗೇಯಕಾರರಾದ ಪಾಪನಾಶಂ ಶಿವನ್ ಅವರ ಪರಿಚಯವಾಗುತ್ತದೆ. ಸ್ವತಃ ವಾಗ್ಗೇಯಕಾರರಿಂದ ಅವರ ಕೃತಿಗಳನ್ನು ಕಲಿಯುವ ಅವಕಾಶ ಪಟ್ಟಮ್ಮಾಳ್ ಹಾಗೂ ಜಯರಾಮನ್ ಅವರಿಗೆ ದೊರಕುತ್ತದೆ. ಶಿವನ್ ಕೃತಿಗಳು ಜನಮಾನಸಕ್ಕೆ ತಲುಪುವಲ್ಲಿ ಡಿ. ಕೆ. ಪಿ. – ಡಿ. ಕೆ. ಜೆ. ಹಿರಿಯ ಪಾತ್ರವಹಿಸುತ್ತಾರೆ. ಅಕ್ಕ–ತಮ್ಮ ಕರ್ನಾಟಕ ಸಂಗೀತ ರಸಿಕರ ಮನದಲ್ಲಿ ಚಿರಸ್ಥಾಯಿಯಾಗಿ ಉಳಿಯುವ ಹಲವಾರು ಕಚೇರಿಗಳನ್ನು ಜೊತೆಯಾಗಿ ನೀಡುತ್ತಾರೆ. ತಮಿಳು ಚಿತ್ರರಂಗದಲ್ಲೂ ಸಂಗೀತ ನಿರ್ದೇಶಕರಾಗಿ ತಮ್ಮನ್ನು ತೊಡಗಿಸಿಕೊಂಡಿದ್ದ ಶಿವನ್ ಅವರಿಂದ 'ತ್ಯಾಗಭೂಮಿ', 'ನಾಮ್ ಇರುವರ್', 'ವೇದಾಳ ಉಲಗಂ' ಮೊದಲಾದ ಚಿತ್ರಗಳಲ್ಲಿ ಪಟ್ಟಮ್ಮಾಳ್ ಅವರು ಹಾಡಿದ ಹಾಡುಗಳು ಜನಪ್ರಿಯವಾಗುತ್ತವೆ. 'ಮಾಮವ ಪಟ್ಟಾಭಿರಾಮ', 'ಸೌಂದರರಾಜಂ' ಮೊದಲಾದ ಕೃತಿಗಳಂತೆಯೇ ಸುಬ್ರಹ್ಮಣ್ಯ ಭಾರತಿ ಹಾಗೂ ಪಾಪನಾಶಂ ಶಿವನ್ ಅವರ ದೇಶಭಕ್ತಿ ಪರ ರಚನೆಗಳೂ ಡಿ. ಕೆ. ಪಿ.ಯವರ ಘನಶಾರೀರದ ಭಾವಪೂರ್ಣ ಗಾಯನದಲ್ಲಿ ಮನೆ ಮಾತಾಗುತ್ತವೆ. ಶಾಸ್ತ್ರೀಯ ಸಂಗೀತ ಕ್ಷೇತ್ರದಲ್ಲಿ ಲಯನೈಪುಣ್ಯ ಬಯಸುವ ರಾಗ–ತಾನ–ಪಲ್ಲವಿಯನ್ನು ಮಹಿಳಾ ಕಲಾವಿದರು ಹಾಡಬಲ್ಲರೇ ಎನ್ನುವ ಅನುಮಾನ, ಪೂರ್ವಗ್ರಹಗಳಿದ್ದ ಕಾಲದಲ್ಲಿ ಸಂಕೀರ್ಣ ಪಲ್ಲವಿಗಳನ್ನು, ಸೀಮಿತ ವ್ಯಾಪ್ತಿಯ ರಾಗಗಳೆಂದು ಪರಿಗಣಿಸುವ ಜಗನ್ಮೋಹಿನಿ – ಅಮೃತವರ್ಷಿಣಿಯಂಥ ರಾಗಗಳಲ್ಲೂ ವಿಸ್ತರಿಸಿ, ದಿಗ್ಗಜರಿಂದ ಸೈ ಎನಿಸಿಕೊಂಡ ಡಿ. ಕೆ. ಪಿ., 'ನಿಮ್ಮ ಕಾರ್ಯವೈಖರಿ, ನಿಮ್ಮ ಬದುಕಿನ ಶೈಲಿ ನಿಮ್ಮ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುತ್ತವೆ' ಎನ್ನುವುದನ್ನು ಬದುಕಿ ತೋರಿಸಿದ ಮೌನಕ್ರಾಂತಿಕಾರಿ.

ಕರ್ನಾಟಕ ಸಂಗೀತ ಪ್ರಪಂಚದಲ್ಲಿ ಅತಿ ಹೆಚ್ಚಿನ ಗೌರವಕ್ಕೆ ಪಾತ್ರವಾದ ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ 'ಸಂಗೀತ ಕಲಾನಿಧಿ' ಬಿರುದು, ಭಾರತ ಸರ್ಕಾರದ 'ಪದ್ಮವಿಭೂಷಣ' ಪುರಸ್ಕಾರ, ಮಧ್ಯಪ್ರದೇಶ ಸರ್ಕಾರದ 'ಕಾಳಿದಾಸ್ ಸಮ್ಮಾನ್', ಆಕಾಶವಾಣಿಯ 'ನ್ಯಾಷನಲ್ ಆರ್ಟಿಸ್ಟ್' ಪುರಸ್ಕಾರ... ಸಾವಿರಾರು ಸಂಗೀತ ಪ್ರೇಮಿಗಳ ಅಭಿಮಾನ, ಸಂಗೀತಲೋಕದ ಘಟಾನುಘಟಿಗಳ ಮೆಚ್ಚುಗೆ, ಮರ್ಯಾದೆ... 'ಪಾಡು ಪಟ್ಟಮ್ಮಾಳ್' (ಹಾಡು ಪಟ್ಟಮ್ಮಾಳ್, ಪಾಡುಪಟ್ಟ ಅಮ್ಮಾಳ್ – ಈ ಎರಡೂ ಅರ್ಥಗಳು ಅನ್ವಯವಾಗುತ್ತವೆ) ಪಟ್ಟ ಪಾಡೆಲ್ಲ ಹಾಡಾಗಿ, ಆ ಸಂಜೆ ಕಂಡದ್ದು ನೆಮ್ಮದಿಯ ನಂದಾದೀಪದಂತೆ. ಅವರ ಜನ್ಮಶತಮಾನವನ್ನು ಆಚರಿಸುತ್ತಿರುವ ಈ ವರ್ಷದಲ್ಲಿ ಸಂಗೀತ ವಿದ್ಯಾರ್ಥಿಯಾಗಿ, ಕಲಾವಿದೆಯಾಗಿ, ಗುರುವಾಗಿ, ಇಷ್ಟೆಲ್ಲಾ ಸಾಧನೆಗಳ ನಡುವೆಯೂ ಮುಗ್ಧತೆಯನ್ನು ಉಳಿಸಿಕೊಂಡು, ನಮ್ಮ ಮನೆಯವರೇ ಎನ್ನುವಂತೆ ಆತ್ಮೀಯತೆ ತೋರಿದ, ಎಲ್ಲ ಅರ್ಥದಲ್ಲೂ ಹಿರಿಜೀವವಾದ ಅವರ ನೆನಪು ನಮಗೆ ಸದಾ ದಾರಿದೀಪದಂತೆ.

**ಶ್ರೀಮಾತಾ ರಮಾನಂದ್**
ನಂ. ಎನ್–೩೭ (ಹೊಸ ನಂ. ೪೧)
'ಶ್ರೀಮಾತಾ', ೫ನೇ ಅಡ್ಡರಸ್ತೆ
ಲಕ್ಷ್ಮಿನಾರಾಯಣಪುರ
ಬೆಂಗಳೂರು – ೫೬೦ ೦೨೧

## ಅಭಿನಂದನೆ ...

ಧಾರವಾಡದ ಶರಣೆ ಅಕ್ಕಮಹಾದೇವಿ ಜಯಂತ್ಯುತ್ಸವ ಪ್ರಯುಕ್ತ ಪ್ರಸಕ್ತ ಸಾಲಿನ ಅಕ್ಕ ಬಳಗದವರು ನೀಡುವ 'ಅಕ್ಕ ಪ್ರಶಸ್ತಿ'ಯು ಅಂಕಣಕಾರ್ತಿ, ಮಹಿಳಾ ಹೋರಾಟಗಾರ್ತಿ ರೂಪಾ ಹಾಸನ ಅವರಿಗೆ ಲಭಿಸಿದೆ. ಇವರಿಗೆ 'ಹೊಸತು' ಬಳಗದ ಅಭಿನಂದನೆಗಳು.






# ಸಾಮಾಜಿಕ ಬದಲಾವಣೆಯೇ ಕಾರ್ಮಿಕ ಚಳುವಳಿಯ ಉದ್ದೇಶ

# ಅಮರ್‌ಜಿತ್ ಕೌರ್



ಆಲ್ ಇಂಡಿಯ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ ಪ್ರಥಮ ಮಹಿಳಾ ಪ್ರಧಾನ ಕಾರ್ಯದರ್ಶಿಯಾಗಿರುವ ಅಮರ್‌ಜಿತ್ ಕೌರ್ ಅವರ ಸಂದರ್ಶನವನ್ನು ಹೊಸತು ಪತ್ರಿಕೆಗಾಗಿ ಶ್ರೀಮತಿ ಎ. ಜ್ಯೋತಿ ಮತ್ತು ಡಿ. ಎ. ವಿಜಯ ಭಾಸ್ಕರ್‌ರವರು ಮಾಡಿದ್ದು ಅದರ ಒಂದು ಭಾಗವನ್ನು ಈಗಾಗಲೇ ಕಳೆದ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಕಾರ್ಮಿಕ ಚಳುವಳಯನ್ನು ಕುರಿತ ಚಿಂತನೆಯನ್ನುಳ್ಳ ಅವರ ಸಂದರ್ಶನದ ಉಳಿದ ಭಾಗವನ್ನು ಈ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.

**ಹೊಸತು :** ಕಾರ್ಮಿಕ ಚಳವಳಿ ತನ್ನ ಉದ್ದೇಶಿತ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆ ಉಂಟುಮಾಡಲು ಸಾಧ್ಯವಾಗಿದೆಯೆ? ಇದನ್ನು ಹೇಗೆ ವಿವರಿಸುತ್ತೀರಿ?

**ಅಮರ್‌ಜಿತ್ ಕೌರ್ :** ಸಾಮಾಜಿಕ ಬದಲಾವಣೆಯೇ ಕಾರ್ಮಿಕ ಚಳವಳಿಯ ಉದ್ದೇಶ. ಇದನ್ನು ಕಾರ್ಮಿಕ ಸಂಘಟನೆಗಳ ನಾಯಕತ್ವ ವಹಿಸಿರುವವರು ಅರ್ಥ ಮಾಡಿಕೊಳ್ಳಬೇಕು. ಇದರ ಅರಿವಿದ್ದಾಗ ಅವರು ಕಾರ್ಮಿಕರ ಹಕ್ಕುಗಳಿಗಾಗಿ, ಅವರ ಸಂಬಳ, ಸಾರಿಗೆ, ಇತ್ಯಾದಿ ಸೌಲಭ್ಯಗಳಿಗಾಗಿ, ಸವಲತ್ತುಗಳಿಗಾಗಿ, ಕಲ್ಯಾಣ ಕಾರ್ಯಕ್ರಮಗಳಿಗಾಗಿ ಮತ್ತು ಸಾಮೂಹಿಕ ಚೌಕಾಶಿ ಪ್ರಕ್ರಿಯೆಯಲ್ಲಿ ಹೋರಾಡಲು ಸಹಕಾರಿಯಾಗುತ್ತದೆ. ಅಲ್ಲದೆ, ಕಾರ್ಮಿಕ ಸಂಘಟನೆಗಳ ಕಾರ್ಯಕರ್ತರಿಗೆ ಶೈಕ್ಷಣಿಕ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ರಾಜಕೀಯ ಪ್ರಜ್ಞೆ ಮೂಡಿಸುವುದು ಅತ್ಯಗತ್ಯ. ಕಾರ್ಮಿಕರಿಗೆ ಸಂಬಳಕ್ಕಾಗಿ, ಸೌಲಭ್ಯಕ್ಕಾಗಿ ಮಾಲೀಕರೊಡನೆ ಗುದ್ದಾಡುವುದು ಪ್ರತಿದಿನದ ಹೋರಾಟವಾಗಿದ್ದು, ತಮ್ಮ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಮತ್ತು ಘನತೆಯ ಬದುಕನ್ನೊದಗಿಸುವಲ್ಲಿ ಅಂತಿಮವಾಗಿ ಕಾರ್ಯಪ್ರವೃತ್ತವಾಗುವುದು ಕಾರ್ಮಿಕರ ಪರವಾಗಿರುವ ಸರ್ಕಾರಗಳೇ ಎಂಬ ರಾಜಕೀಯ ಪ್ರಜ್ಞೆ ಕಾರ್ಮಿಕರಲ್ಲಿ ಮೂಡಬೇಕಿದೆ. ಇದನ್ನು ತಿಳಿಯಬೇಕಾದರೆ ತಮ್ಮ ಸುತ್ತಲು ಜರುಗುತ್ತಿರುವ ರಾಜಕೀಯ ವಿದ್ಯಮಾನಗಳ ಅರಿವಿರಬೇಕಾದ್ದು ಅತ್ಯಗತ್ಯ.

ಚರಿತ್ರೆಯ ಪುಟಗಳನ್ನು ತೆರೆದು ನೋಡಿದರೆ, ಭಾರತದ ಕಾರ್ಮಿಕ ಚಳವಳಿ ರಾಜಕೀಯ ವಾತಾವರಣದಲ್ಲಿ ಉದಯವಾಯಿತು. ಆದ್ದರಿಂದ ಕಾರ್ಮಿಕ ಸಂಘಟನೆಗಳಿಗೆ ರಾಜಕೀಯವಿಲ್ಲವೆಂದು ನಾವೆಂದೂ ಹೇಳುವುದಿಲ್ಲ. ಕಾರ್ಮಿಕ ಚಳವಳಿಯನ್ನು ರಾಜಕೀಯರಹಿತವಾಗಿರಿಸಲು ಸಾಧ್ಯವಿಲ್ಲ. ನನ್ನ ಪದಕೋಶದಲ್ಲಿ "ರಾಜಕೀಯರಹಿತ" ಎಂಬ ಯಾವುದೇ ಪದವೂ ಇಲ್ಲ. ನಾವು ರಾಜಕೀಯದಿಂದ ದೂರವಿರಬೇಕು ಮತ್ತು ರಾಜಕೀಯರಹಿತವಾಗಿರಬೇಕು ಎಂಬುದೇ ಅತಿದೊಡ್ಡ ರಾಜಕೀಯ. ಜನರಿಂದ ತಮ್ಮ ಸಂಕಷ್ಟಗಳ ಮೂಲಕಾರಣವನ್ನು ಮರೆಮಾಚುವುದೇ ಇದರ ಉದ್ದೇಶ. ಈ ರೀತಿ ಮಾಡುವುದರಿಂದ ಅದೇ ಜನರನ್ನು ತಮಗೆ ಬೇಕಾದ ದಿಕ್ಕಿನಲ್ಲಿ ಬಳಸಿಕೊಳ್ಳಬಹುದಾಗಿದೆ.

ನಾನು ಆಗಲೇ ಹೇಳಿದಂತೆ ಭಾರತದಲ್ಲಿ ನಮ್ಮ ಕಾರ್ಮಿಕ ಚಳವಳಿ ರಾಜಕೀಯ ಹಿನ್ನೆಲೆಯಲ್ಲಿ ರೂಪುಗೊಂಡಿದ್ದು. ಅಂತರರಾಷ್ಟ್ರೀಯ ಕಾರ್ಮಿಕ ಚಳವಳಿ ಬೆಳೆಯುತ್ತಿದ್ದಾಗ ಹಾಗೂ ರಾಷ್ಟ್ರೀಯ ವಿಮೋಚನಾ ಚಳವಳಿ ಮುಂದೆ ಸಾಗುತ್ತಿದ್ದ ಸನ್ನಿವೇಶದಲ್ಲಿ ಭಾರತದ ಕಾರ್ಮಿಕ ಚಳವಳಿಯ ಉಗಮವಾಯಿತು. ೧೯೨೦ರಲ್ಲಿ ಜನ್ಮತಳೆದ ಎಐಟಿಯುಸಿಯ ಹಿನ್ನೆಲೆ ಹೇಗಿತ್ತೆಂದರೆ ಕಾರ್ಮಿಕರು ಬ್ರಿಟಿಷ್-ವಿರೋಧಿ ಚಳವಳಿಯ ಕರೆಗಳಿಗೆ ಸಕ್ರಿಯವಾಗಿ ಸ್ಪಂದಿಸುತ್ತಿದ್ದರು. ರಾಜಕೀಯ ಬೇಡಿಕೆಗಳನ್ನಿರಿಸಿ ನಡೆಸುತ್ತಿದ್ದ ಹೋರಾಟಗಳಲ್ಲಿ ಅವರು ಪಾಲ್ಗೊಳ್ಳುತ್ತಿದ್ದರು. ಕಾರ್ಮಿಕ ವರ್ಗ ಎಂಬುದು ಅತ್ಯಂತ ಪ್ರಬಲ ಮತ್ತು ಧೀರೋದಾತ್ತ ಶಕ್ತಿ ಎಂಬುದನ್ನು ರಾಷ್ಟ್ರೀಯ ವಿಮೋಚನಾ ಚಳವಳಿಗಾರರು ಮನಗಂಡರು. ಈ ಶಕ್ತಿ ಒಂದಾಗಿ ರಾಷ್ಟ್ರಮಟ್ಟದಲ್ಲಿ ಕಾರ್ಮಿಕ ಸಂಘಟನೆಯಾಗಿ ಸಂಘಟಿತರಾದರೆ ತಮ್ಮ ಹಕ್ಕುಗಳನ್ನು ಪಡೆಯುತ್ತಾರಲ್ಲದೆ ಸ್ವಾತಂತ್ರ್ಯ ಚಳವಳಿಗೂ ಒಂದು ದೊಡ್ಡ ಪ್ರಬಲ ಶಕ್ತಿಯಾಗುತ್ತಾರೆಂಬುದನ್ನು ಅರಿತರು. ಈ ರೀತಿ ರಾಷ್ಟ್ರೀಯ ವಿಮೋಚನಾ ಚಳವಳಿಗೂ ಕಾರ್ಮಿಕ ಚಳವಳಿಗೂ ನಂಟು ಬೆಳೆಯಿತು. ೧೯೨೦ರಲ್ಲಿ ಎಐಟಿಯುಸಿಯ ಸಂಸ್ಥಾಪಕ ಅಧ್ಯಕ್ಷರಾಗಿದ್ದ ಲಾಲಾ ಲಜಪತ್ ರಾಯ್ ಅವರೇ ಓರ್ವ ಸ್ವಾತಂತ್ರ್ಯ ಹೋರಾಟಗಾರರಾಗಿದ್ದವರು. ಅಷ್ಟೇ ಅಲ್ಲ, ೧೯೨೮ರಲ್ಲಿ ಸೈಮನ್ ಆಯೋಗ ಭಾರತಕ್ಕೆ ಭೇಟಿಯಿತ್ತಾಗ ನಡೆದ ಪ್ರತಿಭಟನೆಯ ಸಂದರ್ಭದಲ್ಲಿ ಲಾಲಾ ಲಜಪತ್ ರಾಯ್ ಅವರು ನಿಧನರಾಗುತ್ತಾರೆ. ಅವರಿಂದ ಮತ್ತಿತರ ಕ್ರಾಂತಿಕಾರಿಗಳಿಂದ ಸ್ಫೂರ್ತಿಗೊಂಡ ಅನೇಕ ಯುವಜನರು ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯರಾಗುತ್ತಾರೆ. ಭಗತ್ ಸಿಂಗ್ ಮತ್ತವನ ಸಂಗಡಿಗರು ಶಾಸನಸಭೆಯೊಳಗೆ ಬಾಂಬ್ ಎಸೆದಾಗ ಯಾರನ್ನೂ



ಗಾಯಗೊಳಿಸಲೆಂದು ಆ ಕೃತ್ಯ ನಡೆಸಲಿಲ್ಲ. ಒಳಗಿದ್ದವರ ಗಮನ ಸೆಳೆದು ಕರಪತ್ರಗಳನ್ನು ಹಂಚುವುದು ಮಾತ್ರ ಅವರ ಉದ್ದೇಶವಾಗಿತ್ತು. ಆ ಬೇಡಿಕೆಗಳೆಲ್ಲವೂ ಕಾರ್ಮಿಕ ವರ್ಗಕ್ಕೆ ಸಂಬಂಧಿಸಿದ್ದೆಂಬುದು ಜನರಿಗೆ ತಿಳಿದಿಲ್ಲ.

ಕಾರ್ಮಿಕ ಚಳವಳಿಯು ಅಂತರ್ಗತವಾಗಿ, ಬಹಿರಂಗವಾಗಿ, ಸರ್ವರೀತಿಯಲ್ಲೂ ಕಾವು ಪಡೆಯುತ್ತಲಿತ್ತು. ದ್ವಿಮುಖ ಬೆಳವಣಿಗೆ ಉಂಟಾಗಿತ್ತು. ಒಂದು, ಕಾರ್ಮಿಕ ಚಳವಳಿ ರಾಜಕೀಯ ಚಳವಳಿಯಾಗಿ ರೂಪುಗೊಂಡು ರಾಷ್ಟ್ರೀಯ ವಿಮೋಚನಾ ಚಳವಳಿಯ ಭಾಗವಾಗಿತ್ತು. ಎರಡನೆಯದಾಗಿ, ದೇಶದ ಸ್ವಾತಂತ್ರ್ಯ ಚಳವಳಿ ಕಾರ್ಮಿಕ ಚಳವಳಿಯ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸಿ ಅದನ್ನು ಬೆಂಬಲಿಸಿ ಸಹಕರಿಸಬೇಕೆಂಬ ಚಿಂತನೆ ಪಡೆದುಕೊಂಡಿತ್ತು. ೧೯೨೬ರಲ್ಲೇ ಟ್ರೇಡ್ ಯೂನಿಯನ್ ಕಾಯಿದೆ ರಚನೆಯಾಗಿತ್ತು. ೧೯೨೩ರಲ್ಲಿ ಕಾರ್ಮಿಕರ ಪರಿಹಾರ ಕಾಯಿದೆಯನ್ನು ಗಳಿಸಿದ್ದೆವು. ೧೯೨೮ರಲ್ಲಿ ಮತ್ತೊಂದು ಕಾರ್ಮಿಕ ಕಾಯಿದೆ ಪಡೆದಿದ್ದೆವು. ಬ್ರಿಟಿಷರು ರೂಪಿಸಿದ್ದ ಕಾಯಿದೆಗಳಿಗೆ ತಿದ್ದುಪಡಿ ತಂದು ಹೊಸ ಕಾಯಿದೆಗಳನ್ನು ರಚಿಸುವತ್ತ ನಂತರದಲ್ಲಿ ನಾವು ಗಮನ ಹರಿಸಿದೆವು. ಭಾರತದ ಸಂವಿಧಾನವನ್ನು ರಚಿಸುವ ಸಂದರ್ಭದಲ್ಲಿ ರಾಷ್ಟ್ರನಾಯಕರು ಕಾರ್ಮಿಕ ವರ್ಗವನ್ನು ಕಡೆಗಣಿಸಲಾಗಲಿಲ್ಲ. ನಿಗದಿತ ಕೆಲಸದ ಅವಧಿಗಾಗಿ, ಕನಿಷ್ಠ ಕೂಲಿಗಾಗಿ ಮತ್ತು ಸಾಮಾಜಿಕ ಭದ್ರತೆಗಾಗಿ ಕಾರ್ಮಿಕ ವರ್ಗದ ಹೋರಾಟ ನಡೆದಿತ್ತು. ಹಾಗಾಗಿ ಕಾರ್ಮಿಕ ಚಳವಳಿ ಭಾರತದ ವಿಮೋಚನಾ ಚಳವಳಿಯಲ್ಲಿ ಪಾಲ್ಗೊಳ್ಳುವುದರ ಜೊತೆಗೆ ಕಾರ್ಮಿಕರ ಹಕ್ಕುಗಳಿಗಾಗಿ ಹೋರಾಟ ನಡೆಸಿದ್ದರ ಪರಿಣಾಮವಾಗಿ ಭಾರತದ ಸಂವಿಧಾನದಲ್ಲಿ ದೇಶದ ಶ್ರಮಿಕರಿಗೆ ಸಂಬಂಧಪಟ್ಟ ವಿಷಯಗಳು ಅಡಕವಾದವು. ಭಾರತದ ಕಾರ್ಮಿಕ ಚಳವಳಿ ಈ ಸಾಧನೆಗೆ ಕಾರಣವಾಗಿದೆ.

ಭಾರತದ ಸಂವಿಧಾನದಲ್ಲಿ ಚಳವಳಿ ಮತ್ತು ಸಂಘಟನೆ ಸ್ಥಾನ ಪಡೆದಿವೆ. ಸಂಘ ರಚಿಸಿಕೊಳ್ಳುವ ಮೂಲಭೂತ ಹಕ್ಕು ನಮ್ಮದಾಗಿದೆ. ನಮ್ಮ ಸಂವಿಧಾನದಲ್ಲಿ ಸಮಾನ ಕೆಲಸಕ್ಕೆ ಸಮಾನ ವೇತನದ ಪರಿಕಲ್ಪನೆಯಿದೆ, ಹೆರಿಗೆ ಸೌಲಭ್ಯದ ಪರಿಕಲ್ಪನೆಯಿದೆ, ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಯ ಚಿಂತನೆಯನ್ನೂ ಸಂವಿಧಾನ ಒಳಗೊಂಡಿದೆ. ಆನಂತರದ ದಿನಗಳಲ್ಲಿ ಇವುಗಳು ಶಾಸನಗಳಾಗಿ ಪರಿವರ್ತನೆಯಾಗಿವೆ.

ಎಲ್ಲಿಯವರೆಗೂ ನಾವು ಸಂಘಟಿತರಾಗಿ ಸರ್ಕಾರಗಳ ಮೇಲೆ ಒತ್ತಡ ಹೇರುವ ದೊಡ್ಡ ಗುಂಪುಗಳಾಗುವುದಿಲ್ಲವೋ ಅಲ್ಲಿಯವರೆಗೂ ನಮ್ಮ ಹಕ್ಕುಗಳನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ನಾವು ಮಾಡುತ್ತಿರುವುದೇನು? ನಾವು ಕಾರ್ಮಿಕರ ಹಕ್ಕುಗಳನ್ನು ಪಡೆಯಲು ಶಾಸನಸಭೆಗಳು ಮತ್ತು ಸಂಸತ್ತಿನಲ್ಲಿರುವ ರಾಜಕೀಯ ನಾಯಕತ್ವದ ಮೇಲೆ ಒತ್ತಡ ಹೇರುತ್ತಿದ್ದೇವೆ. ಇದೂ ಕೂಡ ರಾಜಕಾರಣವೇ. ಈಗ ಹೇಳಿ, ನಾವು ರಾಜಕಾರಣದಿಂದ ದೂರವಿದ್ದೇವೆಂದು ಹೇಳಲು ಸಾಧ್ಯವೇ? ಜನತಾ ಪ್ರಾತಿನಿಧ್ಯ ಕಾಯಿದೆಯಡಿ ಚುನಾವಣೆಗಳಲ್ಲಿ ಅಭ್ಯರ್ಥಿಗಳನ್ನು ಕಣಕ್ಕಿಳಿಸಲು ಕಾರ್ಮಿಕ ಸಂಘಟನೆಗಳೇನೂ ರಾಜಕೀಯ ಪಕ್ಷಗಳಲ್ಲ. ಆದರೆ ಕಾರ್ಮಿಕ ವರ್ಗ ಸಮಾಜದ ಒಂದು ಬಹುದೊಡ್ಡ ಗುಂಪಾಗಿದ್ದು ತನ್ನ ಪಾಲನ್ನು ಪಡೆಯಲು ರಾಜಕೀಯ ಪ್ರಕ್ರಿಯೆಗಳ ಮೇಲೆ ಪ್ರಭಾವ ಬೀರುತ್ತದೆ. ಯಾವ ಹಾದಿಯ ರಾಜಕಾರಣ ಅನುಸರಿಸುವುದರಿಂದ ಉದ್ದೇಶಿತ ಪ್ರತಿಫಲ ದೊರೆಯುವುದೆಂಬುದನ್ನು ನಮ್ಮ ಅನುಯಾಯಿಗಳಿಗೆ, ಕಾರ್ಯಕರ್ತರಿಗೆ, ಸದಸ್ಯರಿಗೆ ತಿಳಿಸದಿದ್ದರೆ ನಾವು ರಾಜಕೀಯಕರಣಗೊಳಿಸುವುದರಲ್ಲಿ ವಿಫಲವಾಗುತ್ತಿದ್ದೇವೆ ಎಂದರ್ಥ. ಹೀಗೆ ರಾಜಕೀಯ ಪ್ರಜ್ಞೆ ಮೂಡಿಸದೆ ಎಷ್ಟೇ ಬೃಹತ್ ಹೋರಾಟಗಳನ್ನು ಹಮ್ಮಿಕೊಂಡರೂ ಅದು ಕಾರ್ಮಿಕ ವರ್ಗದ ಪರವಾಗಿ ಫಲ ನೀಡುವುದರಲ್ಲಿ ಯಶಸ್ವಿಯಾಗುವುದಿಲ್ಲ. ಕಾರ್ಮಿಕ ವರ್ಗ ಯಾವ ರಾಜಕೀಯ ಶಕ್ತಿಗಳ ವಿರುದ್ಧ ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತದೆಯೋ, ಆ ಕಾರ್ಮಿಕ ವಿರೋಧಿ ಶಕ್ತಿಗಳೇ ಹೋರಾಟಗಳ ಪ್ರತಿಫಲವನ್ನು ಉಣ್ಣುವುದರಲ್ಲಿ ಯಶಸ್ವಿಯಾಗುತ್ತವೆ. ಮತ್ತು ಆ ರಾಜಕೀಯ ಶಕ್ತಿಗಳೇ ಅಧಿಕಾರಸ್ಥಾನಗಳಲ್ಲಿ ಕುಳಿತು ಪುನಃ ಕಾರ್ಮಿಕ ವಿರೋಧಿ ಕೃತ್ಯಗಳನ್ನು ನಡೆಸುತ್ತವೆ. ಕಾರ್ಮಿಕ ವರ್ಗದ ಪರವಾಗಿ ಯಾರು ನಿಲ್ಲುತ್ತಾರೆಂಬುದನ್ನು, ಕಾರ್ಮಿಕರಿಗೋಸ್ಕರ ಯಾರು ಹೋರಾಡುತ್ತಾರೆಂಬುದನ್ನು, ಶಾಸನಸಭೆಯಲ್ಲಿ ಮತ್ತು ಸಂಸತ್ತಿನಲ್ಲಿ ಕಾರ್ಮಿಕರ ಪರವಾಗಿ ಯಾರು ಮಾತನಾಡುತ್ತಾರೆಂಬುದನ್ನು, ಕಾರ್ಮಿಕರಿಗೆ ತಿಳಿಸುವುದು ಅತ್ಯಗತ್ಯವಾಗಿದೆ. ಮೆರವಣಿಗೆಯಲ್ಲಿ ಬಂಡವಾಳಶಾಹಿಗಳೂ ಸೇರಿದಂತೆ ಎಲ್ಲರೂ ಬರುತ್ತಾರೆ. ಆದರೆ ನೀತಿ ನಿರೂಪಣೆಯ ಹಂತದಲ್ಲಿ ಯಾರು ಯಾರಿಗೆ ಏನನ್ನು ಕೊಡುತ್ತಾರೆ ಎಂಬುದು ಮುಖ್ಯವಾಗುತ್ತದೆ. ಮೋದಿ ಸರ್ಕಾರದ ಆಯವ್ಯಯಗಳನ್ನು ಗಮನಿಸಿದರೆ ಅದು ಸಂಪೂರ್ಣ ಕಾರ್ಪೊರೇಟ್ ಪರ ಎಂಬುದು ಅರಿವಾಗುತ್ತದೆ; ಅದು ಕಾರ್ಮಿಕರಿಗಾಗಿ ಇಲ್ಲ, ಜನಸಾಮಾನ್ಯರ ಪರವಾಗಿ ಇಲ್ಲ. ಆಯವ್ಯಯಗಳು ಸರ್ಕಾರದ ನೀತಿಗಳ ಪ್ರತಿಫಲನವಷ್ಟೇ. ಇವುಗಳನ್ನು ದುಡಿಯುವ ಜನರಿಗೆ ಸ್ಪಷ್ಟವಾಗಿ ಹೇಳಬೇಕಿದೆ.

**ಹೊಸತು :** ವಿವಿಧ ಕಾರ್ಮಿಕ ಸಂಘಟನೆಗಳು ದೇಶದಾದ್ಯಂತ ಸಮಸ್ಯೆಗಳ ಆಧಾರದಲ್ಲಿ ಒಟ್ಟುಗೂಡುತ್ತವೆ. ಆರ್ಥಿಕ ಬೇಡಿಕೆಗಳನ್ನಿಟ್ಟುಕೊಂಡು ಕೋಟಿಗಟ್ಟಲೆ ಕಾರ್ಮಿಕರು ಹಲವಾರು ಹೋರಾಟಗಳನ್ನು, ಮುಷ್ಕರಗಳನ್ನು ಯಶಸ್ವಿಯಾಗಿ ನಡೆಸಿದ್ದಾರೆ, ನಡೆಸುತ್ತಲೇ ಇದ್ದಾರೆ. ಇಷ್ಟೆಲ್ಲಾ ಬಲಿಷ್ಠವಾಗಿರುವ ಕಾರ್ಮಿಕ ವರ್ಗಕ್ಕೆ ಒಂದೇ ತೆರನಾದ ರಾಜಕೀಯ ಧೋರಣೆಯಿಲ್ಲದೆ ಕಾರ್ಮಿಕರ ಪರವಾದ ರಾಜಕೀಯ ಶಕ್ತಿಯಾಗಿ ಹೊರಹೊಮ್ಮಲು ಸಾಧ್ಯವಾಗಿಲ್ಲ ಎಂಬ ಅಭಿಪ್ರಾಯವಿದೆ. ಇದನ್ನು ಹೇಗೆ ಅರ್ಥೈಸುತ್ತೀರಿ?

**ಅಮರ್‌ಜಿತ್ ಕೌರ್ :** ಕಾರ್ಮಿಕ ಸಂಘಟನೆಗಳು ಸಮಸ್ಯೆಗಳ ಆಧಾರದಲ್ಲಿ ಒಂದಾಗಿ ಹೋರಾಡುತ್ತವೆ, ರಾಜಕೀಯವಾಗಿ ಒಟ್ಟುಗೂಡುವುದಿಲ್ಲ. ಹೌದು, ಇದು ನಿಶ್ಚಿತವಾಗಿ ಸಂಭವಿಸುತ್ತದೆ. ಇದು ನನಗೆ ಭಯ ಮೂಡಿಸುವ ವಿಚಾರವಲ್ಲ. ಒಂದು ವೇಳೆ ಕಾರ್ಮಿಕರ ವರ್ಗಪ್ರಜ್ಞೆಯಿಂದ ಕಾರ್ಮಿಕ ಸಂಘಟನೆಯಲ್ಲಿ ತೊಡಗುವ ಜನರು ರಾಜಕೀಯ ಪ್ರಜ್ಞೆಯಿಲ್ಲದೆ ವರ್ತಿಸಿದರೆ ಅದು ನನಗೆ ಆತಂಕ ತರುವ

ಸಂಗತಿಯಾಗುತ್ತದೆ. ಹೋರಾಟಗಳಲ್ಲಿ ಎಲ್ಲರನ್ನೂ ಒಟ್ಟಿಗೆ ತರುವಂತಹ ಚಿಂತನೆಯು ಆತಂಕಕಾರಿ ಅಲ್ಲವೇ ಅಲ್ಲ. ನಿಜ ಹೇಳಬೇಕೆಂದರೆ ಅದೂ ಒಂದು ಉಪಯುಕ್ತವಾದ ರಾಜಕೀಯವೇ. ತೀವ್ರಗಾಮಿ ಬಲಪಂಥೀಯರಿಂದ ಹಿಡಿದು ತೀವ್ರವಾದಿ ಎಡಪಂಥೀಯರವರೆಗೆ ಎಲ್ಲಾ ಕಾರ್ಮಿಕ ಸಂಘಟನೆಗಳೂ ಒಂದೇ ವೇದಿಕೆಯಲ್ಲಿ ಚಳವಳಿನಿರತರಾಗುವುದರಿಂದ ಹೋರಾಡಲೇಬೇಕು ಮತ್ತು ಹೋರಾಡಿ ಗೆಲ್ಲುತ್ತೇವೆ ಎಂಬ ವಿಶ್ವಾಸ ಸಾಮಾನ್ಯ ಕಾರ್ಮಿಕರಲ್ಲಿ ಮೂಡುತ್ತದೆ. ಇದರ ಜೊತೆಗೆ ಇತರ ವಿಭಾಗಗಳ ಜನತೆಗೆ ಹೋರಾಡಲು ಸ್ಫೂರ್ತಿ ನೀಡಿದಂತಾಗುತ್ತದೆ. ಮೂರನೆಯ ಲಾಭವೇನೆಂದರೆ ಕಾರ್ಮಿಕರ ವಿರುದ್ಧವಾಗಿರುವ ಹಲವು ನೀತಿಗಳಿಗೆ ತಡೆಯೊಡ್ಡಲು ಸಾಧ್ಯವಾಗಿದೆ. ಈ ಮೂರೂ ಲಾಭಗಳು ರಾಜಕೀಯ ಮಹತ್ವವುಳ್ಳಂತಹವು.

ಆದರೆ, ಉಂಟಾಗಬೇಕಿದ್ದ ರಾಜಕೀಯ ಬದಲಾವಣೆಯ ಲಾಭ ಮಾತ್ರ ಫಲಿಸುವುದಿಲ್ಲ. ವರ್ಗಪ್ರಜ್ಞೆಯನ್ನಾಧರಿಸಿ ಕಾರ್ಯನಿರತವಾಗಿರುವ ಕಾರ್ಮಿಕ ಸಂಘಟನೆಗಳು ಕಾರ್ಮಿಕರಿಗೆ ರಾಜಕೀಯ ಪ್ರಜ್ಞೆ ನೀಡದೆ ಹೋದರೆ, ರಾಜಕೀಯ ಸಂರಚನೆಯೊಳಗೆ ಬದಲಾವಣೆ ಬಾರದೆ ದುಡಿಯುವ ಪರವಾದ ನೀತಿಗಳು ಫಲಿಸದೆಂಬ ಪ್ರಜ್ಞೆ ಮೂಡಿಸದಿದ್ದರೆ ಈ ನಾಲ್ಕನೇ ಲಾಭ ದೊರೆಯದು. ಈಗ ನಮಗೆ ಈ ಕೆಲಸ ಸುಲಭವಾಗಿದೆ. ನೆಹರೂ ಅವರು ಪ್ರಧಾನಿಯಾಗಿದ್ದಾಗ ಪ್ರಥಮ ಕಾರ್ಮಿಕ ಆಯೋಗವನ್ನು ರಚಿಸಿದರು. ಆಗ ಸರ್ಕಾರವು ಇಂಡಿಯನ್ ಲೇಬರ್ ಕಾನ್ಫರೆನ್ಸ್‌ಗೆ ಸಕಲ ಗೌರವಾದರಗಳನ್ನೂ ನೀಡಿತ್ತು. ಅದರ ಶಿಫಾರಸ್ಸುಗಳನ್ನು ಆಲಿಸಿ ಗೌರವಿಸಲಾಗಿತ್ತು. ಆದರೆ ಅವುಗಳಲ್ಲಿ ಎಷ್ಟು ಪ್ರಮಾಣ ಜಾರಿ ಮಾಡಲಾಯಿತೆಂಬುದು ಪ್ರಶ್ನೆಯಾಗಿಯೇ ಉಳಿದಿದೆ ಎಂಬುದು ಬೇರೆ ವಿಚಾರ. ನಂತರದಲ್ಲಿ ದಿನೇದಿನೇ ಅದರ ಸ್ಥಾನಮಾನ ಕ್ಷೀಣಿಸತೊಡಗಿತು. ಇದು ದುಡಿಯುವ ವರ್ಗದ ಬಗೆಗಿನ ಸರ್ಕಾರಗಳ ಧೋರಣೆಯ ಮೇಲೆ ಅವಲಂಬಿತವಾಗಿತ್ತು. ನವ–ಆರ್ಥಿಕ ನೀತಿಗಳನ್ನು ಅನುಸರಿಸಿದಾಗಿನಿಂದ ಕಾರ್ಮಿಕ ಚಳವಳಿಯನ್ನು ಮತ್ತಷ್ಟು ಕಡೆಗಣಿಸಲಾಯಿತು. ಕಾರ್ಮಿಕ ಸಚಿವಾಲಯದ ಪಾತ್ರವೂ ಕ್ಷೀಣಿಸಿತು. ಹೀಗೆ ಕಾರ್ಮಿಕ ವರ್ಗದ ಮೇಲೆ ದಾಳಿ ಹೆಚ್ಚಿತು. ಪ್ರಸ್ತುತ ಮೋದಿ ಸರ್ಕಾರವು ಕಾರ್ಮಿಕರ ಬಗ್ಗೆ ತೀವ್ರ ಅನಾದರ ಹೊಂದಿದ್ದು, ಕಾರ್ಮಿಕ ವರ್ಗದ ವಿರುದ್ಧ ಹಗೆ ಸಾಧಿಸುತ್ತಿದೆ. ಇದು ಅವರ ನೀತಿಗಳಲ್ಲಿ ಪ್ರತಿಬಿಂಬಿತವಾಗುತ್ತಿದೆ.

ನಮಗೀಗ ಕಾರ್ಮಿಕ ಸಂಘಟನೆಗಳ ಸೈದ್ಧಾಂತಿಕ ಶಿಬಿರಗಳಲ್ಲಿ ಕಾರ್ಮಿಕರಿಗೆ ಉದಾಹರಣೆಗಳ ಸಹಿತ ವಿವರಿಸಲು ಸಾಧ್ಯವಾಗುತ್ತಿದೆ. ಸರ್ಕಾರಗಳು ಕಾರ್ಮಿಕ ವಿರೋಧಿಯಾಗಿದ್ದಾಗ ಕಾರ್ಮಿಕರ ಬೃಹತ್ ಹೋರಾಟಗಳ ನಡುವೆಯೂ ಅವರ ಉದ್ದೇಶಿತ ಗುರಿ ಮುಟ್ಟಲಾಗುತ್ತಿಲ್ಲವೇಕೆ ಎಂಬ ಪ್ರಶ್ನೆಗೆ ರಾಜಕೀಯ ವಿವರಣೆ ನೀಡಿ ಅರ್ಥೈಸುವುದು ಸರಳವಾಗಿದೆ. ಸರ್ಕಾರ ಕಾರ್ಮಿಕರ ಕೂಗನ್ನು ಆಲಿಸುವಂತಿದ್ದರೆ ಏನನ್ನಾದರೂ ಪಡೆಯಬಹುದು, ಸರ್ಕಾರವು ಕಾರ್ಮಿಕ – ಸ್ನೇಹಿಯಾಗಿದ್ದರೆ ಇನ್ನೂ ಹೆಚ್ಚು ಗಳಿಸಬಹುದು, ಸರ್ಕಾರ ಕಾರ್ಮಿಕರ ಪರವಾಗಿದ್ದರೆ ಮತ್ತಷ್ಟು ಪಡೆಯಬಹುದು. ಆದರೆ ಸರ್ಕಾರವು ಕಾರ್ಮಿಕ – ವಿರೋಧಿಯಾಗಿದ್ದರೆ ಮತ್ತು ಭಂಡತನ ಪ್ರದರ್ಶಿಸಿದರೆ ಅದರಿಂದ ಏನನ್ನೂ ಪಡೆಯಲಾಗದು. ಅಂತಹ ಸರ್ಕಾರ ದುಡಿಯುವ ಜನತೆಗೆ ಯಾವುದೇ ಲಾಭವನ್ನೂ ನೀಡಬಾರದೆಂದು ದೃಢಸಂಕಲ್ಪ ಕೈಗೊಂಡಿರುತ್ತದೆ. ಆದ್ದರಿಂದ ಒಟ್ಟಾಗಿ ಹೋರಾಡಬಾರದೆಂಬ ಅಭಿಪ್ರಾಯ ನಮ್ಮದಲ್ಲ. ಕೂಡಿ ಹೋರಾಡುವುದರಿಂದ ಸರ್ಕಾರಗಳ ವಿರುದ್ಧವಾಗಿರುವ ಅಭಿಪ್ರಾಯ ಮೂಡುತ್ತದೆ.

ಯುಪಿಎ – ೨ರ ಆರ್ಥಿಕ ನೀತಿಗಳ ವಿರುದ್ಧ ನಾವು ಅಂತಹದ್ದೇ ಜನಾಭಿಪ್ರಾಯ ಮೂಡಿಸಿದೆವು. ಆದರೆ ದುರದೃಷ್ಟವಶಾತ್ ಸೂಕ್ತ ಪರ್ಯಾಯವಿಲ್ಲದೆ ಬಲಪಂಥೀಯ ಶಕ್ತಿಗಳು ಸಂದರ್ಭದ ಲಾಭ ಪಡೆಯಲು ಅನುಕೂಲವಾಯಿತು. ಕಾರ್ಮಿಕ ಸಂಘಟನೆಗಳು ಜನತೆಗೆ ಸರ್ಕಾರವನ್ನು ಬದಲಿಸಬಹುದೆಂಬ ವಿಶ್ವಾಸ ನೀಡಿದವು. ಸರ್ಕಾರವೂ ಬದಲಾಯಿತು, ಆದರೆ ಜನತೆಯ ಒಳಿತಿಗಾಗಲ್ಲ. ಪರಿಸ್ಥಿತಿ ಇನ್ನೂ ಹದಗೆಟ್ಟಿತು. ಒಟ್ಟಾರೆ, ನವ–ಉದಾರವಾದಿ ಆರ್ಥಿಕ ನೀತಿಗಳನ್ನು ಬಯಲುಗೊಳಿಸುವುದರಲ್ಲಿ ಕಾರ್ಮಿಕ ಚಳವಳಿ ಮಹತ್ವದ ಪಾತ್ರ ವಹಿಸಿತು. ಕಾರ್ಮಿಕ–ವಿರೋಧಿ ಸರ್ಕಾರಗಳನ್ನು ಬದಲಿಸುವ ನಿಟ್ಟಿನಲ್ಲಿ ಜನಾಭಿಪ್ರಾಯ ಮೂಡಿಸಿ ಒಂದು ನಿರ್ದಿಷ್ಟ ವಾತಾವರಣ ಸೃಷ್ಟಿಸುವ ಕೆಲಸವನ್ನು ಕಾರ್ಮಿಕ ಸಂಘಟನೆಗಳು ಮಾಡಬಹುದು. ಇದಕ್ಕಿಂತಲೂ ಮಿಗಿಲಾಗಿ ಕಾರ್ಮಿಕರ ಪರವಾಗಿ ರಾಜಕಾರಣ ಮಾಡುವ ಜನರನ್ನು ಶಾಸಕಾಂಗದಲ್ಲಿ ಸ್ಥಾಪಿಸುವ ಕೆಲಸವನ್ನೂ ಮಾಡಬಹುದು. ಆದರೆ ಇದಕ್ಕೆ ದುಡಿಯುವ ವರ್ಗಕ್ಕೆ ಅರಿವು ಮೂಡಿಸಿ ರಾಜಕೀಯಕರಣಗೊಳಿಸುವ ಅಗತ್ಯವಿದೆ. ಈ ಪಾತ್ರವನ್ನು ಎಡಪಂಥೀಯ ಕಾರ್ಮಿಕ ಸಂಘಟನೆಗಳು ನಿರ್ವಹಿಸಬೇಕಿದ್ದು, ಇದರಲ್ಲಿ ಸಾಕಷ್ಟು ಹಿಂದುಳಿದಿದ್ದೇವೆ. ಈಗ ತುರ್ತಾಗಿ ಈ ಕಾರ್ಯವನ್ನು ಕೈಗೆತ್ತಿಕೊಳ್ಳಬೇಕಾಗಿದೆ. ಏಕೆಂದರೆ ಫ್ಯಾಸಿಸಂ ಈ ಕ್ಷಣದಲ್ಲಿ ಬಾಗಿಲು ಬಡಿಯುತ್ತಿರುವಾಗ ಅದಕ್ಕೆ ಮೊದಲು ಬಲಿಯಾಗುವುದು ಕಾರ್ಮಿಕ ಚಳವಳಿ ಎಂಬುವುದು ನಿಶ್ಚಿತ. ಕಾರ್ಮಿಕ ಕಾಯಿದೆ ಸುಧಾರಣೆಗಳ ಕಾರ್ಯಸೂಚಿಯ ಜೊತೆಗೂಡಿಯೇ ನವ–ಉದಾರವಾದಿ ಆರ್ಥಿಕತೆ ಕಾಲಿಟ್ಟಿದ್ದು. ಈ ನೀತಿಗೆ ಪ್ರಬಲವಾದ ಪ್ರತಿರೋಧ ಒಡ್ಡುವವರು ಕಾರ್ಮಿಕ ಸಂಘಟನೆಗಳೇ ಆದ್ದರಿಂದ ಅವುಗಳನ್ನು ನಿರ್ಬಂಧಿಸುವುದು ಸರ್ಕಾರಗಳಿಗೆ ಆದ್ಯತೆಯ ಮೇಲಿನ ಕೆಲಸವಾಗಿರುತ್ತದೆ. ಆದ್ದರಿಂದ ಕಾರ್ಮಿಕರಿಗೆ ರಾಜಕೀಯ ಶಿಕ್ಷಣ ನೀಡುವುದು ಇಂದಿನ ತುರ್ತು ಅಗತ್ಯವಾಗಿದೆ. ಹಲವು ತುಲನಾತ್ಮಕ ಅಂಕಿಅಂಶಗಳನ್ನೂ ನೀಡಿ ಅವರನ್ನು ಅಣಿಗೊಳಿಸಬೇಕಾಗಿರುವುದರಿಂದ ಕಾರ್ಮಿಕ ಸಂಘಟನೆಗಳು ಅಧ್ಯಯನಶೀಲರಾಗಬೇಕಾದ ಅವಶ್ಯಕತೆಯೂ ಇದೆ.

**ಹೊಸತು :** ಸರ್ಕಾರಗಳು ನವ–ಉದಾರವಾದಿ ಆರ್ಥಿಕ ನೀತಿಗಳನ್ನು ಅನುಸರಿಸುತ್ತಿರುವುದರಿಂದ ಅಸಂಖ್ಯಾತ ಕಾರ್ಖಾನೆಗಳು ಮುಚ್ಚಿದ್ದು, ಇದರಿಂದಾಗಿ ಕಾರ್ಮಿಕ ವರ್ಗದ ಪ್ರಮಾಣ ಕಡಿಮೆಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಕಾರ್ಮಿಕ ಸಂಘಟನೆಗಳು ಕಾರ್ಮಿಕರನ್ನು ಸಂಘಟಿಸುವುದು ಹೇಗೆ?

**ಅಮರ್‌ಜಿತ್ ಕೌರ್ :** ಔಪಚಾರಿಕ ಕ್ಷೇತ್ರಗಳಲ್ಲಿ, ಸರ್ಕಾರಿ ವಲಯದಲ್ಲಿ, ಸಾರ್ವಜನಿಕ ವಲಯದಲ್ಲಿ ಬಹಳಷ್ಟು ಖಾಯಂ ಉದ್ಯೋಗಗಳು ಕಡಿತಗೊಂಡಿವೆ ಎಂಬುದೇನೋ ನಿಜ. ಆದರೆ ಹೊರಗುತ್ತಿಗೆ ಮತ್ತು ಗುತ್ತಿಗೆ ಆಧಾರದ ನೌಕರಿಗಳು ಹೆಚ್ಚುತ್ತಿವೆ. ಔಪಚಾರಿಕ ಉದ್ಯೋಗಗಳಿಂದ ಅನೌಪಚಾರಿಕ ಉದ್ಯೋಗಗಳ ಕಡೆಗೆ ಚಲನೆ ಆರಂಭವಾಗಿದೆ. ಯಾಂತ್ರೀಕರಣ ಮತ್ತು ಆಧುನಿಕೀಕರಣ ಪ್ರಕ್ರಿಯೆಗಳು ಕಾರ್ಮಿಕರ ಸಂಖ್ಯೆಯನ್ನು ಸಾಕಷ್ಟು ಕುಗ್ಗಿಸಿವೆ. ಕೆಲಸವೇನೂ ಕಡಿಮೆಯಾಗಿಲ್ಲ, ಕೆಲಸಗಾರರಿದ್ದಾರೆ; ಆದರೆ ಅವರು ತೀರಾ ಹೀನಾಯ ಸ್ಥಿತಿಯಲ್ಲಿ, ತೀರಾ ಕಡಿಮೆ ಕೂಲಿ ಪಡೆದು, ಕೆಲವೇ ದಿನಗಳ ಕೆಲಸ ಗಳಿಸಿ ದುಡಿಯುತ್ತಿದ್ದಾರೆ. ಈ ಸನ್ನಿವೇಶದಲ್ಲಿ ಜನಗಣತಿಯ ಪ್ರಕಾರ ಕಾರ್ಮಿಕರ ಸಂಖ್ಯೆಯಲ್ಲಿ ಇಳಿಮುಖವೇನೂ ಕಂಡುಬಂದಿಲ್ಲ. ಕಾರ್ಮಿಕರ ಪ್ರಮಾಣ ಏರುತ್ತಲೇ ಇದೆ. ಆದರೆ ಔಪಚಾರಿಕ ಕ್ಷೇತ್ರಗಳ ಕಾರ್ಮಿಕರ ಸಂಖ್ಯೆಯಲ್ಲಿ ತೀವ್ರ ಕುಸಿತವಾಗಿರುವುದನ್ನು ಗಮನಿಸಬಹುದು. ಮೊದಲು ಈ ವಲಯದ ಕಾರ್ಮಿಕರಿಗೆ ಮುಷ್ಕರ ಹೂಡುವ ಶಕ್ತಿ ಅಧಿಕವಾಗಿತ್ತು. ಇವರು ಮುಷ್ಕರ ಹೂಡಿದಾಗ ಸರ್ಕಾರ ಎಚ್ಚರಗೊಳ್ಳುತ್ತಿತ್ತು. ಆದರೆ ಅಸಂಘಟಿತ ಕ್ಷೇತ್ರದ ಕಾರ್ಮಿಕರು ಮುಷ್ಕರನಿರತರಾದರೆ ಸರ್ಕಾರಗಳು ಆಲಿಸುವುದಿಲ್ಲ. ಈಗಾಗಲೇ ಬೀದಿಗೆ ಬಿದ್ದವರೆಂದು ಪರಿಗಣಿಸಲ್ಪಟ್ಟ ಜನರು ಬೀದಿಗೆ ಬಂದಾಗ ಸರ್ಕಾರಗಳು ಚಿಂತಿಸುವುದಿಲ್ಲ. ಅವರು ಮತಬ್ಯಾಂಕ್ ರಾಜಕಾರಣ ಮಾಡುವಾಗ ಮಾತ್ರವೇ ಇವರು ಕಣ್ಣಿಗೆ ಬೀಳುವುದು. ಒಂದು ವೇಳೆ ರೈಲ್ವೆ, ರಕ್ಷಣಾ ಕ್ಷೇತ್ರ, ಬ್ಯಾಂಕಿಂಗ್, ಕಲ್ಲಿದ್ದಲು ಅಥವಾ ತೈಲ ವಲಯ ಮುಷ್ಕರ ಹೂಡಿದ್ದೇ ಆದಲ್ಲಿ ಆರ್ಥಿಕ ವ್ಯವಸ್ಥೆಯ ಕೆಲವು ವಿಭಾಗಗಳು ಸಂಪೂರ್ಣ ಮುಚ್ಚಲ್ಪಡುತ್ತವೆ. ಆದ್ದರಿಂದ



**ಕಂಬನಿ**

ಚಲನಚಿತ್ರ ಮತ್ತು ರಂಗಭೂಮಿ ಕ್ಷೇತ್ರಗಳಲ್ಲಿ ಸ್ವಂತಿಕೆ, ಸೃಜನಶೀಲತೆ, ಬದ್ಧತೆ ಮತ್ತು ಪ್ರಗತಿಪರ ಚಿಂತನೆಗಳಿಂದಾಗಿ ಕಲಾರಸಿಕರಿಗೆ ಚಿರಪರಿಚಿತರಾಗಿದ್ದ ಬಹುಮುಖೀ ಪ್ರತಿಭೆಯ ಕಲಾವಿದ ಟಿ. ಎಸ್. ರಂಗ ೮.೪.೨೦೧೮ರಂದು ನಮ್ಮನ್ನಗಲಿದ್ದಾರೆ. ರಂಗ ೭೦–೮೦ರ ದಶಕಗಳಲ್ಲಿ ನಟ, ಚಿತ್ರಕಥಾ ಲೇಖಕ ಹಾಗೂ ನಿರ್ದೇಶಕರಾಗಿ ಅಸಾಧಾರಣ ಪ್ರತಿಭೆಗೆ ಹೆಸರಾದವರು. ಕನ್ನಡದಲ್ಲಿ ಹೊಸ ಅಲೆಯ ಸಿನಿಮಾಕ್ಕೆ ಹೊಸ ಅರ್ಥ ನೀಡಿದವರು. 'ಗ್ರಹಣ, 'ಗೀಜಗನ ಗೂಡು', 'ಸಾವಿತ್ರಿ', 'ಗಿಧ್', 'ಪಲ್ಲವಿ' ಚಲನಚಿತ್ರಗಳು ಮತ್ತು ಕೆಲವು ಸಾಕ್ಷಚಿತ್ರಗಳು ಹಾಗೂ ಬೆನಕ ರಂಗತಂಡದ ರಂಗಪ್ರಯೋಗಗಳು ಅವರ ಬಹುಮುಖಿ ಪ್ರತಿಭೆಗೆ ಸಾಕ್ಷಿಯಾಗಿವೆ. ದಿವಂಗತ ರಂಗ ಅವರಿಗೆ ನವಕರ್ನಾಟಕ ಪ್ರಕಾಶನ ಸಂಸ್ಥೆ ಮತ್ತು 'ಹೊಸತು' ಬಳಗದ ನಮನಗಳು.



ಸರ್ಕಾರ ಇವುಗಳಿಗೆ ಕಿವಿಗೊಡುತ್ತದೆ. ಇಷ್ಟೆಲ್ಲಾ ರೈತರ ಆತ್ಮಹತ್ಯೆಗಳಾದರೂ ಸರ್ಕಾರ ರೈತರ ಬಗ್ಗೆ ಚಿಂತಿಸಲಿಲ್ಲ. ಈಗ ಚುನಾವಣೆಗಳು ಸಮೀಪಿಸುತ್ತಿದ್ದಂತೆ ರೈತರ ಕುರಿತು ಒಂದಿಷ್ಟು ಮಾತುಗಳು ಕೇಳಿಬರಲಾರಂಭಿಸಿವೆ. ಯಾವುದೇ ರಾಜ್ಯದಲ್ಲಾಗಲೀ ಚುನಾವಣೆಗಳು ಸನಿಹದಲ್ಲಿರುವಾಗ ಕೆಲವು ಭಿಕ್ಷೆಗಳನ್ನು ನೀಡುವುದು ರೂಢಿಯಾಗಿಬಿಟ್ಟಿದೆ. ಸರ್ಕಾರಗಳು ಜನವಿರೋಧಿ ಕೃತ್ಯಗಳಿಗಿಳಿದಾಗ ಅವುಗಳನ್ನು ಬೆದರಿಸಿ ತಡೆಯೊಡ್ಡು ವಂತಹ ಕಾರ್ಯವನ್ನು ಕಾರ್ಮಿಕ ಚಳವಳಿ ಮಾಡಬೇಕು. ಈ ದಿಶೆಯಲ್ಲಿ ಕಾರ್ಮಿಕ ಸಂಘಟನೆಗಳ ಸಾಮರ್ಥ್ಯ ಕುಗ್ಗುತ್ತಿದೆ ಎಂಬುದನ್ನು ಒಪ್ಪುತ್ತೇನೆ. ಔಪಚಾರಿಕ ಕ್ಷೇತ್ರದ ಉದ್ಯೋಗಗಳು ಕಡಿಮೆಯಾಗಿವೆ, ಆದರೆ ಕಾರ್ಮಿಕರ ಸಂಖ್ಯೆ ಕಡಿತಗೊಂಡಿಲ್ಲ. ಈಗ ಅಸಂಘಟಿತ ಕ್ಷೇತ್ರಗಳಲ್ಲಿ ಕಾರ್ಮಿಕರ ಸಾಂದ್ರತೆ ಅಧಿಕವಾಗಿದೆ.

ಭಾರತದಲ್ಲಿ ಕಾರ್ಮಿಕ ಚಳವಳಿ ಕುಸಿಯುತ್ತಿಲ್ಲ, ಬೆಳೆಯುತ್ತಿದೆ. ಸರ್ಕಾರಗಳು ಎಷ್ಟೇ ದಬ್ಬಾಳಿಕೆ ನಡೆಸಿದರೂ, ದಮನಿಸಲೆತ್ನಿಸಿದರೂ ಕಾರ್ಮಿಕರು ತಮ್ಮ ಹಕ್ಕುಗಳನ್ನು ಗಟ್ಟಿಯಾಗಿ ಕೇಳುತ್ತಿದ್ದಾರೆ. ಇದರಿಂದಾಗಿ ಬಿಎಮ್‌ಎಸ್ ಇಕ್ಕಟ್ಟಿನಲ್ಲಿ ಸಿಲುಕಿದೆ. ೨೦೧೫ ಸೆಪ್ಟೆಂಬರ್ ೨ರಂದು ನಾವು ಮೊದಲ ಬಾರಿ ರಾಷ್ಟ್ರವ್ಯಾಪಿ ಮುಷ್ಕರಕ್ಕೆ ಕರೆ ಕೊಟ್ಟಾಗ ತಯಾರಿ ಸಂದರ್ಭದಲ್ಲಿ ಬಿಎಮ್‌ಎಸ್ ನಮ್ಮ ಜೊತೆಗಿದ್ದು ಮುಷ್ಕರಕ್ಕೆ ಕೇವಲ ಎರಡು ದಿನಗಳು ಬಾಕಿ ಉಳಿದಿವೆ ಎನ್ನುವಾಗ ಮುಷ್ಕರದಿಂದ ಹಿಂದೆ ಸರಿಯಿತು. ಆದರೆ ಕಾರ್ಖಾನೆಗಳ ಮಟ್ಟದಲ್ಲಿ ಮುಷ್ಕರ ಹಿಂಪಡೆಯಲು ಅದಕ್ಕೆ ಸಾಧ್ಯವಾಗಲಿಲ್ಲ. ಏಕೆಂದರೆ ಬಿಎಮ್‌ಎಸ್ ಅನುಯಾಯಿಗಳೂ ಸೇರಿದಂತೆ ಎಲ್ಲಾ ಕಾರ್ಮಿಕರು ಮುಷ್ಕರಕ್ಕೆ ಸಿದ್ಧರಾಗಿ ಭಾಗವಹಿಸಿಬಿಟ್ಟರು. ೨೦೧೬ರ ಮುಷ್ಕರದಲ್ಲಿ ಬಿಎಮ್‌ಎಸ್ ಭಾಗವಹಿಸಿರಲಿಲ್ಲ. ಆದರೂ ಮುಷ್ಕರನಿರತರ ವಿರುದ್ಧ ವಾಗ್ದಾಳಿ ಮಾಡುವುದಾಗಲೀ ಬೀದಿಗಿಳಿಯುವುದಾಗಲೀ ಮಾಡಲಾಗಲಿಲ್ಲ. ಕಾರ್ಮಿಕರು ಹೋರಾಡಲು ತಯಾರಿರುವುದರಿಂದ ಬಿಎಮ್‌ಎಸ್ ಸುಮ್ಮನಾಗ ಬೇಕಿದೆ. ಈಗ ಅವರು ನಮ್ಮೊಡನೆ ಕಾರ್ಮಿಕ ಸಂಘಟನೆಗಳ ಜಂಟಿ ಹೋರಾಟ ಸಮಿತಿಯಲ್ಲಿ ಇಲ್ಲ. ನಾವು ಕೈಗೆತ್ತಿಕೊಂಡ ವಿಷಯಗಳ ಕುರಿತು ಕ್ಷೀಣದನಿಯಲ್ಲಾದರೂ ಸರಿ ಅವರೂ ಮಾತನಾಡಲೇಬೇಕಾದ ಅನಿವಾರ್ಯತೆಯಲ್ಲಿ ಸಿಲುಕಿದ್ದಾರೆ. ಕಾರ್ಮಿಕ ವರ್ಗ ಸರ್ಕಾರದ ನೀತಿಗಳ ವಿರುದ್ಧ ಪ್ರತಿಭಟಿಸಲು ಅಣಿಯಾಗಿ ನಿಂತಿದೆ. ಸರ್ಕಾರ ತಮ್ಮ ಹಕ್ಕುಗಳನ್ನು ಕಸಿಯುತ್ತಿದೆ ಮತ್ತು ಸಾಮಾಜಿಕ ಭದ್ರತೆಯನ್ನು ನಾಶಗೊಳಿಸುತ್ತಿದೆಯೆಂಬುದು ಕಾರ್ಮಿಕರಿಗೆ ಅರ್ಥವಾಗಿದೆ. ಅಲ್ಲದೆ, ಕಾರ್ಮಿಕ ಕಾಯಿದೆಗಳನ್ನು ಸಂಹಿತೆಯೊಳಗೆ ತರುವುದರಿಂದ ಕಾರ್ಮಿಕ ಸಂಘಗಳ ಕಾರ್ಯ ನಿರ್ವಹಣೆ ದುಸ್ತರವಾಗಲಿದೆ. ಈ ಹಿನ್ನೆಲೆಯಲ್ಲಿ ಚಳವಳಿ ರೂಪಿಸ ಬೇಕೆಂಬುದು ಕಾರ್ಮಿಕರಿಗೆ ಅರಿವಾಗಿದೆ.

೨೦೧೫ರಲ್ಲಿ ಮೋದಿ ಅನುಸರಿಸುತ್ತಿರುವ ನೀತಿಗಳ ವಿರುದ್ಧ ಮುಷ್ಕರಕ್ಕೆ ಕರೆ ನೀಡಿದಾಗ ಅಧಿಕಾರಕ್ಕೆ ಬಂದ ಒಂದೇ ವರ್ಷದಲ್ಲಿ ಜನ ಹೇಗೆ ಪ್ರತಿಕ್ರಿಯೆ ನೀಡುವರೆಂದು ಕೆಲವರು ಸಿನಿಕತನದಿಂದಿದ್ದರು. ಆದರೆ ಕಾರ್ಮಿಕ ಸಂಘಟನೆಗಳು ಜನರಿಗೆ ತಮ್ಮ ಸಂಕಟಗಳನ್ನು ಹೊರಹಾಕಲು ಒಂದು ವೇದಿಕೆ ಸೃಷ್ಟಿಸಿಕೊಟ್ಟವು. ಪ್ರತಿ ಬಾರಿಯೂ ಸಾಮಾನ್ಯ ಜನ ಮುಷ್ಕರಕ್ಕೆ ಸ್ಪಂದಿಸಿದರು. ಏಕೆಂದರೆ ಬೆಲೆ ಏರಿಕೆ, ನಿರುದ್ಯೋಗ, ಇತ್ಯಾದಿಗಳು ಅವರನ್ನು ಕಾಡುತ್ತಲೇ ಇದ್ದವು. ರೈತರ ಜಮೀನನ್ನು ಕಸಿಯುವ ಭೂಸ್ವಾಧೀನ ಕಾಯಿದೆಗೆ ತಿದ್ದುಪಡಿಯಂತಹ ರೈತರ ಸಂಕಷ್ಟಗಳು ರೈತಸಮುದಾಯ ಮುಷ್ಕರವನ್ನು ಬೆಂಬಲಿಸುವಂತೆ ಮಾಡಿತು. ಮುಷ್ಕರವು ಜನಸಮುದಾಯವನ್ನು ಒಳಗೊಂಡಿತು. ೨೦೧೬ರಲ್ಲೂ ಬಿಎಮ್‌ಎಸ್ ಇಲ್ಲದೆಯೂ ದೇಶದಾದ್ಯಂತ ಮುಷ್ಕರ ಯಶಸ್ವಿಯಾಯಿತು. ಸಮಾವೇಶಗಳನ್ನು ಹಮ್ಮಿಕೊಂಡೆವು, ದೆಹಲಿ ಯಲ್ಲಿ ಮೂರು ದಿನಗಳ ಬೃಹತ್ ಧರಣಿ ಕಾರ್ಯಕ್ರಮ ಆಯೋಜಿಸಿದ್ದೆವು. ಕಾರ್ಮಿಕ ಚಳವಳಿ ಸಕ್ರಿಯವಾಗಿರುವುದಕ್ಕೆ ಇವೆಲ್ಲವೂ ಸಾಕ್ಷಿ. ಆದರೆ ಮಾಧ್ಯಮಗಳು ನಮ್ಮನ್ನು ನಿರ್ಲಕ್ಷಿಸಿವೆ. ಕಾರ್ಮಿಕ ಸಂಘಟನೆಗಳ ಹೋರಾಟಗಳ ಬಗ್ಗೆ ಪ್ರಚಾರವಾಗು ವುದಿಲ್ಲ. ಮಾಧ್ಯಮಗಳನ್ನು ಕೊಳ್ಳುವುದೇ ಸರ್ಕಾರಗಳ ತಂತ್ರ. ಶೇ. ೮೦ಕ್ಕೂ ಅಧಿಕ ಸುದ್ದಿ ಮಾಧ್ಯಮಗಳು ಅವರ ನಿಯಂತ್ರಣದಲ್ಲಿವೆ. ರೈತ-ಕಾರ್ಮಿಕರ ವಿಷಯಗಳು ಚರ್ಚೆಗೊಳಗಾಗದೆ ಅಮುಖ್ಯವಾದ ಸಂಗತಿಗಳು ಚರ್ಚೆಗೆ ಒಳಪಡುತ್ತವೆ. ಹಾಗಾದರೆ ಜನರನ್ನು ತಲುಪುವುದು ಹೇಗೆ? ಕಾರ್ಮಿಕ ವರ್ಗ ಇಲ್ಲಿ ಜನತೆಗಾಗಿ ಹೋರಾಡುತ್ತಿದೆ ಎಂದು ತಿಳಿಸುವುದು ಹೇಗೆ? ಇದು ನಮ್ಮ ಮುಂದಿರುವ ದೊಡ್ಡ ಸವಾಲಾಗಿದೆ. ಸಾಮಾಜಿಕ ಮಾಧ್ಯಮದ ಮೂಲಕ ಮತ್ತು ನೇರವಾಗಿ ಜನರ ಬಳಿಗೆ ಹೋಗುವುದರ ಮೂಲಕ ಈ ಸವಾಲನ್ನು ಎದುರಿಸಬೇಕಾಗಿದೆ.

**ಹೊಸತು :** ಜಾಗತೀಕರಣ ನೀತಿಯನ್ನು ಹಿಮ್ಮೆಟ್ಟಿಸಲು ಅಂತರರಾಷ್ಟ್ರೀಯ ಮಟ್ಟದಲ್ಲಿ ಕಾರ್ಮಿಕ ವರ್ಗದ ಪಾತ್ರವೇನು?

**ಅಮರ್‌ಜಿತ್ ಕೌರ್ :** ಅಕ್ಟೋಬರ್ ಕ್ರಾಂತಿಯ ಹಿನ್ನೆಲೆಯಲ್ಲಿ ಐಎಲ್‌ಒ ಸ್ಥಾಪನೆಯಾಯಿತು. ಸೋವಿಯೆತ್ ಒಕ್ಕೂಟದ ರಚನೆ ಜಗತ್ತಿನ ಬಂಡವಾಳಶಾಹಿ ಜಗತ್ತನ್ನು ಕಂಗೆಡಿಸಿತು. ಆಗ ಅವರು ಒಂದು ರಕ್ಷಣಾ ತಂತ್ರ ಹೂಡಿದರು. ವರ್ಗ ಸಂಘರ್ಷ ಉಂಟಾಗುವುದನ್ನು ತಪ್ಪಿಸಿ ಪರಸ್ಪರ ಎದುರು ಕುಳಿತು ಮಾತನಾಡಿ ಸಮಸ್ಯೆಗಳನ್ನು ಬಗೆಹರಿಸುವ ಉಪಾಯ ಮಾಡಿದರು. ಪ್ರಥಮ ಜಾಗತಿಕ ಮಹಾಯುದ್ಧದ ನಂತರ ರಚನೆಗೊಂಡಿದ್ದ ಲೀಗ್ ಆಫ್ ನೇಷನ್ಸ್‌ನ ಜೊತೆಯಲ್ಲಿ ಐಎಲ್‌ಒ ಕೂಡ ಸ್ಥಾಪನೆಯಾಯಿತು. ಐಎಲ್‌ಒ ಒಂದು ತ್ರಿಪಕ್ಷೀಯ ಸಂರಚನೆಯಾಗಿ ರೂಪುಗೊಂಡಿತು. ಲೀಗ್ ಆಫ್ ನೇಷನ್ಸ್ ಪತನವಾದರೂ ಐಎಲ್‌ಒ ಮುಂದುವರಿಯಿತು. ಎರಡನೇ ಜಾಗತಿಕ ಮಹಾಯುದ್ಧದ ತರುವಾಯ ವಿಶ್ವಸಂಸ್ಥೆ ಸ್ಥಾಪನೆಗೊಂಡು ಐಎಲ್‌ಒ ಅದರ ಭಾಗವಾಯಿತು. ೧೯೪೫ರಲ್ಲಿ ಡಬ್ಲ್ಯುಎಫ್‌ಟಿಯು ಎಂಬ ವರ್ಗಾಧಾರಿತ ರಾಜಕೀಯವುಳ್ಳ ಕಾರ್ಮಿಕ ಸಂಘಟನೆಯನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಹುಟ್ಟುಹಾಕಲಾಯಿತು. ಎಐಟಿಯುಸಿ ಕೂಡ ಇದರ ಭಾಗವಾಗಿದೆ. ಇದು ವಿಶ್ವ ಸಂಸ್ಥೆಯಲ್ಲಿ ಕಾರ್ಮಿಕರ ಹಕ್ಕುಗಳಿಗಾಗಿ ಸಾಕಷ್ಟು ಹೋರಾಡಿತು. ನಂತರದ ವರ್ಷಗಳಲ್ಲಿ ಐಸಿಎಫ್‌ಟಿಯು ಎಂಬ ಮತ್ತೊಂದು ಸಂಘಟನೆ ಜನ್ಮ ತಳೆಯಿತು. ಇದು ಸರ್ಕಾರಗಳ ಪರವಾಗಿದ್ದ ಸಂಘಟನೆಯಾದ್ದರಿಂದ ಇದಕ್ಕೆ ಐಎಲ್‌ಒನಿಂದ ಹೆಚ್ಚು ಮಾನ್ಯತೆ ಲಭ್ಯವಾಯಿತು. ಡಬ್ಲ್ಯುಎಫ್‌ಟಿಯು ಸಂಘಟನೆಯನ್ನೂ ಹೆಚ್ಚು ನಿರ್ಲಕ್ಷಿಸಲು ಸಾಧ್ಯವಾಗಲಿಲ್ಲ, ಏಕೆಂದರೆ ಆ ಕಾಲಘಟ್ಟದಲ್ಲಿ ಸಮಾಜವಾದಿ ರಾಷ್ಟ್ರಗಳ ಸಮೂಹ ಹೆಚ್ಚು ಕ್ರಿಯಾಶೀಲ ವಾಗಿತ್ತು. ಸೋವಿಯೆತ್ ಒಕ್ಕೂಟ ಪತನಗೊಂಡ ನಂತರ ಸಮಾಜವಾದಿ ರಾಷ್ಟ್ರಗಳ ಸಮೂಹವೂ ಅಂತರರಾಷ್ಟ್ರೀಯ ರಾಜಕೀಯ ಸನ್ನಿವೇಶದೊಳಗೆ ಬಲಹೀನ ವಾಯಿತು. ವಿಶ್ವ ಸಂಸ್ಥೆಯ ವ್ಯವಸ್ಥೆಯೊಳಗೆ ಡಬ್ಲ್ಯುಎಫ್‌ಟಿಯು ಸ್ಥಾನವೂ ಇಳಿಯಿತು. ಎಲ್ಲಿಯವರೆಗೆ ಕಾರ್ಮಿಕರಿಗೆ ತೊಂದರೆಯಾಗುವುದಿಲ್ಲವೋ ಅಲ್ಲಿಯವರೆಗೆ ನವ-ಉದಾರವಾದಿ ಆರ್ಥಿಕ ನೀತಿಗಳು ಮತ್ತು ಮಾರುಕಟ್ಟೆ ಆರ್ಥಿಕ ವ್ಯವಸ್ಥೆಯು ಒಳ್ಳೆಯದೆಂಬುದಾಗಿ ಈಗ ಐಟಿಯುಸಿ ಎಂದು ಮರುನಾಮಕರಣ ಗೊಂಡಿರುವ ಐಸಿಎಫ್‌ಟಿಯು ಪ್ರಚಾರ ಮಾಡುತ್ತಿತ್ತು.

ಆದರೆ ಮಾರುಕಟ್ಟೆ ಆರ್ಥಿಕ ವ್ಯವಸ್ಥೆಯು ಎಂದಿಗೂ ಕಾರ್ಮಿಕರ ಪರವಾಗಿರಲು ಸಾಧ್ಯವಿಲ್ಲ ಎಂದು ವರ್ಗಾಧಾರಿತ ಕಾರ್ಮಿಕ ಸಂಘಟನೆಗಳು ವಾದಿಸುತ್ತಿದ್ದವು. ಅದು ಕಾರ್ಮಿಕರಿಗೆ ಖಂಡಿತವಾಗಿ ತೊಂದರೆ ಉಂಟುಮಾಡುತ್ತದೆ ಎಂದು ನಾವು ಹೇಳುತ್ತಲೇ ಇದ್ದೇವೆ. ಅದು ನಮ್ಮ ವರ್ಗಾಧಾರಿತ ದೃಷ್ಟಿಕೋನ ವಿಶ್ವಬ್ಯಾಂಕ್, ಐಎಮ್‌ಎಫ್, ಐಎಲ್‌ಒ, ಡಬ್ಲ್ಯುಟಿಒ ಎಲ್ಲವೂ ಇದ್ದರೂ ಐಎಲ್‌ಒಗೊಂದು ನಿರ್ದಿಷ್ಟ ಮುಖ ಬೇಕಿತ್ತು. ಅದರೊಡನೆ ಎಲ್ಲಾ ಎಡಪಂಥೀಯ ಕಾರ್ಮಿಕ ಸಂಘಟನೆಗಳೂ ತೊಡಗಿ ಕೊಂಡಿವೆ. ಆದ್ದರಿಂದ ಐಎಲ್‌ಒ ಸಮತೋಲನವನ್ನು ಕಾಯ್ದುಕೊಳ್ಳಬೇಕಾಗಿ ಬಂತು. ಆದರೆ ನವ-ಉದಾರವಾದಿ ಆರ್ಥಿಕ ನೀತಿಗಳ ಪರವಾಗಿದ್ದ ಕಾರ್ಮಿಕ ಸಂಘಟನೆಗಳು ತಮ್ಮ ಕಾರ್ಯಸೂಚಿಯನ್ನು ಜಾರಿಗೊಳಿಸಲು ಹೆಣಗಿದವು. ಜಗತ್ತಿನಾದ್ಯಂತ ತಮ್ಮ ನೀತಿಗಳು ವಿಫಲವಾಗುತ್ತಿದ್ದಂತೆ ಐಎಮ್‌ಎಫ್ ಮತ್ತು ವಿಶ್ವಬ್ಯಾಂಕ್‌ಗಳೇ ಉದ್ಯೋಗರಹಿತ ಬೆಳವಣಿಗೆಯ ವರದಿ ನೀಡಿವೆ. ಅವುಗಳೇ ನಿರುದ್ಯೋಗ ಹೆಚ್ಚುತ್ತಿದೆ ಎಂದು ಹೇಳತೊಡಗಿವೆ. ಅಲ್ಲದೆ, ಅನೌಪಚಾರಿಕ ಕ್ಷೇತ್ರ

ವ್ಯಾಪಿಸುತ್ತಿದೆ ಎಂದೂ ಹೇಳಿವೆ. ಯಾರು ಔಪಚಾರಿಕ ಕ್ಷೇತ್ರಗಳನ್ನು ಅನೌಪಚಾರಿಕ ಕ್ಷೇತ್ರಗಳನ್ನಾಗಿಸಿ ಎನ್ನುತ್ತಿದ್ದರೋ ಅವರೇ ಇಂದು ಅದರ ತದ್ವಿರುದ್ಧವಾಗಿ ಮಾತನಾಡುತ್ತಿದ್ದಾರೆ. "ಅನೌಪಚಾರಿಕ ಕ್ಷೇತ್ರಗಳನ್ನು ಔಪಚಾರಿಕ ಕ್ಷೇತ್ರಗಳನ್ನಾಗಿಸಿ" ಎಂಬುದು ಐಎಲ್‌ಒದ ಹೊಸ ಘೋಷಣೆ. ಏಕೆ ಹೀಗೆ ಎಂದು ಪ್ರಶ್ನಿಸಿದರೆ, ಇದೇ ವಾಸ್ತವ ಸಂಗತಿಯಾಗಿದೆ. ಈ ಸತ್ಯದ ಕಾರಣ ಇಂದು ಅಮೆರಿಕ, ಕೆನಡಾ, ಯುರೋಪ್ ದೇಶಗಳು, ಏಷ್ಯಾದ ರಾಷ್ಟ್ರಗಳು, ಆಫ್ರಿಕಾ, ಗ್ರೀಸ್, ಆಸ್ಟ್ರಿಯಾ, ಜರ್ಮನಿ, ಫ್ರಾನ್ಸ್ ಹೀಗೆ ಹಲವಾರು ದೇಶಗಳಲ್ಲಿ ಕಾರ್ಮಿಕ ಚಳವಳಿ ಪ್ರಬಲವಾಗಿ ಬೆಳೆಯುತ್ತಿದೆ. ಈ ವ್ಯವಸ್ಥೆ ನಿರೀಕ್ಷಿತ ಉದ್ಯೋಗ ಮತ್ತು ಬೆಳವಣಿಗೆಯನ್ನು ನೀಡಲು ವಿಫಲವಾಗಿದೆ ಎಂಬುದು ಈಗ ಒಪ್ಪಿತ ಸತ್ಯ.

ಜಗತ್ತಿನಲ್ಲಿ ಎರಡು ಪ್ರಕ್ರಿಯೆಗಳು ಜರುಗುತ್ತಿವೆ. ನವ-ಉದಾರವಾದಿ ಆರ್ಥಿಕ ನೀತಿಗಳ ವೈಫಲ್ಯ ಮತ್ತು ಕೆಲವು ರಾಷ್ಟ್ರಗಳಲ್ಲಿ ಬಲಪಂಥೀಯ ಶಕ್ತಿಗಳ ಮುನ್ನಡೆ. ಟ್ರಂಪ್‌ನ ಜಯ ಮತ್ತು ಯುರೋಪ್‌ನಲ್ಲೂ ಕೆಲವೆಡೆ ಬಲಪಂಥೀಯರ ವಿಜಯ ಗಮನಿಸಬೇಕಾದ ಅಂಶ. ಕಾರ್ಮಿಕ ಸಂಘಟನೆಗಳ ಜೊತೆ ಇತರ ಜನವಿಭಾಗಗಳೂ ಸೇರಿ ಬಲಪಂಥೀಯರನ್ನು ಹಿಮ್ಮೆಟ್ಟಿಸುವ ಕಾರ್ಯ ಸಾಗಿದೆ. ನಾವು ಐಎಲ್‌ಒ ಸಭೆಗಳಲ್ಲಿ ನವ-ಉದಾರವಾದಿ ಆರ್ಥಿಕ ನೀತಿಗಳ ವಿರುದ್ಧ ಡಬ್ಲ್ಯುಎಫ್‌ಟಿಯು ಮತ್ತು ಐಸಿಎಫ್‌ಟಿಯು ಸಂಘಟನೆಗಳು ಒಟ್ಟಾಗಿ ಧ್ವನಿಯೆತ್ತುವಂತೆ ಒತ್ತಾಯಿಸುತ್ತಿದ್ದೇವೆ. ಅಲ್ಲೇನು ಬದಲಾವಣೆಯಾಗುತ್ತದೆಂಬುದಕ್ಕೆ ಕಾಲವೇ ಉತ್ತರಿಸುತ್ತದೆ.

**ಹೊಸತು :** ಇಂದು ದೇಶದೊಳಗೆ ಬೆಳೆಯುತ್ತಿರುವ ಕೋಮುವಾದ ಮತ್ತು ಫ್ಯಾಸಿಸಮ್ ಹಿಮ್ಮೆಟ್ಟಿಸುವಲ್ಲಿ ಕಾರ್ಮಿಕ ಚಳವಳಿಯ ಪಾತ್ರವೇನು?

**ಅಮರ್‌ಜಿತ್ ಕೌರ್ :** ಈಗ ದೇಶದಲ್ಲಿ ಫ್ಯಾಸಿಸಮ್ ಬಂದಿದೆ ಎಂದು ನಾನು ಹೇಳುತ್ತಿಲ್ಲ. ಆದರೆ ಫ್ಯಾಸಿಸ್ಟ್ ಚಿಂತನೆ ಹಾಗೂ ಶಕ್ತಿಗಳು ನಮ್ಮ ದೇಶದ ಎಲ್ಲಾ ರಂಗಗಳಲ್ಲೂ ನುಸುಳಿವೆ ಎಂಬುದು ನಿಜ. ಫ್ಯಾಸಿಸಮ್‌ನ ಎಲ್ಲಾ ಲಕ್ಷಣಗಳೂ ಈಗ ಗೋಚರವಾಗುತ್ತಿವೆ. ಇದನ್ನು ಹೀಗೇ ಬೆಳೆಯಲು ಬಿಟ್ಟರೆ ಪೂರ್ಣಪ್ರಮಾಣದಲ್ಲಿ ಫ್ಯಾಸಿಸಮ್ ನಮ್ಮ ದೇಶವನ್ನು ಆವರಿಸಿಕೊಳ್ಳುವುದು ಸುಳ್ಳಲ್ಲ. ಕೋಮುವಾದದ ವಿರುದ್ಧ ಧ್ವನಿ ಎತ್ತುವವರನ್ನು ಹತ್ಯೆ ಮಾಡಲಾಗುತ್ತಿದೆ. ಸಿಪಿಐ ನಾಯಕ ಕಾಮ್ರೇಡ್ ಪಾನ್ಸರೆ, ವಿಚಾರವಾದಿ ದಾಭೋಲ್ಕರ್, ಸಂಶೋಧಕ ಡಾ॥ ಎಂ. ಎಂ. ಕಲಬುರ್ಗಿ, ಪತ್ರಕರ್ತೆ ಗೌರಿ ಲಂಕೇಶ್, ಹೀಗೆ ಮಾತನಾಡುವ ವ್ಯಕ್ತಿಗಳನ್ನು ನಿರ್ಭಿಡೆಯಿಂದ ಹಾಡಹಗಲೇ ಕೊಲೆಗೈಯಲಾಗುತ್ತಿದೆ. ಭಾರತ ದೇಶದ ಪರಿಕಲ್ಪನೆಯನ್ನು ಬದಲಿಸಲು ಸಂಚು ಹೂಡಲಾಗುತ್ತಿದೆ. ಸಂಘ ಪರಿವಾರದಿಂದ ಸಂವಿಧಾನ ಬದಲಿಸುವ ಹುನ್ನಾರದ ಮಾತುಗಳೂ ಕೇಳಿಬರುತ್ತಿದೆ. ದೇಶದ ವೈವಿಧ್ಯತೆ, ಬಹುಸಂಸ್ಕೃತಿಯ ಮೇಲೆ ದಾಳಿ ಮಾಡಲಾಗುತ್ತಿದೆ. ಸರ್ಕಾರವು ಜನರ ಆಹಾರದ ಹಕ್ಕಿನ ಮೇಲೆ ಅತಿಕ್ರಮಣ ನಡೆಸಿದೆ. ಸಂಘ ಪರಿವಾರ ಗೋರಕ್ಷಣೆಯ ನೆಪದಲ್ಲಿ ಅಮಾಯಕರನ್ನು ಕೊಲೆಗೈಯುತ್ತಿದೆ. ಉದ್ಯೋಗದ ಕುರಿತು ಚರ್ಚಿಸುವುದರ ಬದಲಿಗೆ ಜನರ ಉಡುಪಿನ ಬಗ್ಗೆ, ಆಹಾರ ಸಂಸ್ಕೃತಿಯ ಬಗ್ಗೆ, ಸಿನಿಮಾದಲ್ಲಿನ ಪಾತ್ರದ ಬಗ್ಗೆ ಅನಗತ್ಯ ಚರ್ಚೆಗಳನ್ನು ಹುಟ್ಟುಹಾಕಲಾಗುತ್ತಿದೆ. ಕರ್ನಾಟಕದಲ್ಲೂ ಬಿಜೆಪಿ ಮತೀಯ ರಾಜಕಾರಣಕ್ಕೆ ಕೈಹಾಕಿದೆ.

ಇಂತಹ ಸಂದರ್ಭದಲ್ಲಿ ನಾವು ಕಾರ್ಮಿಕ ಸಂಘಗಳು ಕೇವಲ ತಮ್ಮ ಆರ್ಥಿಕ ಹಿತಾಸಕ್ತಿಗಳನ್ನು ಪರಿಗಣಿಸದೆ ಮಹತ್ತರವಾದ ಸಾಮಾಜಿಕ ಜವಾಬ್ದಾರಿ ಮೆರೆಯ ಬೇಕಿದೆ. ಹಾಗೆಂದು ಆರ್ಥಿಕ ಬೇಡಿಕೆಗಳನ್ನು ಅಲಕ್ಷಿಸಬೇಕೆಂದಲ್ಲ. ಅದೂ ಸಹ ಮುಖ್ಯವೇ. ಆದರೆ ಇಂದು ಮೋದಿ-ಟ್ರಂಪ್ ಕೂಟ ಎಲ್ಲೆಡೆ ರಾರಾಜಿಸುತ್ತಿದೆ. ಕೇಂದ್ರ ಸರ್ಕಾರವನ್ನು ಆರ್‌ಎಸ್‌ಎಸ್ ನಿರ್ದೇಶಿಸುತ್ತಿದೆ. ಅದರ ಚಿಂತನೆಗಳು ಹಿಟ್ಲರ್‌ನ ಚಿಂತನೆಗಳೇ ಆಗಿವೆ. ಕೋಮು ವಿಷ ಬಿತ್ತಿ ಅಧಿಕಾರಕ್ಕೆ ಬರುವುದು ಅದರ ತಂತ್ರಗಾರಿಕೆಯ ಭಾಗ. ದೇಶದ ವಿಮೋಚನಾ ಚಳವಳಿಯ ಸಂದರ್ಭದಲ್ಲಿ ಬ್ರಿಟಿಷರ ಜೊತೆ ಕೈಜೋಡಿಸಿದ ಆರ್‌ಎಸ್‌ಎಸ್ ಈಗ ದೇಶಪ್ರೇಮದ ಬಗ್ಗೆ ಮಾತನಾಡುವುದು ಹಾಸ್ಯಾಸ್ಪದ. ಆದ್ದರಿಂದ ಕಾರ್ಮಿಕ ಸಂಘಟನೆಗಳು ಮತೀಯವಾದದ ಮತ್ತು ಫ್ಯಾಸಿಸಮ್‌ನ ವಿರುದ್ಧ ಇನ್ನೂ ಗಟ್ಟಿಧ್ವನಿಯಲ್ಲಿ ಮಾತನಾಡಬೇಕಿದೆ. ಕಾರ್ಮಿಕರಲ್ಲಿ ಇವುಗಳ ಅಪಾಯದ ವಿರುದ್ಧ ಜಾಗೃತಿ ಮೂಡಿಸಬೇಕಿದೆ, ಎಚ್ಚರ ವಹಿಸಬೇಕಿದೆ. ದೇಶ ಉಳಿಸುವ ದಿಶೆಯಲ್ಲಿ ನಮ್ಮ ಪಾತ್ರ ಅತ್ಯಂತ ಮಹತ್ವದ್ದಾಗಿದೆ.

**ಎ. ಜ್ಯೋತಿ**
ಎಸ್-೩, ನಂ. ೩೭, ೧೬ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ
ವಿಜಯನಗರ, ಬೆಂಗಳೂರು – ೫೬೦ ೦೪೦




**ಬಾ**ನು ಬುವಿ ಪಾತಾಳಗಳ ದೇವದಾನವ ಮಾನವಾಮಾನವರ
ಅಂತರ ಬೆಂತರ ಒಳಾಂತರಗಳಾಂತರಿಕ ಬೆಡಗು ಬಿನ್ನಾಣದ ಬೇತಾಳಗಳ
ಬಯಲಿಗೆಳೆವ ಕಾಯಕ ಹಿಡಿದ ನಿರಂತರ ಕ್ರಾಂತಿಕಾರಿ ನಿರ್ವಿಕಾರಿ;

ಪಲ್ಲಕ್ಕಿ ತೇರು ಅಂಬಾರಿ ಪುಷ್ಪಕ ಪ್ರಮೋದಗಳ ಮೆರವಣಿಗೆಗೆ
ಲೀಲಾವತಾರ ಮಧುರಾಲಾಪ ಶಿಷ್ಟಾಚಾರದ ಜರ್ಬು ದೌಲತ್ತುಗಳಿಗೆ
ಮೊನಚು ಮಾತಿನ ವ್ಯಂಗ್ಯ ನಗೆಯ ಕಪ್ಪು-ಕೆಂಪು ಟಿಪ್ಪಣದ ಸುವಿಚಾರಿ;

ಹಣೆಬರಹ ವಿಧಿಲಿಖಿತ ಕರ್ಮಫಲವೆಂಬ ಪಾತಕಗಳ ಘಾತಕ್ಕೆ
ಪಂಚಾಂಗ ಚೀಟು ಮಂಡಲ ಜಾತಕಾಚಾರ್ಯರ ಮೌಢ್ಯ ಸನ್ನಿಪಾತಕ್ಕೆ
ಊರಂಚಿನ ಹೊಲದ ಬೇರಕೆಸೊಪ್ಪಿನ ಕಷಾಯ ಕುದಿಸಿದ ಕರ್ಮಚಾರಿ;

ದಫ್ತರದ ಸರ್ಕಾರದ ಕಟ್ಟಳೆ ಕಾನೂನು ಬಿಟ್ಟ ಕೋಟಲೆಗಳ
ಬೆದರುಗೊಂಬೆಗಳ ನೆಟ್ಟು ಕಟಾವುಗಳ್ಳತನ ಗುಮಾಸ್ತ ಚಿತ್ರಗುಪ್ತರುಗಳ
ಸಂಚು ಹೊಂಚುಗಳ ಪರೆ ಸೆಳೆದು ಬೆತ್ತಲುಗೊಳಿಸಿದ ಜನತಾ ದಂಡಾಧಿಕಾರಿ;

ಗುಪ್ತ ನೆಲೆಗಳಲಿ ಕಾಪಿಟ್ಟ ಆತ್ಮಬೆಲೆಗಳ ಅಭಿಮಾನಗಳ ಬಟಾ ಬೀದಿಗೆಳೆದ
ಸಾಲಶೂಲ ಬಲೆನೇಣುಗಳ ಕೊಟ್ಟ ಬ್ಯಾಂಕು ಲೇವಾದೇವಿ ಸಂಘಗಳ
ಸಲಿಕೆ ಸೆಳಕು ಥಳಕುಗಳಿಗೆ ಚಳವಳಿಯ ಚಾಟಿ ಬೀಸಿದ ಚಮತ್ಕಾರಿ;

ಸದನದ ಕದನಗಳ ಪುಂಡಾಟಕೆ ಮಾತಿನ ಮಾರಿಹಬ್ಬ ಮಠದ ಮನೆ
ಅಂಕಿ ಸಂಖ್ಯೆ ವಿಚಾರ ಸದಾಚಾರ ಅನಿವಾರ್ಯಗಳ ಕರ್ತವ್ಯ ಬೋಧನೆ
ದಶಕಗಳ ದುರಸ್ತಿಗೆ ನಿಂತ ಸ್ಪ್ಯಾನರುಗೈಯ ತಾಂತ್ರಿಕನೆ ಕಾರ್ಮಿಕನೆ –

ಅನವರತ ನೀನಮ್ಮಂದಿರ ಪುಟ್ಟಯ್ಯ,
ಒಡಹುಟ್ಟಿದವರ ಒಡಗೂಡಿದವರ ಅಣ್ಣಯ್ಯ,
ಬೇಡಿ ಕಾಡಿದವರ ಸುಲಿದು ಸೂರೆಗೊಂಡವರ ಅಪ್ಪಣ್ಣಯ್ಯ;

ನೀನಾದೆ ನಾದಿ ನಾದಿ ಸಾಧನೆಗೈವ ಗರಡಿಮನೆ ಕೇಳಣ್ಣಯ್ಯ,
ಹಸಿದ ಮನಸುಗಳ ಕ್ರಾಂತಿ ಕನಸುಗಳ ಬೆಳಕಿಗೆ ದೊಡ್ಡಣ್ಣಯ್ಯ,
ಮಾತಿನ ಮೋಡಿಕಾರ, ಜೋಳಿಗೆ ತುಂಬುವ ಕುಸುರಿಗಾರ
ಅಜರಾಮರ ಪುಟ್ಟಣ್ಣಯ್ಯ !

**ಡಾ॥ ಬೋರೇಗೌಡ ಚಿಕ್ಕಮರಳಿ**
ನಿವೃತ್ತ ಕನ್ನಡ ಪ್ರಾಧ್ಯಾಪಕ, ನಂ. ೫೮/೭,
'ಸಿದ್ಧಿ', ಶಾಂತಿನಗರ ೨ನೇ ಹಂತ
ಪಾಂಡವಪುರ – ೫೭೧ ೪೩೪

# ಗರ್ತ



"ನೀನು ಎಗ್ಗನೇ? ಎಬಡನೇ? ಬಿಎಸ್ಸಿ ಪರೀಕ್ಷೆ ಬರೆದು ನಮ್ಮ ಜಿಲ್ಲೆಗೆ ಪ್ರಥಮ ಸ್ಥಾನದಲ್ಲಿ ತೇರ್ಗಡೆ ಆಗಿದ್ದೀಯ! ಮೈ ಬಗ್ಗಿಸಿ ದುಡಿಯುವ ವಯಸ್ಸು ನಿನ್ನದು. ಅಲಸತನದಿಂದ ಕಾಲಹರಣ ಮಾಡುತ್ತಿದ್ದೀಯ. ನಿನ್ನನ್ನು ನೀನೆ ಅರಮಗ ಅಂದುಕೊಂಡಿದ್ದೀಯ? ಅಥವಾ ನಿಮ್ಮ ತಾತ ಇಡುಗಂಟು ಇಟ್ಟಿದ್ದಾನೆಯೇ?"

ಗೆಜ್ಜೇನಹಳ್ಳಿ ಜನರ ಜನೋಕ್ತಿಯನ್ನು ವಿಜಯ್ ಉಪೇಕ್ಷೆ ಮಾಡುತ್ತ, ಅನಾಯಾಸದಿಂದ ಬಾಳುತ್ತಿದ್ದ. ಇಪ್ಪತ್ತು ವರ್ಷ ವಯಸ್ಸಿನ ವಿಜಯ್‌ಗೆ ತಂದೆ, ತಾಯಿ ಇರಲಿಲ್ಲ. ಅಪರ ವಯಸ್ಸಿನ ತಾತನ ಆಶ್ರಯದಲ್ಲಿ ಬೆಳೆಯುತ್ತಿದ್ದ. ತಾತನ ದುಡಿಮೆಯಲ್ಲಿ ತಾನು ಅವಲಂಬನೆ ಆಗಿ ಜೀವನದಲ್ಲಿ ಈಷದಪಿ ಜವಾಬ್ದಾರಿ ಇರಲಿಲ್ಲ. ವಿಜಯ್ ತಾತ ಗರೀಬ ತಮಗಿದ್ದ ಎರಡು ಎಕರೆ ಕೃಷಿಭೂಮಿಯಲ್ಲಿ ಸಾಧ್ಯವಾದಷ್ಟು ವ್ಯವಸಾಯ ಮಾಡಿ ಬದುಕುತ್ತಿದ್ದರು.

ಗೆಜ್ಜೇನಹಳ್ಳಿ ಪಕ್ಕದಲ್ಲೇ ದಟ್ಟ ವಿಪಿನಬಿದ್ದ ಕಾರಣ ರೈತರ ಹೊಲಗದ್ದೆಗಳಲ್ಲಿ ಬೆಳೆದಿದ್ದ ಬೆಳೆಗಳ ಮೇಲೆ ಕಾಡುಮೃಗಗಳ ದಾಳಿ ಇತ್ತು. ಬೆಳೆಗಳ ರಕ್ಷಣೆಗಾಗಿ ವಿಜಯ್‌ನ ತಾತ; ನಟ್ಟಿರುಳು ಜಮೀನಿಗೆ ಹೋಗಿ ಕಾವಳದಲ್ಲಿ ಬೆಳೆಗಳ ಕಾಪು ಮಾಡುತ್ತಿದ್ದು ಬೆಳೆಗಳನ್ನು ರಕ್ಷಿಸುತ್ತಿದ್ದರು. ವಿಜಯ್ ನಿರರ್ಥಕವಾಗಿ ದಿನ ಕಳೆಯುತ್ತಿದ್ದ.

"ಹಣ್ಣಾದ ವಯಸ್ಸಿನಲ್ಲೂ ನಾನು ದುಡಿದು ನಿನ್ನನ್ನು ಸಾಕುವಂಥ ಪರಿಸ್ಥಿತಿ ಬಂದಿದೆ. ದೇವರು ನಿನಗೆ ಯಾವ ಕಾಲಕ್ಕೆ ಬುದ್ಧಿಕೊಡುತ್ತಾನೋ; ನಾನರಿಯೆ!"

ತಾತನ ಬೈಯ್ಗಳು ಕಿವಿಗೆ ಹಾಕಿಕೊಳ್ಳದೆ ವಿಜಯ್ ಸುಮ್ಮನಿರುತ್ತಿದ್ದ.

ರಾಜ್ಯದ ಮುಖ್ಯಮಂತ್ರಿಗಳ ತವರೂರು ಗೆಜ್ಜೇನಹಳ್ಳಿ. ರೈತರು ಮಾಡುವ ಕೃಷಿಯಿಂದ ಸದಾ ಹಸಿರಾಗಿರುತ್ತಿತ್ತು. ಆದರೆ ಗ್ರೀಷ್ಮ ಕಾಲದ ಕಾರಣ ಬಿಸಿಲು ಹೆಚ್ಚಾಗಿ ಗೆಜ್ಜೇನಹಳ್ಳಿಗೆ ದುರ್ಭಿಕ್ಷ ಆವರಿಸುವ ಪರಿಸ್ಥಿತಿ ಬಂದಿತು. ಕಾಡಿನ ಪಕ್ಕದಲ್ಲೇ ಹರಿಯುತ್ತಿದ್ದ ಚಕ್ರತೀರ್ಥ ನದಿ ನೀರು; ಜನ, ಜಾನುವಾರುಗಳ ನೀರಡಿಕೆಗೆ ಆಧಾರವಾಗಿತ್ತು.

ರಾಜ್ಯದ ಮುಖ್ಯಮಂತ್ರಿಗಳು ಬರಪೀಡಿತ ಹಳ್ಳಿಗಳಿಗೆ ಪ್ರವಾಸ ಕೈಗೊಂಡಿದ್ದರು. ಮೊದಲಿಗೆ ತಮ್ಮ ತವರೂರು ಗೆಜ್ಜೇನಹಳ್ಳಿಗೆ ಭೇಟಿಯಾಗಿ ರೈತರ ಕಷ್ಟಕ್ಕೆ ಸ್ಪಂದಿಸುವ ಉದ್ದೇಶದಿಂದ ಗೆಜ್ಜೇನಹಳ್ಳಿಗೆ ಬರುವ ಸುದ್ದಿ ಹಳ್ಳಿಯಲ್ಲಿ ಗಾಳಿಯಂತೆ ಹಬ್ಬಿತು. ಗೆಜ್ಜೇನಹಳ್ಳಿ ಸ್ವಚ್ಛ ಮಾಡಿ ಮುಖ್ಯದ್ವಾರಕ್ಕೆ ಮಾವಿನ ತೋರಣ, ಬಾಳೆ ಕಂದು ಕಟ್ಟಲಾಯಿತು.

ನಿರೀಕ್ಷೆಯಂತೆ ಮುಖ್ಯಮಂತ್ರಿಗಳು ಮೊದಲು ಗೆಜ್ಜೇನಹಳ್ಳಿಗೆ ಬಂದರು. ಹಳ್ಳಿಯ ಅಭಿವೃದ್ಧಿ, ಹೆಣ್ಣುಮಕ್ಕಳ ಹೆಚ್ಚಿನ ವಿದ್ಯಾಭ್ಯಾಸ, ಯುವಕರಿಗೆ ಉದ್ಯೋಗದ ಭರವಸೆ ಕೊಟ್ಟು, ನಷ್ಟವಾದ ರೈತರಿಗೆ ಬೇಗ ಧನಸಹಾಯ ಮಾಡುವುದಾಗಿ ಭಾಷಣದಲ್ಲಿ ಹೇಳಿದರು.

ಬಾಲ್ಯ ಸ್ನೇಹಿತರೊಡನೆ ಮುದ್ದೆ, ಸೊಪ್ಪು ಸಾಂಬರು ಮಧ್ಯಾಹ್ನದ ಊಟ ಮಾಡಿ, ತಾವು ಆಡಿ ಬೆಳೆದ ಗಲ್ಲಿ, ಹುಟ್ಟಿ ಬೆಳೆದ ಮನೆ ನೋಡುತ್ತ ಪಾದಾತಿಯಲ್ಲಿ ಹಳ್ಳಿ ಸುತ್ತಾಡಿದರು. ಚಕ್ರತೀರ್ಥ ನದಿಯಲ್ಲಿ ತೆಪ್ಪದಲ್ಲಿ ಕುಳಿತು ಪ್ರಯಾಣಿಸುವ ಅಭಿಲಾಷೆ ಅವರಲ್ಲಿ ಉಂಟಾಗಿ ಅಂಬಿಗನ ಸಹಾಯವಿಲ್ಲದೆ ತಾವೊಬ್ಬರೆ ತೆಪ್ಪದಲ್ಲಿ ಕುಳಿತು ನದಿಯಲ್ಲಿ ಪ್ರಯಾಣಿಸತೊಡಗಿದರು.

ದಡದಿಂದ ನದಿಯಲ್ಲಿ ತೆಪ್ಪ ಐನೂರು ಮೀಟರ್ ಮುಂದೆ ಹೋಗಿರಬಹುದು. ಅನಿರೀಕ್ಷಿತವಾಗಿ ಮುಖ್ಯಮಂತ್ರಿಗಳು ಕುಳಿತಿದ್ದ ತೆಪ್ಪ ಬರ್ರನೆ ಚಕ್ರದಂತೆ ಸುತ್ತಲಾರಂಭಿಸಿತು ! ಚಕ್ರತೀರ್ಥ ನದಿಯ ಮಡುವಿನಲ್ಲಿ ಸುತ್ತುತ್ತಿದ್ದ ಗರ್ತ (ಸುಳಿ)ಕ್ಕೆ ಮುಖ್ಯಮಂತ್ರಿ ಕುಳಿತಿದ್ದ ತೆಪ್ಪ ಸಿಲುಕಿತ್ತು!!

ಚಕ್ರತೀರ್ಥ ನದಿಯಲ್ಲಿ ಕ್ಷುದ್ಬಾಧೆಯಿಂದ ಜೀವಿಸುತ್ತಿರುವ ನರಭಕ್ಷಕ ಮೊಸಳೆಗಳಿದ್ದವು! ಚಕ್ರತೀರ್ಥ ನದಿಯಲ್ಲಿ ಮೊಸಳೆಗಳು ಹಸಿವಿನಿಂದ ಬಾಳುತ್ತಿರುವ ತಥ್ಯ ಗೆಜ್ಜೇನಹಳ್ಳಿ ನಾಗರಿಕರಿಗೂ ಗೊತ್ತು! ಮುಖ್ಯಮಂತ್ರಿಯವರಿಗೆ ಗರ್ತ ಹಾಗೂ ಮೊಸಳೆಗಳ ಬಗ್ಗೆ ಜನ ಮೊದಲೇ ಎಚ್ಚರಿಸಿದ್ದರು. ಹಳ್ಳಿ ಮುಖಂಡರು ನದಿಯಲ್ಲಿ ತೆಪ್ಪದ ಮೇಲೆ ಒಬ್ಬರೇ ಪ್ರಯಾಣಿಸಬಾರದು ಎಂದು ಎಚ್ಚರಿಸಿದ್ದರು. ಕೆಟ್ಟ ಘಳಿಗೆ ಅವರೆಲ್ಲರ ಎಚ್ಚರ ತಿರಸ್ಕರಿಸಿರಬಹುದು.

ಮೊಸಳೆಗಳ ಭಯದಿಂದ ಈಜುಪಟರು, ಪೊಲೀಸ್ ಸಿಬ್ಬಂದಿ; ಮುಖ್ಯಮಂತ್ರಿಗೆ ರಕ್ಷಣೆಗೆ ಕಾಲ ವಿಳಂಬ ಮಾಡುತ್ತಿದ್ದಾರೆ. ಜನಗಳ ಮಧ್ಯ ನಿಂತಿದ್ದ ವಿಜಯ್ ತಕ್ಷಣ ನದಿಗೆ ಹಾರಿದ!

ಗರ್ತಕ್ಕೆ ಸಿಲುಕಿರುವ ತೆಪ್ಪ ಪಲ್ಟಿಯಾಗಿ ಮುಖ್ಯಮಂತ್ರಿಗಳು ನದಿಯಲ್ಲಿ ಮುಳುಗಬೇಕು ಅಷ್ಟರಲ್ಲಿ ವಿಜಯ್ ಆಶ್ಚರ್ಯ ರೀತಿಯಲ್ಲಿ ಗರ್ತದಿಂದ ಮುಖ್ಯಮಂತ್ರಿ ಅವರನ್ನು ರಕ್ಷಿಸಿ ಸುರಕ್ಷಿತವಾಗಿ ದಡ ಮುಟ್ಟಿಸಿದ !

ಅದ್ಭುತ ಕರತಾಡನದಿಂದ ವಿಜಯ್ ನಾಚಿ ತಲೆತಗ್ಗಿಸಿ ನಿಂತನು. ಅವನ ಬೆನ್ನು ತಟ್ಟಿದರು ಮುಖ್ಯಮಂತ್ರಿ. ಜನರು, ವಿಜಯ್‌ನನ್ನು ಮುಖ್ಯಮಂತ್ರಿ ಅವರಿಗೆ ಪರಿಚಯಿಸಿದರು.

ಸುಂದರ, ದೃಢಕಾಯ, ವಿದ್ಯಾವಂತ ಯುವಕನನ್ನು ನೋಡಿ ಮುಖ್ಯಮಂತ್ರಿ ಮೆಚ್ಚಿದರು. ತಕ್ಷಣ ನಿಂತಲ್ಲೇ ಹೇಳಿದರು –

"ಈ ಕ್ಷಣದಿಂದಲೇ ವಿಜಯ್ ನನ್ನ ಅಂಗರಕ್ಷಕ!"

ಗೆಜ್ಜೇನಹಳ್ಳಿ ಜನ, ವಿಜಯ್‌ನನ್ನು ಅಭಿನಂದಿಸಿದರು. ಟಿವಿ ಮಾಧ್ಯಮಗಳಲ್ಲಿ ಕಾಣಿಸಿಕೊಂಡು ಮನೆಮಾತಾದ.

ದಿನಪತ್ರಿಕೆಗಳಲ್ಲಿ ಅವನ ಸಾಹಸಮಯ ಸುದ್ದಿ ಪ್ರಕಟವಾಗಿತ್ತು.

"ಥ್ಯಾಂಕ್ಯೂ....! ಥ್ಯಾಂಕ್ಯೂ...!" ಅನ್ನುತ್ತಿದ್ದಾನೆ ವಿಜಯ್. ಅದೇ ಸಮಯದಲ್ಲಿ ಅವನ ನಿತಂಬಗಳ ಮೇಲೆ ಬಲವಾದ ಕಾಲಿನ ಹೊಡೆತ ಬಿದ್ದಿತು!!

"ಎದ್ದೇಳೋ ಭಡವ! ಸೂರ್ಯ ನೆತ್ತಿಗೆ ಹೋದ. ನೀನು ಮಲಗಿ ಕನಸು ಕಾಣುತ್ತಿದ್ದೀಯಾ?!!"

ವಿಜಯ್‌ನ ತಾತ ಉಗ್ಗಡಿಸಿದ. ಕಕ್ಕಾಬಿಕ್ಕಿಯಾಗಿ ಎದ್ದು ಕುಳಿತ ವಿಜಯ್ ಇದುವರೆಗೂ ನಾನು ಸುಪ್ತಾವಸ್ಥೆಯಲ್ಲಿ ಕನಸು ಕಂಡಿದ್ದು ಅನ್ನುವುದು ವಿಜಯ್‌ಗೆ ತಿಳಿದುಹೋಯಿತು.

ಗೆಜ್ಜೇನಹಳ್ಳಿಗೆ ಮುಖ್ಯಮಂತ್ರಿಗಳು ಉಷಃಕಾಲದಲ್ಲಿ ಭದ್ರತೆಯೊಂದಿಗೆ ಬಂದುಹೋಗಿದ್ದರು. ತನ್ನ ತಾತ ಮತ್ತೊಮ್ಮೆ ತನ್ನ ಸಮೀಪ ಬರುವಷ್ಟರಲ್ಲಿ ಲಗುಬಗನೆ ಎದ್ದು ವಿಜಯ್ ಹೊರಗೆ ಓಡಿದ.

**ಸೂರ್ಯವಂಶಿ ರಾಜ್‌ಪೂತ್**
ನಂ. ೧೧೭, ಹಂದ್ರಹಳ್ಳಿ ಮುಖ್ಯರಸ್ತೆ, ಕಾಳಿಕಾನಗರ, ಬೆಂಗಳೂರು – ೫೬೦ ೦೫೮

೧೭೨೦ರಲ್ಲಿ ಭಾರತದ ಹತ್ತಿ ಬಟ್ಟೆಯ ಬಳಕೆಯನ್ನು ಇಂಗ್ಲೆಂಡ್ ಸಂಪೂರ್ಣವಾಗಿ ಕಾನೂನಿನ ಮೂಲಕವೇ ನಿಷೇಧಿಸಿತು. ೧೭೬೦ರಲ್ಲಿ ಒಬ್ಬ ಸ್ತ್ರೀಯು ಕಾನೂನು ಮೀರಿ ಭಾರತದ ಕರವಸ್ತ್ರವನ್ನು ಹೊಂದಿದ್ದಕ್ಕೆ ಇಂಗ್ಲೆಂಡ್ ೨೦೦ ಪೌಂಡ್‌ಗಳ ದಂಡ ವಿಧಿಸಿತೆಂದು ಹೇಳಲಾಗಿದೆ. ಹಾಲೆಂಡ್ ದೇಶವನ್ನು ಹೊರತುಪಡಿಸಿ, ಇತರ ಎಲ್ಲಾ ಯುರೋಪಿಯನ್ ದೇಶಗಳು ಭಾರತೀಯ ಬಟ್ಟೆಮೇಲೆ ಅಧಿಕ ಸುಂಕ ವಿಧಿಸಿದವು. ಇಷ್ಟೊಂದು ಅಗಾಧವಾಗಿ ಭಾರತೀಯ ವ್ಯವಹಾರಗಳಿಗೆ ಬ್ರಿಟನ್ ತೊಂದರೆಯನ್ನು ಉಂಟುಮಾಡಿದರೂ ಭಾರತದ ಹತ್ತಿ ಸಂಬಂಧಿ ವಸ್ತುಗಳಿಗೆ ೧೮ನೆಯ ಶತಮಾನದವರೆಗೂ ಬೇಡಿಕೆ ಇತ್ತು. ೧೭೬೪ರಲ್ಲಿ ಇಂಗ್ಲೆಂಡ್‌ನಲ್ಲಿ ನೂಲು ತೆಗೆಯುವ ಯಂತ್ರ ತಯಾರಾದ ಮೇಲೆ ಖಾದಿ ಬಟ್ಟೆಯ ತಯಾರಿಕೆಯಲ್ಲಿ ವ್ಯತ್ಯಾಸ ಕಾಣಿಸಿಕೊಂಡಿತು. ಅಲ್ಲದೇ ಭಾರತೀಯ ಖಾದಿ ಉದ್ಯಮಕ್ಕೆ ಹೊಡೆತ ಉಂಟಾಯಿತು.

# ವಸಾಹತು ನೀತಿ ಮತ್ತು ಸ್ಥಳೀಯ ಆರ್ಥಿಕತೆಯ ಮುಖಾಮುಖಿ : ಜನಪದ ಆಕರಗಳು

ಶ್ವೇತಾ ಎಂ. ಬಿ.

'ವಸಾಹತುಶಾಹಿ ವ್ಯವಸ್ಥೆ' ಎಂದರೆ ಒಂದು ದೇಶವು ಇನ್ನೊಂದು ದೇಶದ ಅಧೀನಕ್ಕೆ ಒಳಗಾಗುವುದು. ಭಾರತವು ಹೀಗೆ ಹಲವು ದೇಶಗಳ ವಸಾಹತುವಾಗಿ ನಿರ್ಮಾಣಗೊಂಡದ್ದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಆದರೆ ಬ್ರಿಟಿಷ್ ವಸಾಹತು ವ್ಯವಸ್ಥೆಯು ಭಾರತವನ್ನು ಆಳಿದ ಸುದೀರ್ಘ ಕಾಲಘಟ್ಟವು ಇಡೀ ದೇಶವನ್ನು ಇಂದಿಗೂ ಬಿಡುಗಡೆಯಿಲ್ಲದ ಹಲವು ಕಟ್ಟುಗಳೊಂದಿಗೆ ಬಂಧಿಸಿಟ್ಟಿದೆ. ವಸಾಹತುಪೂರ್ವ ಭಾರತದ ಆರ್ಥಿಕತೆಯು ತನ್ನದೇ ಆದ ಒಂದು ಬಗೆಯ ಲಯಬದ್ಧ ಏರಿಳಿತಗಳೊಂದಿಗೆ ಸಾಗುತ್ತಿತ್ತು. ಮತ್ತು ಅದು ಸ್ವಯಂರೂಪಗೊಂಡಿದ್ದ ಒಂದು ವ್ಯವಸ್ಥೆಯಾಗಿತ್ತು. ಜನರು ಈ ಪಾರಂಪರಿಕ ಆಡಳಿತದೊಂದಿಗೆ ಸಹಜ ಮತ್ತು ಅನಿವಾರ್ಯ ಸಹಯೋಗವನ್ನು ಪ್ರತಿರೋಧಗಳೊಂದಿಗೂ ರೂಢಿಸಿಕೊಂಡಿದ್ದರು. ಇದೇ ಸಮಾಜದಲ್ಲಿ ಶ್ರೇಣೀಕೃತ ವ್ಯವಸ್ಥೆಯೂ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿತ್ತು. ಹಲವಾರು ಪಾರಂಪರಿಕ ಕಟ್ಟುಪಾಡುಗಳೊಂದಿಗೆ ಸ್ತ್ರೀ ಸಮಾಜವೂ ವ್ಯವಸ್ಥೆಯ ಭಾಗವಾಗಿತ್ತು. ಒಟ್ಟಿನಲ್ಲಿ ಬಹುಕಾಲದಿಂದ ನಡೆದುಬಂದ ರೀತಿ-ನೀತಿಗಳೊಂದಿಗೆ ಗ್ರಾಮಜೀವನವು ರೂಪುಗೊಂಡಿತ್ತು. ಸ್ಥಳೀಯವಾಗಿ ನಡೆಯುತ್ತಿದ್ದ ಕೈಗಾರಿಕೆಗಳು, ವೃತ್ತಿಗಳು, ವ್ಯವಸ್ಥಿತವಾದ ರೀತಿಯಲ್ಲಿ ಹಂಚಿಹೋಗಿದ್ದವು. ಸ್ಥಳೀಯ ಗ್ರಾಮ ಜೀವನದ ಅಗತ್ಯಗಳನ್ನು ಪೂರೈಸಲೆಂದೇ ಒಂದು ವರ್ಗ ಕೆಲಸ ಮಾಡುತ್ತಿತ್ತು. ವ್ಯಾಪಾರ ಹಾಗೂ ಮಾರಾಟದ ಉದ್ದೇಶವಿಟ್ಟುಕೊಂಡೇ ಕೆಲಸಮಾಡುತ್ತಿದ್ದ ಕೈಗಾರಿಕೆಗಳ ಮತ್ತೊಂದು ವರ್ಗವಿತ್ತು. ನೇಯ್ಗೆ, ಎಣ್ಣೆ ತೆಗೆಯುವುದು, ಕಬ್ಬಿಣದ ತಯಾರಿಕೆ ಮುಂತಾದವು ಗ್ರಾಮ ಜೀವನದ ಭಾಗವಾಗಿದ್ದವು. ಬೇರೆ-ಬೇರೆ ವೃತ್ತಿ ಕಸುಬುಗಾರರು ಪಟ್ಟಣದವರಿಗಾಗಿ ವಸ್ತುಗಳನ್ನು ತಯಾರಿಸುತ್ತಿದ್ದ ಸಂದರ್ಭಗಳೂ ಇವೆ. ಗ್ರಾಮಸ್ಥರೇ ಕಬ್ಬಿಣ, ಪೆಟ್ಲುಪ್ಪು ಮುಂತಾದವನ್ನು ತಯಾರಿಸುವ ಕಾರ್ಯಕ್ಕೆ ಇಳಿಯುತ್ತಿದ್ದುದೂ ಉಂಟು. ಒಂದೇ ವೃತ್ತಿಗೆ ಮೀಸಲಾದ ಹಳ್ಳಿಗಳೂ ಸಾಕಷ್ಟಿದ್ದವು. ಪರಸ್ಪರ ಒಂದಕ್ಕೊಂದು ಸಂಬಂಧವಿರುವ ವೃತ್ತಿಗಳವರು ಜತೆಯಾಗಿ ವಾಸಿಸುವ ಕೇರಿಗಳಿದ್ದವು. ರಾಜಾಶ್ರಯಗಳಲ್ಲೂ ಕಾರಖಾನೆಗಳಿದ್ದವು. ಹೀಗೆ ವೈವಿಧ್ಯತೆಗಳನ್ನು ಒಳಗೊಂಡ ಗುಡಿ ಕೈಗಾರಿಕೆ ಹಾಗೂ ವೃತ್ತಿ ಕಸುಬುಗಳು ಭಾರತೀಯ ಪರಂಪರೆಯ ಭಾಗವಾಗಿದ್ದವು. ಬಡಗಿ, ಕಂಬಾರ, ಕಮ್ಮಾರ, ನೇಕಾರ, ಅಕ್ಕಸಾಲಿಗ, ಚರ್ಮಗಾರ, ಮಡಿವಾಳ, ಉಪಾಧ್ಯಾಯ, ಜೋಯಿಸ, ಪಟೇಲ, ಶ್ಯಾನುಭೋಗ, ತಳವಾರ, ತೋಟಿ ಮೊದಲಾದವರೆಲ್ಲರನ್ನು ಒಳಗೊಂಡಿದ್ದ ಸ್ಥಳೀಯ ಉತ್ಪಾದನಾ ಹಾಗೂ ಆಡಳಿತ ವ್ಯವಸ್ಥೆಯು ದೇಶದಾದ್ಯಂತ ಪ್ರಚಲಿತವಿದ್ದಿತ್ತು. ಒಟ್ಟಿನಲ್ಲಿ ಗ್ರಾಮವೊಂದು ತನ್ನ ಕಷ್ಟ ಸುಖಗಳನ್ನು ತಾನೇ ನಿರ್ವಹಿಸಿಕೊಳ್ಳುವ ಒಂದು ಘಟಕವಾಗಿ ಕಾರ್ಯನಿರ್ವಹಿಸುತ್ತಿತ್ತು. ರಾಜಾಡಳಿತವೂ ಏಕಕಾಲದಲ್ಲಿ ನೂರಾರು ಜನರನ್ನು ಪೋಷಿಸುತ್ತಿತ್ತು. ಕಾವಲುದಳ, ಗಜಪಡೆ, ಪತ್ರ ಬರೆಯುವವರು, ಪತ್ರ ಒಯ್ಯುವವರು, ಲೆಕ್ಕಿಗರು, ಆಲಂಕಾರಿಕ ಸೇವಕರು, ಕುದುರೆ-ಆನೆಗಳ ಸೇವಕರು, ಮಂತ್ರಗಾರರು, ನೃತ್ಯಗಾರರು, ಹಾಡುಗಾರರು, ಸಂಗೀತಗಾರರು, ರಾಣಿ ವಾಸದ ಸೇವಕಿಯರು, ಕಾವಲುಗಾರರು, ಪಲ್ಲಕ್ಕಿ ಹೊರುವವರು, ಅರಮನೆ ಪಂಡಿತರು, ಆಸ್ಥಾನ ವಿದ್ವಾಂಸರು - ಹೀಗೆ ಸಾವಿರಾರು ಬಗೆಯ ವೃತ್ತಿಗಳನ್ನು ಸೃಷ್ಟಿಸಿ ಆಸ್ಥಾನವೊಂದು ಉದ್ಯೋಗದ ಕೇಂದ್ರವಾಗಿತ್ತು.

ಪೋರ್ಚುಗೀಸರು, ಡಚ್ಚರು, ಫ್ರೆಂಚರು ಬಂದ ನಂತರವೇ ಯುರೋಪಿನೊಂದಿಗೆ ವಾಣಿಜ್ಯ ಸಂಪರ್ಕವು ಬೇರೆ ಬೇರೆ ಸ್ತರಗಳಲ್ಲಿ ಏರ್ಪಟ್ಟಿತು. ಪುರಾತನ ಕಾಲದಿಂದ ಪರಕೀಯ ದಾಳಿಗಳನ್ನು ಎದುರಿಸಿದ ಸಂದರ್ಭದಲ್ಲಿಯೂ ದೇಶವು ಚೈತನ್ಯವನ್ನು ಕಳೆದುಕೊಳ್ಳದೇ, ಒಂದು ರೀತಿಯ ಸಮತೋಲನವನ್ನು ಸಾಧಿಸಿಕೊಂಡಿತ್ತು. ಆದರೆ ಬ್ರಿಟಿಷರ ಆಡಳಿತವು (ಬಹುತೇಕ ಭಾರತದಲ್ಲಿ) ಒಂದು ಹೊಸ ಬಿಕ್ಕಟ್ಟನ್ನು ದೇಶದ ಆಂತರಿಕ ವ್ಯವಸ್ಥೆಯಲ್ಲಿ ಹುಟ್ಟುಹಾಕಿತು. ಕರಕುಶಲ ಕೆಲಸಗಳನ್ನು ಪ್ರೋತ್ಸಾಹಿಸುತ್ತಿದ್ದ ಹಲವು ರಾಜಾಶ್ರಯಗಳೂ ಬ್ರಿಟಿಷ್ ನೀತಿಗಳಿಂದಾಗಿ ನಾಶವಾದುದರಿಂದ ಅದೂ ಸ್ಥಳೀಯ ಕೈಗಾರಿಕೆಯ ವಿನಾಶಕ್ಕೆ ಪೂರಕವಾಯಿತು. ಕಾರ್ಲ್ ಮಾರ್ಕ್ಸ್ ಅವರ ಮಾತುಗಳು ಹೀಗಿವೆ "ಬ್ರಿಟಿಷ್ ಆಕ್ರಮಣಕಾರರು ಭಾರತದ ಕೈಮಗ್ಗಗಳನ್ನು ಮತ್ತು ನೂಲುವ ತಕಲಿಯನ್ನು ಮುರಿದರು ಹಾಗೂ ಹತ್ತಿ ಮತ್ತು ಹತ್ತಿ ವಸ್ತ್ರದ ಮಾತೃ ದೇಶವನ್ನು ಜಲಪ್ರವಾಹದಲ್ಲಿ ಮುಳುಗಿಸಿದರು". ಇಡೀ ಜಗತ್ತಿನಲ್ಲಿ ಹೆಸರುವಾಸಿಯಾಗಿದ್ದ ಉತ್ಕೃಷ್ಟ ಗುಣಮಟ್ಟದ ಮಸ್ಲಿನ್ ಬಟ್ಟೆಯನ್ನು ಉತ್ಪಾದಿಸುತ್ತಿದ್ದ ಢಾಕಾದ ಜನಸಂಖ್ಯೆ ೧೮೨೭ ಮತ್ತು ೧೮೩೭ರ ನಡುವೆ ೧,೫೦,೦೦೦ದಿಂದ ೨೦,೦೦೦ಕ್ಕೆ ಇಳಿಯಿತೆಂಬುದನ್ನು ಚರಿತ್ರೆ ವಿವರಿಸುತ್ತದೆ.

**ವಸಾಹತುಕಾಲದ ಆರ್ಥಿಕ ಸ್ಥಿತಿ ಮತ್ತು ಜನಪದ ಸಾಹಿತ್ಯ**

ಪ್ರಭುತ್ವ ವ್ಯವಸ್ಥೆಯೊಂದು ಜನಸಾಮಾನ್ಯನ ಅಗತ್ಯತೆಗಳಿಗಾಗಿ ರೂಪುಗೊಂಡಿದ್ದರೆ, ಅಲ್ಲಿ ತಕರಾರುಗಳಿರಲಾರದು. ಆದರೆ ವಸಾಹತು ಆಡಳಿತವು ಭಾರತವನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುವ ಮತ್ತು ನಿಯಂತ್ರಣದಲ್ಲಿ ಇರಿಸಿಕೊಂಡು ಶೋಷಿಸುವ ದಾರಿಗಳನ್ನು ಅನ್ವೇಷಿಸುತ್ತಲೇ ಹಲವು ಬಗೆಯ ಪ್ರಯೋಗಗಳಿಗೆ ದೇಶವನ್ನು ಒಳಪಡಿಸುತ್ತಾ ಹೋಯಿತು. ಈ ನಿಟ್ಟಿನಲ್ಲಿ ಅದು ಜನವಿರೋಧಿಯಾಗಿಯೂ, ರೂಪುಗೊಂಡಿತು. ಸಮಾಜದಲ್ಲಿ ಈ ಆಡಳಿತವು ಒಂದು ಬಗೆಯ ಆತಂಕ ಮತ್ತು ದಿಗಿಲಿಗೆ ಕಾರಣವಾಯಿತು. ವಸಾಹತು ಸಂಸ್ಕೃತಿಗೆ ಮುಖಾಮುಖಿಯಾದ ಸ್ಥಳೀಯ ಜನಪದರ ಅಭಿವ್ಯಕ್ತಿಗಳನ್ನೊಳಗೊಂಡ ಗೀತ

ಪ್ರಕಾರಗಳು ಹಾಗೂ ಇತರೇ ಸಾಹಿತ್ಯ ಪ್ರಕಾರಗಳನ್ನು ಸಾಕಷ್ಟು ಸಂಗ್ರಹಿಸಿಡಲಾಗಿದೆ. ಆದರೆ ಅವುಗಳ ಕುರಿತಾದ ವಿಶ್ಲೇಷಣೆ, ವಿಮರ್ಶೆ ಹಾಗೂ ಅವು ನೀಡುವ ಒಳನೋಟಗಳ ಕುರಿತಾದಂತೆ ಆಗಬೇಕಾದ ಕಾರ್ಯಗಳು ಬಹಳಷ್ಟಿವೆ. ಜನಪದರು ಪುರಾಣ, ಚರಿತ್ರೆ ಮಾತ್ರವಲ್ಲ ಪ್ರಸ್ತುತತೆಗೂ ತಮಗೆ ಲಭ್ಯವಾದ ಮಾಧ್ಯಮದಲ್ಲಿ ಅಭಿವ್ಯಕ್ತಿ ನೀಡುತ್ತಾ ಬಂದಿದ್ದಾರೆ. ಶಿವಾನಂದ ಗುಬ್ಬಣ್ಣನವರ 'ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ' ಕೃತಿಯಿಂದ ಆಯ್ದ ಲಾವಣಿಯೊಂದನ್ನು ಈ ಹಿನ್ನೆಲೆಯಿಂದ ಗಮನಿಸಬಹುದಾಗಿದೆ.

*"ದುಡಿಯದಲೆ ಚೈನಿ ಹೊಡೆಯುವ ಪರಕೀಯರ*
*ಬಡಿವಾರ ಎಷ್ಟು ಹೇಳಲಿ ನಾನ*
*ಹಿಡಿದತಂದ ಅಡವಿಯೊಳಗ ದುಡಿಯಲಿಕ್ಕೆ ಹಚ್ಚಿದರ*
*ಸಿಡಿಯತದ ಬುಡಕಿನ ಶಗಣ*
*ನಟ್ಟ ಕಡಿಯೋದಿಲ್ಲ ನೇಗಿಲ ಹೊಡೆಯುವುದಿಲ್ಲ*
*ಟಾಕ ಹಿಡಿದ ಮಾಡತಾರ ಹಗಣ"*

ಬ್ರಿಟಿಷರು ಭಾರತೀಯರನ್ನೇ ತಮ್ಮ ದುಡಿಮೆಗೆ ಕೂಲಿಗಳನ್ನಾಗಿ ಬಳಸಿಕೊಳ್ಳತೊಡಗಿದರು. ಕಡಿಮೆ ಸಂಬಳಕ್ಕೆ ಸ್ಥಳೀಯರನ್ನು ದುಡಿಸತೊಡಗಿದರು. ತಮ್ಮ ದಿನನಿತ್ಯದ ಖರ್ಚಿಗೂ ಹಣವಿಲ್ಲದೇ ಬಳಲುತ್ತಿದ್ದವರಿಗೆ ಈ ಬ್ರಿಟಿಷ್ ಪ್ರಭುಗಳು ನೀಡುತ್ತಿದ್ದ ಸಂಬಳ ಆಶ್ರಯ ನೀಡುತ್ತಿತ್ತು. ಆದರೂ ಕೆಲವು ಪ್ರಜ್ಞಾವಂತ ಮನಸುಗಳು ಪರಕೀಯ ಪ್ರಭುತ್ವದ ಈ ಶೋಷಣೆಯನ್ನು ಪ್ರತಿಭಟಿಸತೊಡಗಿದರು.

*"ಶರಾ ಬರದ ಸವರು ಪೂರಾ ಪಗಾರ ತಿಂದ*
*ಹಿಂದಗಡೆ ತಗೋತಾರ ಪೇನ ಸೇನ*
*ಭಾರಿ ಪಗಾರದ ನೌಕರಿ ಇದ್ದರ*
*ತಮ್ಮ ಜನರಿಗೆ ಕೊಡತಾರ ಅದನ*
*ರಾಜೌ ಸಾಹೇಬ ಸರ್ ರಾವ್ ಬಹದ್ದೂರಂತ*
*ನಮ್ಮವರಿಗೆ ಕೊಡತಾರ ಪದವಿಯನ"*

ಬ್ರಿಟಿಷ್ ಆಡಳಿತವನ್ನು ಭಾರತದಲ್ಲಿ ನಡೆಸಲು ನೇಮಿಸಲಾದ ಅಧಿಕಾರಿಗಳು ತಮ್ಮ ಸ್ವಾರ್ಥದ ಮಾರ್ಗ ಹಿಡಿದು, ತಮಗೆ ಬೇಕಾದ ರೀತಿಯ ಸ್ವೇಚ್ಛೆಯ ಅಧಿಕಾರವನ್ನು ನಿರ್ವಹಿಸುತ್ತಿದ್ದ ಕುರಿತು ಇಲ್ಲಿ ಟೀಕಿಸಲಾಗಿದೆ. ತಮ್ಮವರಿಗೆ ಬೇಕಾದ ಪದವಿಯನ್ನು ನೀಡಿ, ಅವರಿಗೆ ಹೆಚ್ಚು ಸಂಬಳದ ಕೆಲಸಗಳನ್ನು ಕೊಟ್ಟು ಸ್ಥಳೀಯರನ್ನು ಕೀಳುದರ್ಜೆಯ ಕೆಲಸಗಳಿಗೆ ನೇಮಿಸುವ ಪರಕೀಯ ತಂತ್ರದ ಬಗೆಗೆ ಜನಪದ ಕವಿಯ ವಿಡಂಬನೆಯಿದೆ. ಅಲ್ಲದೇ ಸಂಬಳದ ಜೊತೆ ಭತ್ಯವನ್ನು ವಸೂಲಿ ಮಾಡುವ ಗೀಳನ್ನು ಈ ಅಧಿಕಾರಿಗಳು ಹೊಂದಿದ್ದರೆಂದು ಹೇಳುತ್ತಾನೆ. ವಾಯಿಸರಾಯನಿಂದ ಹಿಡಿದು ಗವರ್ನರನವರೆಗೆ ಎಲ್ಲರೂ ಇಂಥ ಮೋಸದ ಆಡಳಿತವನ್ನು ನಡೆಸುತ್ತಾರೆಂಬುದು ಲಾವಣಿಕಾರನ ಆತಂಕ.



## ತಿದ್ದುಪಡಿ

ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಲಾ ಮಹಾವಿದ್ಯಾಲಯದ ಕಲಾ ಇತಿಹಾಸ ವಿಭಾಗದ ಮುಖ್ಯಸ್ಥರಾದ ಶ್ರೀ ಎಚ್. ಎ. ಅನಿಲ್‌ಕುಮಾರ ಅವರು ಮಾರಿಷಸ್‌ಗೆ ಹೋದ ಸಂದರ್ಭದಲ್ಲಿ ಬರೆದ ಲೇಖನ.

*ನಿರೂಪಣೆ :*

ಬಳಕೂರು, ವಿ. ಎಸ್. ನಾಯಕ ಅವರದ್ದು.

*"ವಾಯುಸರಾಯರನ ಕೇಳರಿ ಪಗಾರ*
*ತಿಂಗಳಿಗಿಪ್ಪತ್ತೊಂದು ಸಾವಿರ*
*ಗವ್ಹರ್ನರದು ಹತ್ತು ಸಾವಿರ*
*ಚೀಫ್ ಸೆಕ್ರೇಟರಿದು ಮೂರು ಸಾವಿರ*
*ಇಂಗ್ಲೆಂಡದಿಂದ ಹಿಂದುಸ್ಥಾನಕ ಬರುವುದಕ*
*ಹಾದಿ ಖರ್ಚು ಮೂವತ್ತು ಸಾವಿರ*
*ಕಚೇರಿ ಒಳಗ ಖರ್ಚ ಮಾಡಸಲಿಕ್ಕೆ*
*ಪ್ರತಿಯೊಂದು ಪ್ರಾಂತಕ್ಕೆ ಇಪ್ಪತ್ತೈದು ಸಾವಿರ"*

'ಇಷ್ಟೆಲ್ಲ ಅಲ್ಲದೆ ಭತ್ಯೆಯ ಹಣ ಪುಕ್ಕಟೆ ವಸೂಲ ಮಾಡುತ್ತಾರೆ. ಕೆಲಸಕ್ಕೆ ನೇಮಕ ಆದ ಮೇಲೆ ಪಗಾರ(ಸಂಬಳ)ವಲ್ಲದೇ ಬೇರೆ ಹಣ ಸುಲಿಯುತ್ತಾರೆ' ಎಂದು ಲಾವಣಿಕಾರ ಹೇಳುತ್ತಾನೆ. ಅಧಿಕಾರಿಗಳು ತಮ್ಮ ಲೂಟಿಗಾಗಿ ವ್ಯವಸ್ಥೆಯನ್ನು ನಿರ್ಮಿಸಿಕೊಂಡಿದ್ದರು. ತಮ್ಮ ಉಪಯೋಗಕ್ಕಾಗಿ ಸ್ಥಳೀಯರನ್ನು ಬಳಸಿಕೊಳ್ಳುತ್ತಿದ್ದ ಕ್ರಮವನ್ನು ಜನಪದ ಕವಿ ಖಂಡಿಸುತ್ತಾನೆ. ಭಾರತದ ಶ್ರೀಮಂತಿಕೆಯನ್ನು ಬಳಸಿಕೊಂಡು, ಇಲ್ಲಿನ ಖಜಾನೆಯನ್ನು ಖಾಲಿ ಮಾಡಿ ಇಂಗ್ಲೆಂಡಿಗೆ ಒಯ್ದು ಲಾಭ ಗಳಿಸುತ್ತಾರೆ. ಆದರೂ 'ಭಾರತವನ್ನು ನಿಯಂತ್ರಣದಲ್ಲಿ ಇಡಲು ಬೇಕಾದ ಕಾನೂನುಗಳನ್ನು ತಮ್ಮ ಹಿತಕ್ಕಾಗಿ ಜಾರಿಗೆ ತರುತ್ತಾರೆ' ಎನ್ನುವುದು ಜನಪದ ಕವಿಯ ಆತಂಕವಾಗಿತ್ತು.

*"ಏನ ಹೇಳಲಿ ಜನ್ಮದಾ ಗೋಳ।*
*ಇಂಗರೇಜಿ ಉಪದರ ಆದೀತು ಬಹಳಾ*
*ಕಠಿಣ ಬಡವರದ ತುಂಬೋದು ಹೊಟ್ಟೆ*
*ಮಾರಿಕೊಟ್ಟ್ಯಾರೋ ನೂಲುವ ರಾಟಿ*
*ಹಲಗೀ ಕುಂಚಿ-ರೇಸಮಿಪಟ್ಟಿ*
*ಭಾಂಡೇ ಸಾಮಾನಾ ಜಮನುಪಾಟಿ*
*ಲಿಲಾವ ಮಾಡಸ್ಯಾರ ಕಿಮ್ಮತಕಟ್ಟಿ*
*ಬಾಳಕೆಟ್ಟಾರಣ್ಣಾ ಸರಕಾರ"*

ಬ್ರಿಟಿಷ್ ಆಡಳಿತದ ಅಮಾನವೀಯ ವರ್ತನೆ, ನಿರ್ದಯತೆಗಳನ್ನು ಇಂಥಾ ಲಾವಣಿಗಳು ಸಾರುತ್ತವೆ. ಬ್ರಿಟಿಷರ ದಬ್ಬಾಳಿಕೆಗೆ ಉತ್ತರವಾಗಿ ಇಂಥ ಸಾವಿರಾರು ಹಾಡುಗಳು ಮೌಖಿಕ ಮಾಧ್ಯಮದ ಮೂಲಕ ಹೊರಬಂದಿವೆ. ಆದಾಯ ತೆರಿಗೆಗೆ ಸಂಬಂಧಿಸಿದಂತೆ ಬಂದಿರುವ ಒಂದು ಲಾವಣಿಯ ಕುರಿತು ಡಿ. ರಘುನಾಥರಾವ್ ಅವರು 'ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ' ಕೃತಿಯಲ್ಲಿ ವಿವರಿಸುತ್ತಾರೆ. ಮುಸಲ್ಮಾನರು, ತೆರಿಗೆ ಕೊಡುವುದಿಲ್ಲವೆಂದು ವಿರೋಧಿಸಿ 'ಮಸೂತಿ'ಯಲ್ಲಿ ಅಡಗಿಕೊಳ್ಳುತ್ತಾರೆ. ಆಗ ಅವರನ್ನು ಬಾರಿಸುವ ಇರಾದೆಯಿಂದ ಅಧಿಕಾರಿ 'ಕಾ (ಕಹಾ) ಹೈ ಧೂಂಡಕರಲಕಾವ್ ಅರೆಲಕಡಿ' ಎಂದು ಆಜ್ಞಾಪಿಸುತ್ತಾನೆ. ಆಗ ಇನ್ನೇನು 'ಬೇಡಿ ಹಾಕ್ತಾನ ನಮಗ' ಎಂದು ಅವರು ಭಯ-ಆಂತಕಕ್ಕೊಳಗಾಗುತ್ತಾರೆ. ಸರಕಾರದ ಅಧಿಕಾರಿಯ ಬಂಗಲೆಗೆ ಬಂದು 'ಖಾವಂದರಿಗೆ' ತಮ್ಮ 'ಅಹವಾಲು' ಅರ್ಪಿಸುತ್ತಾರೆ. ಬಡವರ ದೈನ್ಯ ಅಸಹಾಯಕತೆಯನ್ನು ನಿಂತುಕೊಂಡೇ ಕೇಳಿಸಿಕೊಂಡು ಕಸಿವಿಸಿಗೊಂಡು

'ಲಗುಮಾಡಿ ಅರಜಿಕೊಡರ ಬರಶಿ' ಎಂದು ಹೇಳುತ್ತಾನೆ. ರಘುನಾಥ ರಾಯರು ನೀಡಿದ ಈ ಕೆಳಗಿನ ಉದಾಹರಣೆಗಳೂ ಬ್ರಿಟಿಷ್ ಆರ್ಥಿಕ ನೀತಿಯ ಹಿನ್ನೆಲೆಯಲ್ಲಿ ಬಹಳ ಮುಖ್ಯವಾಗುತ್ತವೆ. 'ಬಂಡಾಯ ಮಾಡಿದ ರಾಯ' ಎನ್ನುವ ಹಾಡೂ ಕೂಡ ತೆರಿಗೆ ವಸೂಲಿಯಲ್ಲಾಗುತ್ತಿದ್ದ ಅನ್ಯಾಯ ಮತ್ತು ಕಾನೂನುಬಾಹಿರ ಅಧಿಕಾರ ಚಲಾವಣೆಯನ್ನು ತಿಳಿಸುತ್ತದೆ'. ರಾಯನಾಯ್ಕನಲ್ಲಿ ಬಲವಂತವಾಗಿ ನಡೆಯುತ್ತಿದ್ದ ತೆರಿಗೆ ವಸೂಲಿ, ಕೊಡದಿದ್ದರೆ ಜಪ್ತಿ ಮಾಡಿಸುತ್ತಿದ್ದ ವಿವರವಿದೆ. ಊರ ಕುಲಕರ್ಣಿ ತಾನು ಉಟ್ಟ ಧೋತರವನ್ನು ಒಗೆದು ತರಲು ರಾಯಣ್ಣನಿಗೆ ಹೇಳಿದಾಗ, ಉಟ್ಟ ಧೋತರವನ್ನು ಒಗೆದು ತರಲು ತಾನೇನು ಬಿಟ್ಟಿ ಆಳಲ್ಲವೆಂದು ನಿರಾಕರಿಸುತ್ತಾನೆ. ಇಲ್ಲಿ ವಸಾಹತುಶಾಹಿ ಆಡಳಿತವು ಸ್ಥಳೀಯವಾಗಿ ಹುಟ್ಟುಹಾಕಿದ್ದ ನಾಯಕರು ತಮ್ಮ ಕೆಳಗಿನವರನ್ನು ತುಳಿತಕ್ಕೆ ಒಳಮಾಡುತ್ತಿದ್ದ ಚಿತ್ರಣ ದೊರಕುತ್ತದೆ. ತನ್ನ ಮಾತನ್ನು ಕೇಳದ ರಾಯಣ್ಣನಿಗೆ ತೆರಿಗೆ ಕಟ್ಟಲು ಸರಕಾರದಿಂದ ಆದೇಶ ಬಂದಿದೆಯೆಂದೂ, ತಕ್ಷಣವೇ ತೆರಿಗೆ ಕಟ್ಟಬೇಕೆಂದೂ ಕುಲಕರ್ಣಿ ಹೇಳುತ್ತಾನೆ. ಅಲ್ಲದೇ ರಾಯಣ್ಣ ತನ್ನ ಪ್ರೀತಿಯ ಎತ್ತುಗಳನ್ನು ಮಾರಿ ಕಂದಾಯ ಕಟ್ಟುತ್ತಾನೆ. ಇಂಥ ಶೋಷಣೆಗಳು ಕ್ರಮೇಣ ಶ್ರೀಸಾಮಾನ್ಯರನ್ನೇ ಬ್ರಿಟಿಷ್ ನೀತಿಯ ವಿರುದ್ಧದ ಬಂಡಾಯಕ್ಕೆ ಪ್ರೇರೇಪಿಸುತ್ತವೆ.

**ಖಾದಿ ಮತ್ತು ಆರ್ಥಿಕತೆ**

'ಖಾದಿ' ದೇಶದ ಸ್ವಾವಲಂಬನೆಯ ಸಂಕೇತ. ರಾಷ್ಟ್ರೀಯತೆಯ ಸಂಕೇತ. ಹತ್ತಿಯಿಂದಲೇ ಮಾಡುತ್ತಿದ್ದ ದೇಶದ ಪ್ರಧಾನ ಉದ್ಯಮ. ಭಾರತವು ಖಾದಿಯನ್ನು ಪ್ರಧಾನವಾಗಿ ಆಶ್ರಯಿಸಿತ್ತು. ಆದರೆ ವಸಾಹತುಶಾಹಿ ವ್ಯವಸ್ಥೆಯ ಆರ್ಥಿಕ ಧೋರಣೆಗಳು ಈ ಉದ್ಯಮವನ್ನು ತೊಂದರೆಗೀಡುಮಾಡಿದವು.

*"ಪರದೇಶಿ ಗಿರಣಿಯ ನಯವಾದ ವಸ್ತ್ರವು*
*ರೈತರ ಕೊರಳಿಗೆ ಉರಲಾಯಿತು ನಮ್ಮ*
*ಸರಸಾದ ರಾಟೆಯು ಬಯಲಾಯಿತು*
*ಬೆರಗು ಮಾಡುವ ಮಗ್ಗ ಮುಗ್ಗಾಯಿತು*
*ಕೊರಳಿಗೆ ಕುತ್ತಾದ ಕರುಳಿನ ಗಾಯವು*
*ಮಾಯಬೇಕೆಂದರೆ ಖಾದಿಯೇ ಹಾದಿ"**

(*ಶಿವಾರೆಡ್ಡಿ ಕೆ. ಸಿ. ಕನ್ನಡದ ಹಾಡುಪಾಡು, ಅಧ್ಯಯನ ಮಂಡಲ ಬೆಂಗಳೂರು ಪುಟ ೨೭೮)

೧೭೨೦ರಲ್ಲಿ ಭಾರತದ ಹತ್ತಿ ಬಟ್ಟೆಯ ಬಳಕೆಯನ್ನು ಇಂಗ್ಲೆಂಡ್ ಸಂಪೂರ್ಣವಾಗಿ ಕಾನೂನಿನ ಮೂಲಕವೇ ನಿಷೇಧಿಸಿತು. ೧೭೬೦ರಲ್ಲಿ ಒಬ್ಬ ಸ್ತ್ರೀಯು ಕಾನೂನು ಮೀರಿ ಭಾರತದ ಕರವಸ್ತ್ರವನ್ನು ಹೊಂದಿದ್ದಕ್ಕೆ ಇಂಗ್ಲೆಂಡ್ ೨೦೦ ಪೌಂಡ್‌ಗಳ ದಂಡ ವಿಧಿಸಿತೆಂದು ಹೇಳಲಾಗಿದೆ. ಹಾಲೆಂಡ್ ದೇಶವನ್ನು ಹೊರತುಪಡಿಸಿ, ಇತರ ಎಲ್ಲಾ ಯುರೋಪಿಯನ್ ದೇಶಗಳು ಭಾರತೀಯ ಬಟ್ಟೆಮೇಲೆ ಅಧಿಕ ಸುಂಕ ವಿಧಿಸಿದವು. ಇಷ್ಟೊಂದು ಅಗಾಧವಾಗಿ ಭಾರತೀಯ ವ್ಯವಹಾರಗಳಿಗೆ ಬ್ರಿಟನ್ ತೊಂದರೆಯನ್ನು ಉಂಟುಮಾಡಿದರೂ ಭಾರತದ ಹತ್ತಿ ಸಂಬಂಧಿ ವಸ್ತುಗಳಿಗೆ ೧೮ನೆಯ ಶತಮಾನದವರೆಗೂ ಬೇಡಿಕೆ ಇತ್ತು. ೧೭೬೪ರಲ್ಲಿ ಇಂಗ್ಲೆಂಡ್‌ನಲ್ಲಿ ನೂಲು ತೆಗೆಯುವ ಯಂತ್ರ ತಯಾರಾದ ಮೇಲೆ ಖಾದಿ ಬಟ್ಟೆಯ ತಯಾರಿಕೆಯಲ್ಲಿ ವ್ಯತ್ಯಾಸ ಕಾಣಿಸಿಕೊಂಡಿತು. ಅಲ್ಲದೇ ಭಾರತೀಯ ಖಾದಿ ಉದ್ಯಮಕ್ಕೆ ಹೊಡೆತ ಉಂಟಾಯಿತು. ಅದನ್ನು ದೇಶೀ ದುಂದುಮೆಯೊಂದು ಹೀಗೆ ವಿವರಿಸುತ್ತದೆ.

*"ಗಿರಣಿಯ ಅರಿವೆಯು ಬಂದಕಾಲಕ್ಕೆ*
*ನಮ್ಮ ಜಾಡರ ಹೊಟ್ಟೆಯು ಹೋಳಾಯಿತು*
*ಬಲು ಸರಸಾದ ನೇಯಿಗೆ ಹಾಳಾಯಿತು। ಅತಿ*
*ವಿರಸವಾಗಿರುವಂಥ ಬಾಳಾಯಿತು*




*ಜ್ವರದಿಂದ ಕೊರೆಯುತ್ತ ಜಾಡರ ಕರಳನ್ನು*
*ಮರೆಯುತ್ತ ಬಂದಿತು ಮ್ಯಾಂಚೆಸ್ಟರರವಿ"*

ಇಂಗ್ಲೆಂಡಿನಲ್ಲಿ ರೂಪುಗೊಂಡ ಈ ತಾಂತ್ರಿಕ ಬೆಳವಣಿಗೆ, ಬಟ್ಟೆ ಉದ್ಯಮದಲ್ಲಾದ ಆಧುನಿಕತೆಯ ಸೋಂಕು ಭಾರತೀಯ ವಸ್ತುಗಳ ಬೇಡಿಕೆಯನ್ನು ಕುಗ್ಗಿಸಿತು. ಭಾರತದ ನೇಕಾರರಿಗೆ ವ್ಯಾಪಾರದಲ್ಲಿ ನಷ್ಟ ಉಂಟಾಯಿತು. ಇವರು ಕಂಪೆನಿಯ ಅಡಿಯಲ್ಲಿ ಕಡಿಮೆ ಕೂಲಿಗೆ ದುಡಿಯುವಂತಾಯಿತು.

*'ಹಂಗು ಇಲ್ಲದ ನೇಯ್ಗೆ ವೃತ್ತಿಯ*
*ಆಂಗಲೆಯರು ಹಾಳುಗೈದು*
*ತುಂಗ ಭಾಗ್ಯ ಸೂತ್ರವನ್ನು*
*ಭಂಗಪಡಿಸಿ ಕೊಂದರಯ್ಯೋ'*

ಎಂದು ಸ್ಥಳೀಯ ಜನತೆಯ ರೋದನ ಆರಂಭವಾಯಿತು. 'ದೇಶದಭಿಮಾನಕ್ಕಾಗಿ ತ್ರಾಸ ಆದರೂ ಚಿಂತಿಯಿಲ್ಲ ಮೀಸಲಿದ್ದ ಖಾದಿಯ ವಸ್ತ್ರವನ ಧರಿಸಿರಿ ಇನ್ನ' ಎಂದು ಭಾರತೀಯರಿಗೆ ಕರೆನೀಡಲಾಯಿತು. ಭಾರತಕ್ಕೆ ತರುತ್ತಿದ್ದ ಬಟ್ಟೆಗಳನ್ನು ಕೊಂಡುಕೊಳ್ಳಬಾರದೆಂದು ಜನರಿಗೆ ತಿಳಿಹೇಳಲಾಯಿತು. ಇಂಗ್ಲೆಂಡ್ ಆರ್ಥಿಕವಾಗಿ ಪ್ರಬಲವಾದಷ್ಟು ಭಾರತ ದುರ್ಬಲಗೊಳ್ಳುತ್ತಾ ಸಾಗಿತು. ಭಾರತವು ಇಂಗ್ಲೆಂಡಿಗೆ ಒಂದು ಮಾರುಕಟ್ಟೆಯಾಯಿತು. ಇದೆಲ್ಲದರ ಪರಿಣಾಮ 'ಅಖಿಲಭಾರತ ಚರಕ ಸಂಘ'ಗಳು ತಲೆಯೆತ್ತಿದವು.

*"ಕಷ್ಟಪಟ್ಟ ನಿತ್ಯ ದುಡಿಬೇಕ ಕೈಕೆಲಸದಕ*
*ನೂಲ ತೆಗಿಬೇಕ ಖಾದಿ*
*ನೆಯ್ದು ದಿನಾ ಚರಕಾ ಸಂಘಕ್ಕೆ*
*ಓದ ಕೊಡಬೇಕಾ ನೇಕಾರ ಜನ*
*ಮೆಂಬರಾಗಬೇಕು ಖಾದಿ ತೊಡಬೇಕ"*

ಎಂದು ಸಾರಿ ಹೇಳಿದರು. ಬ್ರಿಟಿಷರು ಭಾರತವನ್ನು ತಮ್ಮದಾಗಿಸಿಕೊಂಡದ್ದರ ಪರಿಣಾಮ ಹಲವು. "ಭಾರತೀಯ ಸಮಾಜದ ಇಡೀ ಹಂದರವನ್ನು ಇಂಗ್ಲೆಂಡು ಕೆಡವಿ ಹಾಕಿದೆ. ಮತ್ತೆ ಕಟ್ಟುವ ಸೂಚನೆಗಳು ಕಾಣುತ್ತಿಲ್ಲ. ತನ್ನ ಹಳೆಯ ವ್ಯವಸ್ಥೆಯು ನಷ್ಟವಾಗಿರುವುದು, ಹೊಸ ವ್ಯವಸ್ಥೆ ಕಾಣದೇ ಇರುವುದು ಭಾರತೀಯನ ಮನಸ್ಸಿನಲ್ಲಿ ಒಂದು ಬಗೆಯ ವಿಷಣ್ಣತೆಯ ಭಾವವನ್ನು ಮೂಡಿಸಿದೆ. ಬ್ರಿಟನ್ ಆಳ್ವಿಕೆಯಲ್ಲಿರುವ ಹಿಂದೂಸ್ಥಾನವನ್ನು ಅದರ ಎಲ್ಲಾ ಪ್ರಾಚೀನ ಸಂಪ್ರದಾಯಗಳಿಂದ ಅದರ ಎಲ್ಲಾ ಗತ ಇತಿಹಾಸದಿಂದ ದೂರ ಮಾಡಿಬಿಡುತ್ತದೆ. ಭಾರತೀಯ ಕೈಮಗ್ಗವನ್ನು ಮುರಿದು ಹಾಕಿದ್ದು, ನೂಲುವ ಚರಕವನ್ನು ನಾಶ ಮಾಡಿದ್ದು ಬ್ರಿಟಿಷ್ ಆಕ್ರಮಣಕಾರರೇ." ಎಂದಿದ್ದಾನೆ ಮಾರ್ಕ್ಸ್. ಆತ ಈ ಸಂದರ್ಭವನ್ನು ವೈಚಾರಿಕ ವಿಶ್ಲೇಷಣೆಗೆ ಒಳಪಡಿಸಿದ್ದಾನೆ. ಆತನು ೧೮೫೩ರಲ್ಲಿಯೇ "ಬ್ರಿಟಿಷ್ ರೂಲ್ ಇನ್ ಇಂಡಿಯಾ" ಲೇಖನದಲ್ಲಿ ಬರೆದುದನ್ನು ಪಿ. ಸಿ. ಜೋಷಿ*ಯವರು ಮೇಲಿನಂತೆ ಪ್ರಸ್ತಾಪಿಸಿದ್ದಾರೆ.

*"ಗಿರಣಿ ಸಹಾಯದಿಂದ ನಿಮಗ ವರ್ಣಿಸಲಿಕ್ಕೆ ಬಾರದಂಥ*
*ಅರವಿ ನೆಯ್ಯಿತಾರ ಇಂಗ್ಲಿಷ್ ಜನಾ।*
*ಅಗ್ಗದಿಂದ ಅರವಿ ಮಾರಿ। ಜಗ್ಗಿ ಹಣ ಒಯ್ಯುತಾರ*
*ನುಗ್ಗಮಾಡಿ ಬಿಟ್ಟಾರಲ್ಲೊ ಹಿಂದೂಸ್ತಾನ।*
*ಉಳಿಯಲಿಲ್ಲೇನಾ॥"*

ಮಾರ್ಕ್ಸ್ ವಿಶ್ಲೇಷಿಸಿದ ಅಂಶಗಳನ್ನೇ ಈ ಲಾವಣಿಯೂ ವಿವರಿಸುತ್ತದೆ. ಗಿರಣಿ ಯಂತ್ರವು ಭಾರತೀಯರ ಪಾರಂಪರಿಕ ತಳಹದಿಯನ್ನೇ ಅಲುಗಾಡಿಸಿತು. ತಮ್ಮ ಯಂತ್ರಗಳಿಂದ ತಯಾರಿಸಿದ ಬಟ್ಟೆಯನ್ನು ಬ್ರಿಟಿಷರು ಕಡಿಮೆ ಬೆಲೆಗೆ ಭಾರತದಲ್ಲಿ ಮಾರಿ ಹಣ ಮಾಡುತ್ತಿದ್ದರು. ದೇಶೀಯ ಆರ್ಥಿಕತೆಗೆ ಆದ ಈ ಹಿನ್ನಡೆ ಜನಸಾಮಾನ್ಯರನ್ನು ಅತಿಯಾದ ಸಂಕಷ್ಟಕ್ಕೆ ಒಳಗುಮಾಡಿತು. ಭಾರತೀಯರಿಗೆ ಉಂಟಾಗುತ್ತಿದ್ದ ಅನ್ಯಾಯವನ್ನು ಕುರಿತು ಚಿಂತಿಸದೇ ವಿದೇಶೀ ವಸ್ತ್ರ ತೊಡುತ್ತಿದ್ದವರ ಕುರಿತು ಲಾವಣಿಕಾರ ಪ್ರಶ್ನಿಸುತ್ತಾನೆ.

*"ನಾಚಿಕಿಲ್ಲದವರು ನೀವು ನಾಡಿಗೆ ದೊಡ್ಡವರಪ್ಪ*
*ಹೇಸವಲ್ಲದ್ಯಾಕ ಹೇಳ್ರೋ ನಿಮ್ಮ ಮನಾ ।*
*ದೇಶಭಿಮಾನ ಬಿಟ್ಟ ಖಾಸದ್ರೋಹಿಗಳ ಅರವಿ*
*ಬ್ಯಾಸರಿಲ್ಲದ ತೊಡತೀರೆಲ್ಲೋ ಎಲ್ಲಾ ಜನಾ । ಇಲ್ಲ ಸುಜ್ಞಾನಾ"*

ಜನಪದ ಕವಿಯಾದರೂ ಈತ ನೀಡುವ ಅಂಕ್ಯೆ-ಸಂಖ್ಯೆ ಅಚ್ಚರಿ ತರುತ್ತಿದೆ. ಕವಿಯೊಬ್ಬ ನಿರ್ವಹಿಸುವ ಸಾಮಾಜಿಕ ಜವಾಬ್ದಾರಿ ಏನೆಂಬುದನ್ನು ಹುಲುಕುಂದ ಭೀಮಕವಿಯ ಲಾವಣಿ ಸ್ಪಷ್ಟಪಡಿಸುತ್ತದೆ. ಕಂಪೆನಿಯು ಆರಂಭದಲ್ಲಿಯೇ ರೇಶ್ಮೆ ಮತ್ತು ಹತ್ತಿಯ ಉಪಯುಕ್ತತೆಯನ್ನು ಅರಿತು ಅವುಗಳನ್ನು ಕಡಿಮೆ ಬೆಲೆಗೆ ಮಾರಿ ನೇಕಾರರಿಗೆ ಅನ್ಯಾಯ ಮಾಡತೊಡಗಿತು. ಅಲ್ಲದೇ ಕಂಪನಿಗಾಗಿಯೇ ದುಡಿಯಬೇಕೆಂಬ ನಿಯಮವನ್ನೂ ವಿಧಿಸಿತು. ೧೯ನೆಯ ಶತಮಾನದಷ್ಟರಲ್ಲೇ ಭಾರತದ ಹಲವು ಕರಕುಶಲ ಕೈಗಾರಿಕೆಗಳು ನಾಶಹೊಂದಿದವು. ಇಷ್ಟಲ್ಲದೇ ಇಂಗ್ಲೆಂಡ್‌ನಲ್ಲಿಯೇ ಹತ್ತಿ ಉತ್ಪಾದನೆಯನ್ನು ಆರಂಭಿಸಲಾಯಿತು. ಅವುಗಳನ್ನು ಭಾರತಕ್ಕೂ ಆಮದು ಮಾಡಿಕೊಳ್ಳಲು ಆರಂಭಿಸಿದರು.

*"ಹನ್ನೊಂದು ಸಾವಿರದ ಐದನೂರ ಎಂಭತ್ತೊಂದ ಮಂದಿ ನೇಕಾರ ಜನಾ ।*
*ಒಂದು ಲಕ್ಷ ನಾಲ್ವತ್ತೊಂಬತ್ತ ಸಾವಿರದಾ*
*ಒಂದನೂರಾ ಇಪ್ಪತ್ತೊಂಭತ್ತ ಜನಾ ನೂಲತಾರ ದಿನಾ*
*ಹತ್ತು ಲಕ್ಷ ಹತ್ತು ಸಾವಿರದಾ ವಂಬಯ್ಯನೂರಾ ತೊಂಬತ್ತೇಳ*
*ವರ್ಷ ಉಳಸತಾರ ಇಷ್ಟು ಹಣಾ ।*
*ಕೋಟಿ ಮಂದಿ ನೂಲವರು ತೊಂಬತ್ತ ಲಕ್ಷ ನೇಯ್ಯುವರಾ*
*ಬಿಟ್ಟು ಬಿಡದೆ ದುಡದರ ಎಷ್ಟೋ ಹಣ । ಉಳುತತಿ ದಿನಾ"*

ಬ್ರಿಟಿಷರ ದೋಚುವ ಪ್ರವೃತ್ತಿಗೆ ಉತ್ತರವಾಗಿ ಸ್ವದೇಶೀ ತಂತ್ರಗಳನ್ನು ಚುರುಕುಗೊಳಿಸಲು ಹಲವು ಜನಪದ ನಾಯಕರು ಸ್ಥಳೀಯವಾಗಿ ಹೋರಾಡಿದರು. ಜನರಲ್ಲಿ ಖಾದಿ ಕುರಿತಂತೆ ಎಚ್ಚರ ಮೂಡಿಸಲು ಪ್ರಯತ್ನಿಸಿದರು. ಭಾರತದ ಕೈಗಾರಿಕೆಯ ಅವನತಿಗೆ ಬ್ರಿಟಿಷ್ ನೀತಿ ಪ್ರಮುಖ ಕಾರಣವೆಂಬುದನ್ನು ರಷ್‌ನ್ರೂಕ್ ವಿಲಿಯಮ್ಸ್ ಹೀಗೆ ಹೇಳುತ್ತಾರೆ. 'ಶಕ್ತಿಚಾಲಿತ ಬ್ರಿಟಿಷ್ ಕೈಗಾರಿಕೆಗಳು ಹೊಂದಿದ್ದಂತಹ ಹೊಸದಾದ ಹಾಗೂ ಅಪಾರವಾಗಿದ್ದ ಈ ಅನುಕೂಲಗಳಿಗೆ ಪ್ರತಿಯಾಗಿ ಭಾರತದ ಹತ್ತಿ ಸರಕು ತಯಾರಕರನ್ನು ರಕ್ಷಿಸಲು ಯಾವ ಕ್ರಮವನ್ನೂ ಬ್ರಿಟಿಷ್ ಅಧಿಕಾರಿ ವರ್ಗ ಕೈಗೊಳ್ಳಲಿಲ್ಲ.' ಇದರಿಂದಾಗಿ ಭಾರತದ ಕುಶಲಕರ್ಮಿಗಳು ನಿರುದ್ಯೋಗಿಗಳಾದರು. ಮತ್ತೆ ಅವರು ಕೃಷಿಯನ್ನು ಆಶ್ರಯಿಸಿದರು. "ಬ್ರಿಟಿಷ್ ಆಕ್ರಮಣಕಾರರು ಭಾರತದ ಕೈಮಗ್ಗಗಳನ್ನು ಮತ್ತು ನೂಲುವ ತಕಲಿಯನ್ನು ಮುರಿದರು. ಹಾಗೂ ಹತ್ತಿ ಮತ್ತು ಹತ್ತಿ ವಸ್ತ್ರದ ಮಾತೃ ದೇಶವನ್ನು ಜಲಪ್ರವಾಹದಲ್ಲಿ ಮುಳುಗಿಸಿದರು" ಎನ್ನುತ್ತಾನೆ ಕಾರ್ಲ್‌ಮಾರ್ಕ್ಸ್. ಪಾಶ್ಚಾತ್ಯರ ಪ್ರವೇಶಕ್ಕೆ ಮುನ್ನ ದೇಶವು ಹೊಂದಿದ್ದ ಆರ್ಥಿಕತೆ ಅನಂತರದಲ್ಲಿ ಪರಿವರ್ತನೆಗೊಂಡಿತು.



*"ಭಂಗಾರದಿಂದ ಶೃಂಗಾರ । ಮೊದಲಿನವರ ಜಂತ್ರ ತಿರುವಿ ದಿನಾ*
*ಭಂಗಾರಗಳಿಸಿ ಮಾಡಿಸಿಕೊಂಡಿದ್ದರಾ ಸಾಮಾನಾ*
*ಕೊಡಿ ಅರವಿ ಅಂತ ತೊಡತಿದ್ರ । ನೂಲ ತಗುತಿದ್ರ*
*ರೂಪಾಯಿ ಗಳಸತಿದ್ರ । ಮೊದಲಿನ ಜನಾ*
*ಹಿಡಿರೆಂತ ಬಿರಾಡಕ್ಕ ತೆಗೆದು ಕೊಡತಿದ್ರಾ ಹಣಾ"*

ಈ ಸಂದರ್ಭದಲ್ಲಿ ಗಾಂಧೀಜಿಯವರ ಮಾರ್ಗದರ್ಶನದಂತೆ ಖಾದಿಕೇಂದ್ರ, ಗ್ರಾಮೋದ್ಯೋಗ ಕೇಂದ್ರ, ಚರಕಾಸಂಘ ಮೊದಲಾದವುಗಳನ್ನು ಸ್ಥಾಪಿಸಲಾಯಿತು. ಚರಕಾ ಬಳಸಿ ನೂಲು ತೆಗೆದು, ಹಣಗಳಿಸುವ ಮೂಲಕ ದೇಶದ ದಾರಿದ್ರ್ಯವನ್ನು ಹೋಗಲಾಡಿಸಿಕೊಳ್ಳಬೇಕೆಂದು ಹಲವು ಬಗೆಯಲ್ಲಿ ಜನರಿಗೆ ತಿಳಿ ಹೇಳುವ ಪ್ರಯತ್ನ ನಡೆಯಿತು.

*"ರಾಟಿ ಮೇಟಿ ಉದ್ಯೋಗ ನೀವು*
*ರಾತ್ರಿ ಹಗಲಿ ನಡೆಸಿದರೆ*
*ಖಾತ್ರಿಯಿಂದ ಹೋಗತತಿ ಬಡತಾನ"*

ಎಂಬ ಬಲವಾದ ನಂಬಿಕೆಯನ್ನು ಜನಸಾಮಾನ್ಯರಲ್ಲಿ ಮೂಡಿಸುವ ಪ್ರಯತ್ನ ಸತತವಾಗಿ ಮಾಡಲಾಯಿತು. ಬ್ರಿಟಿಷರು ದೇಶಕ್ಕೆ ತಂದ ಆರ್ಥಿಕ ಸಂಕಷ್ಟಕ್ಕೆ ಖಾದಿಯಿಂದಲೇ ಉತ್ತರ ನೀಡಬೇಕೆಂಬುದು ಸ್ವದೇಶಿ ಚಳುವಳಿಕಾರರ ಉದ್ದೇಶವಾಗಿತ್ತು. ಬ್ರಿಟಿಷ್ ಆಡಳಿತಾವಧಿಯಲ್ಲಿ ಖಾದಿಯು ಜನಸಾಮ್ಯಾರಲ್ಲಿ ಜೀವ ಚೈತನ್ಯವನ್ನು ಪುನಶ್ಚೇತನಗೊಳಿಸಿತು. ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆಯಿಂದ ಅಧಃಪತನದತ್ತ ಸಾಗಿದ್ದ ಖಾದಿಯನ್ನು ಮರಳಿ ನೂಲುವುದಕ್ಕೆ ಭಾರತೀಯರು ತಯಾರಾದರು. ಗಾಂಧೀಜಿಯವರು ಮೂಡಿಸಿದ ಚರಕದ ಹೊಸ ಪ್ರೇರಣೆ ಜನಸಾಮಾನ್ಯರನ್ನು ವಿದೇಶೀ ಉತ್ಪನ್ನಗಳಿಂದ ವಿಮುಖಗೊಳಿಸತೊಡಗಿತು.

*"ಭಪ್ಪರೆ ನನ್ನ ಖಾದಿ ಅಂಗಿ । ಆಂಗ್ಲರಿಗೆ ಅಳಗಾಲ ನೀತಂದಿ ॥*
*ಎಷ್ಟೋ ದಿವಸ ಮೂಲಿಗೆ ಬಿದ್ದಿದ್ದೀ । ಮಹಾತ್ಮರಿಂದ ಬೈಲಿಗೆ ನೀಬಂದೀ*
*ಸಕಲರಿಗೆ ಸಿಖರ ನೀನು ಆದಿ ಸತ್ಯಾಗ್ರಹದಲ್ಲಿ ನೀನು ದುಡದೀ*
*ಸಂಚರಿಸುತ್ತಾ ಹುಲಕುಂದಕೆ ಬಂದೀ ದೇಶಭಕ್ತ ಭೀಮರಾಯಗ ವಲದೀ"*

೧೯೨೩ರಲ್ಲಿ 'ಅಖಿಲ ಭಾರತ ಖಾದಿ ಸಂಘ'ದ ಸ್ಥಾಪನೆಯಾಯಿತು. ೧೯೨೫ರಲ್ಲಿ ಗಾಂಧೀಜಿ ಮಾರ್ಗದರ್ಶನದಂತೆ 'ಅಖಿಲ ಭಾರತ ಖಾದಿ ಸಂಘ' ಹಾಗೂ 'ಪ್ರಾಂತೀಯ ಖಾದಿ ಸಂಘ'ಗಳು 'ಅಖಿಲ ಭಾರತ ಚರಕಾ ಸಂಘ'ದಲ್ಲಿ ವಿಲೀನಗೊಂಡವು. ಇದರ ಅಡಿಯಲ್ಲಿ ಪ್ರಾಂತೀಯ ಚರಕಾ ಸಂಘಗಳು ಸ್ಥಾಪನೆಗೊಂಡವು. ಇವುಗಳ ಅಧೀನದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಸಂಘಗಳು ತಲೆಯೆತ್ತಿದವು. ನೂಲುವ ನೇಯುವ ಹಾಗೂ ಖಾದಿ ಬಟ್ಟೆ ಮಾರಾಟದಲ್ಲಿ ತೀವ್ರತೆ ಕಾಣಿಸಿಕೊಂಡಿತು.

ಖಾದಿ ಪ್ರಚಾರ ಮಾಡುವ ಮೂಲಕ ಬ್ರಿಟನ್ ಬಟ್ಟೆಯ ಮಾರುಕಟ್ಟೆಯನ್ನು ತಿರಸ್ಕರಿಸಿದವು. ಮತ್ತು ಅವುಗಳ ಹಿನ್ನಡೆಗೆ ಕಾರಣವಾದವು. ಈ ಎಲ್ಲಾ ಬೆಳವಣಿಗೆಗಳಿಂದಾಗಿ ಶ್ರೀಸಾಮಾನ್ಯನಿಗೆ ದೇಶೀ ಖಾದಿ ಉದ್ಯಮದ ಕುರಿತು ಭರವಸೆಯೊಂದು ಮೂಡಿದುದು ಕಂಡುಬರುತ್ತದೆ. ವಿದೇಶೀ ವಸ್ತ್ರಗಳನ್ನು ತಿರಸ್ಕರಿಸಿ ಸ್ವದೇಶೀ ಉತ್ಪನ್ನಗಳನ್ನು ಬಳಸಬೇಕೆಂಬ ಗಾಂಧೀಜಿಯವರ ಕರೆಯಂತೆ ಜನ ನಡೆಯತೊಡಗುತ್ತಾರೆ. ಕೊಂಡುಕೊಂಡ ವಿದೇಶೀ ಬಟ್ಟೆಯು ಹರಿದ ಮೇಲೆ ಮತ್ತೆ ಅವುಗಳನ್ನು ತರುವುದನ್ನು ನಿಲ್ಲಿಸಬೇಕೆಂದು ಲಾವಣಿಕಾರ ಜನರಿಗೆ ತಿಳಿಹೇಳುತ್ತಾನೆ. ಬಟ್ಟೆಗಳನ್ನು ನೇಯುವುದನ್ನು ಬಿಟ್ಟ ಕಾರಣದಿಂದ ನಮಗಾಗುವ ನಷ್ಟ ಹಾಗೂ ಇಂಗ್ಲೆಂಡಿಗಾಗುವ ಲಾಭವನ್ನು ತಿಳಿದುಕೊಳ್ಳಬೇಕೆಂದು ಲಾವಣಿಕಾರ ವಿವರಿಸಿ ಹೇಳುತ್ತಾನೆ. ಹೀಗೆ ವಸಾಹತುಶಾಹಿ ಕಾಲಘಟ್ಟದಲ್ಲಿ ಕಂಡುಬಂದ ಆರ್ಥಿಕ ಪಲ್ಲಟವು ಸಾಮಾಜಿಕವಾಗಿ ಉಂಟುಮಾಡಿದ ಪರಿಣಾಮಗಳು ಜನಪದರ ಹಾಡುಗಳಲ್ಲಿ ವ್ಯಕ್ತವಾಗಿವೆ.

**ಶ್ವೇತಾ ಎಂ. ಬಿ.**
ನಂ. ೧೯/೨೦೨, ೬ನೇ ಮುಖ್ಯರಸ್ತೆ, ೭ನೇ ಅಡ್ಡರಸ್ತೆ, ಸರಸ್ವತಿಪುರಂ
ಮೈಸೂರು – ೫೭೦ ೦೦೯

ಐ. ಟಿ. ಕ್ಷೇತ್ರಗಳಲ್ಲಿ ತೀವ್ರ ರೀತಿಯಲ್ಲಿ ಏರುಪೇರುಗಳು ಸಂಭವಿಸಿವೆ. ಪರಿಣಾಮವಾಗಿ, ಆ ಕ್ಷೇತ್ರದ ಸೇವೆಗಳಿಗೆ ಬೇಡಿಕೆ ಇಳಿಮುಖ ಕಾಣುತ್ತಿದೆ. ಕೇವಲ ಐ. ಟಿ. ಕ್ಷೇತ್ರದಲ್ಲಿ ದುಡಿಯುವವರು ನೌಕರರಲ್ಲ, ಅವರು ದುಡಿಯುವ ಕಂಪೆನಿಯ ಶೇವಣಿದಾರರಂತೆ ವರ್ತಿಸಬೇಕು ಹಾಗೂ "ವೃತ್ತಿ ಪರತೆ"ಯ ಗುಣಲಕ್ಷಣವನ್ನು ಹೊಂದಿರಬೇಕು ಎಂಬ ಮನೋಭಾವ ಅವರಲ್ಲಿ ಬೇರೂರುವಂತೆ ಮ್ಯಾನೇಜ್‌ಮೆಂಟ್ ಪ್ರತಿನಿಧಿಗಳು ತರಬೇತಿ ನೀಡುವುದುಂಟು. ಆದ್ದರಿಂದ ಐ. ಟಿ. ಕಂಪೆನಿಗಳ ಮಾನವ ಸಂಪನ್ಮೂಲ ನೀತಿಗಳು ಇದುವರೆಗೂ ನಡೆದು ಬಂದಿರುವ ನೀತಿ ಸಮ್ಮತವಾಗಿರುವ, ಸಾಂಪ್ರದಾಯಿಕ ಕೈಗಾರಿಕೆ – ಸಿಬ್ಬಂದಿ ನಡುವಿನ ಸಂಬಂಧಗಳ ಆಧಾರದ ಮೇಲೆ ಜರುಗುತ್ತಿದ್ದ ಸಂಧಾನಗಳ ಬದಲು "ದುಡಿಮೆ ಬದುಕು ನಿರ್ವಹಣೆ"ಯಂತಹ ಕಲ್ಪನೆಗಳಿಗೆ ಹೆಚ್ಚು ಒತ್ತು ನೀಡುತ್ತಿವೆ. ೪೦ ಲಕ್ಷ ನೌಕರರು ದುಡಿಯುತ್ತಿರುವ ಐ. ಟಿ. ಕ್ಷೇತ್ರಕ್ಕೆ ಕಾರ್ಮಿಕ ಉದ್ಯೋಗ ಕಾಯ್ದೆಯಡಿ ಇರುವ ಕಾರ್ಮಿಕ ಕಾನೂನುಗಳ ಕುರಿತಂತೆ ಕಂಪೆನಿಗಳಿಗೆ ವಿನಾಯಿತಿ ನೀಡುವ ಕ್ರಮಕ್ಕೆ ಏನಾದರೂ ಅರ್ಥವಿದೆಯೇ? ಅದಕ್ಕೊಂದು ಸಮಂಜಸವಾಗಿರುವ ತರ್ಕವಿದೆಯೇ?



# ಮಾಹಿತಿ ತಂತ್ರಜ್ಞಾನ (ಐ.ಟಿ.) ಕೈಗಾರಿಕಾ ಕ್ಷೇತ್ರ: ಕಾರ್ಮಿಕರು ಸಂಘಟಿತರಾಗಲು ಇದು ಸಕಾಲ

ಇತ್ತೀಚಿನ ದಿನಗಳಲ್ಲಿ ನಮ್ಮ ದೇಶದ ಮಾಹಿತಿ ತಂತ್ರಜ್ಞಾನ ಕೈಗಾರಿಕಾ ಕ್ಷೇತ್ರವು ತಪ್ಪು ಕಾರಣಗಳಿಗಾಗಿ ಸದಾ ಸುದ್ದಿಯಲ್ಲಿದೆ. ಒತ್ತಡ ಹೇರಿ ನೌಕರರು ರಾಜೀನಾಮೆ ನೀಡುವಂತೆ ತೆಗೆದುಕೊಳ್ಳುತ್ತಿರುವ ಕ್ರಮ ಸಾರ್ವಜನಿಕರನ್ನು ರೊಚ್ಚಿಗೆಬ್ಬಿಸಿದೆ. "ಉದ್ದೇಶರಹಿತವಾಗಿ, ತಂತಾನೆ ದಂಡ ಭೀತಿಗೆ ಗುರಿಯಾಗುವುದು" ಎಂಬ ಶಬ್ದ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಒಡೆಯರಿಗೆ ಬಹಳ ಆಪ್ಯಾಯಮಾನವಾಗಿ ಬಿಟ್ಟಿರುವಂತಿದೆ. ತಮ್ಮ ನಿರೀಕ್ಷೆಗೆ ತಕ್ಕಂತೆ ಒಂದು ನಿರ್ದಿಷ್ಟ ಗುಣಮಟ್ಟಕ್ಕನುಗುಣವಾಗಿ ಕಾರ್ಯ ನಿರ್ವಹಿಸಲು ವಿಫಲರಾಗುವ ನೌಕರರನ್ನು ಕಂಪೆನಿಯವರು ನೌಕರಿಯಿಂದ ತೆಗೆದುಹಾಕುತ್ತಾರಂತೆ. ಇಂತಹ ಕ್ರಮವು ತಾವು ಪ್ರತಿವರ್ಷ ನೌಕರರ ಕಾರ್ಯ ವೈಖರಿಯನ್ನು ಮೌಲ್ಯಮಾಪನ ಮಾಡುವ ಪ್ರಕ್ರಿಯೆಯ ಒಂದು ಭಾಗವಷ್ಟೆ ಎನ್ನುತ್ತಾರೆ ಐ. ಟಿ. ಉದ್ದಿಮೆಪತಿಗಳು. ಆದರೆ ನೌಕರರು ಈ ಕ್ರಮವನ್ನು ತೀವ್ರವಾಗಿ ವಿರೋಧಿಸಿದ್ದಾರೆ. ನೌಕರರು ತಮಗೆ ಇಚ್ಛೆಯಿಲ್ಲದಿದ್ದರೂ ರಾಜೀನಾಮೆ ನೀಡುವಂತೆ ಒತ್ತಡ ಹೇರಿ ಕಾರ್ಮಿಕ ವಿರೋಧಿ ನೀತಿಯನ್ನನುಸರಿಸಲಾಗುತ್ತಿದೆ ಎಂದು ಆ ಕ್ಷೇತ್ರದ ನೌಕರರ ಸಂಘಟನೆಗಳ ಒಂದು ವಿಭಾಗ ತಕರಾರು ಎತ್ತಿದೆ. ತಮ್ಮ ನೌಕರಿಯನ್ನು ಉಳಿಸಿಕೊಳ್ಳುವ ಸಲುವಾಗಿ ಐ. ಟಿ. ನೌಕರರು ಕಾರ್ಮಿಕ ಇಲಾಖೆ ಮತ್ತು ಕಾರ್ಮಿಕ ನ್ಯಾಯಾಲಯಗಳಲ್ಲಿ ಹೋರಾಡುತ್ತಿರುವುದಂತೂ ಸರ್ವೇಸಾಮಾನ್ಯವಾಗಿಬಿಟ್ಟಿದೆ. ಕಳೆದ ಒಂದು ವರ್ಷದ ಅವಧಿಯಲ್ಲಿ ಈ ಕ್ಷೇತ್ರದ ನೌಕರರನ್ನು ಪ್ರತಿನಿಧಿಸುವ, ಯಾವುದೇ ರಾಷ್ಟ್ರಮಟ್ಟದ ಕಾರ್ಮಿಕ ಸಂಘಟನೆ ಅಂಗಸಂಸ್ಥೆಯಲ್ಲಿ ಸ್ವತಂತ್ರ ಕಾರ್ಮಿಕ ಸಂಘಟನೆಗಳು ಹಲವೆಡೆ, ಅದರಲ್ಲೂ ಬೆಂಗಳೂರು, ಚೆನ್ನೈ ಮತ್ತು ಪುಣೆಯಲ್ಲಿ ಅಸ್ತಿತ್ವಕ್ಕೆ ಬಂದಿವೆ. ಇದೇ ಐ. ಟಿ. ಕ್ಷೇತ್ರದ ನೌಕರರು ತಾವು ಎದುರಿಸುತ್ತಿರುವ ಸಮಸ್ಯೆಗಳು ಮತ್ತು ಹಕ್ಕೊತ್ತಾಯಗಳಿಗೆ ಈ ನೌಕರರ ಸಂಘಟನೆಗಳು ದನಿ ನೀಡಲು ಮುಂದಾಗಿವೆ. ಸದ್ಯದ ಮಟ್ಟಿಗೆ ಇವು ಶಕ್ತಿಯುತವಾಗಿ ಬೆಳೆಯಲು ಸಂಘಟನಾತ್ಮಕ ಸ್ವರೂಪ ಪಡೆಯುವುದಲ್ಲದೆ ನೋಂದಾಯಿಸಿಕೊಳ್ಳಲು ಶ್ರಮಿಸುತ್ತಿವೆ ಎಂಬುದೇನೋ ಸರಿಯೆ. ಆದರೆ ಕಂಪೆನಿ ಮಟ್ಟದಲ್ಲಿ ಕಾರ್ಮಿಕ ಸಂಘಟನೆಗಳನ್ನು ಅಸ್ತಿತ್ವಕ್ಕೆ ತರಲು ಸಾಧ್ಯವಾಗಿಲ್ಲ. ಅದೇನೆ ಇರಲಿ, ಇಂತಹ ಪ್ರಯತ್ನಗಳಿಂದಾಗಿ ಇಂದಲ್ಲ ನಾಳೆ ಕಂಪೆನಿ ಮಟ್ಟದಲ್ಲೂ ಕಾರ್ಮಿಕ ಸಂಘಟನೆಗಳು ಅಸ್ತಿತ್ವಕ್ಕೆ ಬರಲಿವೆ ಎಂದು ಈ ಕ್ಷೇತ್ರದಲ್ಲಿನ ಕೆಲವು ಆಗುಹೋಗುಗಳ ಆಧಾರದ ಮೇಲೆ ಹೇಳಬಹುದು.

**ಸತ್ಯಾನಂದ್**

ಇಂದು ನಮ್ಮ ದೇಶದ ಐ. ಟಿ. ಉದ್ದಿಮೆ ಕ್ಷೇತ್ರದಲ್ಲಿ ೪೦ ಲಕ್ಷ ನೌಕರರಿದ್ದಾರೆ. ಅದರ ಒಟ್ಟು ವಹಿವಾಟಿನ ಮೊತ್ತ ೧೫೦ ಬಿಲಿಯನ್ ಅಮೆರಿಕನ್ ಡಾಲರ್‌ಗಳನ್ನು ಮೀರುವಷ್ಟಿದೆ. ದೇಶದ ಸಮಗ್ರ ದೇಶೀಯ ಉತ್ಪಾದನೆಗೆ (ಜಿಡಿಪಿ) ಅದರ ಕೊಡುಗೆ ಶೇಕಡ ೮ರಷ್ಟಿದೆ. ಟಿ. ಸಿ. ಎಸ್., ಇನ್ಫೋಸಿಸ್, ವಿಪ್ರೋ ಮತ್ತು ಕಾಗ್ನಿಸೆಂಟ್‌ನಂತಹ ಬೃಹತ್ ಸಂಸ್ಥೆಗಳ ಉತ್ಪಾದನೆಯ ಮೌಲ್ಯ ಮತ್ತು ಗಳಿಸಿದ ಲಾಭದ ಮೊತ್ತದಲ್ಲಿ ವಾರ್ಷಿಕವಾಗಿ ಶೇಕಡ ೧೫ರಿಂದ ಶೇಕಡ ೨೦ರಷ್ಟು ಹೆಚ್ಚಳ ಕಾಣುತ್ತೇವೆ. ಈ ಕಳೆದ ಎರಡು ದಶಕಗಳಲ್ಲಿ ಈ ಉದ್ದಿಮೆ ಸ್ಥಾಪಿಸಿರುವ ಅಭಿವೃದ್ಧಿ ನಿಜಕ್ಕೂ ಮಹತ್ತರವಾದ್ದು. ಹೇಗೂ ನಮ್ಮೀ ಭಾರತದಲ್ಲಿ ತರಬೇತಿ ಪಡೆದಿರುವ, ಕೌಶಲ್ಯವುಳ್ಳ ಎಂಜಿನಿಯರುಗಳಿದ್ದಾರೆ; ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಬಲ್ಲವರಿದ್ದಾರೆ; ಅದಕ್ಕಿಂತಲೂ ಮುಖ್ಯವಾಗಿ ಕಡಿಮೆ ವೇತನ ಪಡೆದು ದುಡಿಯುವವರಿಗೇನೂ ಕೊರತೆಯಿಲ್ಲವಲ್ಲ! ಸಂವಹನ ತಂತ್ರಜ್ಞಾನ ಕ್ಷೇತ್ರದಲ್ಲಾಗಿರುವ ಬೆಳವಣಿಗೆಯಿಂದಾಗಿ ಪ್ರಾರಂಭದಲ್ಲಿ ವಿದೇಶಗಳು, ಅದರಲ್ಲೂ ಅಮೆರಿಕದ ಕಂಪೆನಿಗಳ ಅಗತ್ಯತೆಗಳನ್ನು ಮಾತ್ರ ಪೂರೈಸುತ್ತಿದ್ದ ಐ. ಟಿ. ಕಂಪನಿ ಸಂಸ್ಥೆಗಳು ಕ್ರಮೇಣ ಸ್ಥಳೀಯವಾಗಿಯೇ ನೌಕರರನ್ನು ನೇಮಿಸಿಕೊಂಡು ಆ ದೇಶದ ಕಂಪೆನಿಗಳ ಅಗತ್ಯತೆಗಳನ್ನು ಇಲ್ಲಿಂದಲೇ ಪೂರೈಸಲು, ಎಂದರೆ ರಫ್ತು ಮಾಡಲು ಮುಂದಾದವು. ಪರಿಣಾಮವಾಗಿ, ಈ ಸಂಸ್ಥೆಗಳು ಬೃಹತ್ ಮೊತ್ತದ ವರಮಾನವನ್ನು ಗಳಿಸಲಾರಂಭಿಸಿದವು. ಜೊತೆ ಜೊತೆಗೆ, ಸಾವಿರಾರು ಪದವೀಧರ ಎಂಜನಿಯರುಗಳಿಗೆ ಅತ್ಯಗತ್ಯವಾಗಿದ್ದ ಉದ್ಯೋಗಾವಕಾಶಗಳಿಗೂ ಬಾಗಿಲು ತೆರೆದಂತಾದದ್ದು ಗಮನಾರ್ಹ ಸಂಗತಿ. ಸಾವಿರಾರು ಉದ್ಯೋಗಿಗಳನ್ನು ನೇಮಿಸಿಕೊಂಡದ್ದು, ಬೃಹತ್ ಮೊತ್ತದ ಸಂಪತ್ತಿನ ಸೃಷ್ಟಿಗೆ, ಇವೆರಡಕ್ಕೂ ಐ. ಟಿ. ಕ್ಷೇತ್ರದ ಕೊಡುಗೆ ಬಹಳ ಪ್ರಮುಖವಾದ್ದು. ಈ ಅಂಶವನ್ನು ನಮ್ಮ

ರಾಜಕಾರಣಿಗಳು, ಅರ್ಥಾತ್ ರಾಜಕೀಯ ವಲಯದ ಪ್ರಭಾವಿ ಕುಳಗಳು ಗಮನಿಸದೇ ಇರುತ್ತಾರೆಯೇ! ತೆರಿಗೆ ವಲಯದವರು ವಿನಾಯಿತಿ ನೀಡಿ, ಪುಕ್ಕಟೆಯಾಗಿ ಅಥವಾ ಅತಿ ಕಡಿಮೆ ದರದಲ್ಲಿ ನೂರಾರು, ಸಾವಿರಾರು ಎಕರೆ ಭೂಮಿ ನೀಡುವುದು ಮತ್ತು ಕಾರ್ಮಿಕ ಕಾನೂನುಗಳು ಅನ್ವಯವಾಗದಂತೆ ನಿಯಮಗಳನ್ನು ರೂಪಿಸುವುದು ಇವೇ ಮುಂತಾದ ಸವಲತ್ತುಗಳನ್ನು ಐ. ಟಿ. ಸಂಸ್ಥೆಗಳಿಗೆ ನೀಡಲು ಹಲವಾರು ರಾಜ್ಯಗಳ ಮುಖ್ಯಮಂತ್ರಿಗಳು ಐ. ಟಿ. ಸಂಸ್ಥೆಗಳ ಒಡೆಯರ ಮುಂದೆ ನಾ ಮುಂದು ತಾ ಮುಂದು ಎಂದು ಸಾಲು ಸಾಲಾಗಿ ನಿಲ್ಲುವುದು ಸಾಮಾನ್ಯ ದೃಶ್ಯವಾಗಿಬಿಟ್ಟಿದೆ.

ಪ್ರತಿವರ್ಷವೂ ಅಸಾಮಾನ್ಯವಾದ ರೀತಿಯಲ್ಲಿ ಲಾಭ ಗಳಿಸುತ್ತಿರುವುದು ಐ. ಟಿ. ಉದ್ಯಮದ ಇನ್ನೊಂದು ಗಮನಾರ್ಹ ಲಕ್ಷಣ. ಇದು ಭವಿಷ್ಯದ ಬಗ್ಗೆ ಅವಾಸ್ತವಿಕ ನಿರೀಕ್ಷೆಗಳಿಗೆ ಎಡೆಮಾಡಿಕೊಡುತ್ತದೆ, ಅಷ್ಟೆ. ಉತ್ಪಾದನಾ ಕ್ಷೇತ್ರವು ಸಾಮಾನ್ಯವಾಗಿ ಶೇಕಡ ೧೦ರಿಂದ ಶೇಕಡ ೧೨ರಷ್ಟು ಲಾಭ ಗಳಿಸಿ ಅಷ್ಟಕ್ಕೆ ಮಾತ್ರ ತೃಪ್ತಿಪಡುತ್ತವೆ. ಆದರೆ ಐ. ಟಿ. ಕಂಪೆನಿಗಳ ಲಾಭದ ದರ ಸುಮಾರು ಶೇಕಡ ೨೦ರಷ್ಟಿರುತ್ತದೆ ಎಂದಾಗ ಇದನ್ನು ದುರಾಸೆಯಿಂದ ಗಳಿಸಿದ ಅಥವಾ ಮಿತಿ ಮೀರಿದ ಲಾಭವಷ್ಟೆ ಎಂದು ಕರೆಯುವುದರಲ್ಲಿ ತಪ್ಪೇನಿದೆ? ಸಾರ್ವಜನಿಕ ಗ್ರಹಿಕೆಗೆ ವಿರುದ್ಧವಾದ ಒಂದು ಅಂಶವಿದೆ. ಅದೆಂದರೆ ಕಡಿಮೆ ವೇತನ ಪಡೆಯುವ ಕಾರ್ಮಿಕರೇ ದೇಶದ ಐ. ಟಿ. ಕಂಪೆನಿಗಳ ಸ್ಥಾಪನೆಗೆ ಮುಖ್ಯ ಕಾರಣ. ಈ ಕಂಪೆನಿಗಳು ತಮ್ಮ ವರಮಾನದ ಶೇಕಡ ೫೦ರಷ್ಟು ಭಾಗವನ್ನು ನೌಕರರ ವೇತನ ಮತ್ತು ಇತರ ಬಾಬ್ತುಗಳಿಗೆ ವ್ಯಯಿಸುತ್ತವೆ. ಚಾರಿತ್ರಿಕವಾಗಿ ನೋಡಿದರೆ ಈ ಕಂಪೆನಿಗಳು ಗಳಿಸುವ ಒಟ್ಟು ವರಮಾನ ಮತ್ತು ಲಾಭಕ್ಕೂ ಅವುಗಳಲ್ಲಿ ದುಡಿಯುವ ನೌಕರರ ಸಂಖ್ಯೆಗೂ ನೇರ, ಅಂದರೆ ಅನುಪಾತ ಆಧಾರಿತ ಸಂಬಂಧವಿದೆ. ಅದೇನೇ ಇರಲಿ, ಇತ್ತೀಚೆಗೆ ಯೂರೋಪ್ ಮತ್ತು ಅಮೆರಿಕಾದ ಎಲ್ಲ ಕಾಲ್‌ಸೆಂಟರ್‌ಗಳು ಹೆಚ್ಚಿನ ಮಟ್ಟದಲ್ಲಿ ಯಾಂತ್ರೀಕರಣ ಗೊಳ್ಳುತ್ತಿರುವ ಹಾಗೂ ಇತರ ಕಾರಣಗಳಿಂದಾಗಿ ಐ. ಟಿ. ಕ್ಷೇತ್ರಗಳಲ್ಲಿ ತೀವ್ರ ರೀತಿಯಲ್ಲಿ ಏರುಪೇರುಗಳು ಸಂಭವಿಸಿವೆ. ಪರಿಣಾಮವಾಗಿ, ಆ ಕ್ಷೇತ್ರದ ಸೇವೆಗಳಿಗೆ ಬೇಡಿಕೆ ಇಳಿಮುಖ ಕಾಣುತ್ತಿದೆ. ಕೇವಲ ಐ. ಟಿ. ಕ್ಷೇತ್ರದಲ್ಲಿ ದುಡಿಯುವವರು ನೌಕರರಲ್ಲ, ಅವರು ದುಡಿಯುವ ಕಂಪೆನಿಯ ಠೇವಣಿದಾರರಂತೆ ವರ್ತಿಸಬೇಕು ಹಾಗೂ "ವೃತ್ತಿ ಪರತೆ"ಯ ಗುಣಲಕ್ಷಣವನ್ನು ಹೊಂದಿರಬೇಕು ಎಂಬ ಮನೋಭಾವ ಅವರಲ್ಲಿ ಬೇರೂರುವಂತೆ ಮ್ಯಾನೇಜ್‌ಮೆಂಟ್ ಪ್ರತಿನಿಧಿಗಳು ತರಬೇತಿ ನೀಡುವುದುಂಟು. ಆದ್ದರಿಂದ ಐ. ಟಿ. ಕಂಪೆನಿಗಳ ಮಾನವ ಸಂಪನ್ಮೂಲ ನೀತಿಗಳು ಇದುವರೆಗೂ ನಡೆದುಬಂದಿರುವ ನೀತಿ ಸಮ್ಮತವಾಗಿರುವ, ಸಾಂಪ್ರದಾಯಿಕ ಕೈಗಾರಿಕೆ – ಸಿಬ್ಬಂದಿ ನಡುವಿನ ಸಂಬಂಧಗಳ ಆಧಾರದ ಮೇಲೆ ಜರುಗುತ್ತಿದ್ದ ಸಂಧಾನಗಳ ಬದಲು "ದುಡಿಮೆ ಬದುಕು ನಿರ್ವಹಣೆ"ಯಂತಹ ಕಲ್ಪನೆಗಳಿಗೆ ಹೆಚ್ಚು ಒತ್ತು ನೀಡುತ್ತಿವೆ. ೪೦ ಲಕ್ಷ ನೌಕರರು ದುಡಿಯುತ್ತಿರುವ ಐ. ಟಿ. ಕ್ಷೇತ್ರಕ್ಕೆ ಕಾರ್ಮಿಕ ಉದ್ಯೋಗ ಕಾಯ್ದೆಯಡಿ ಇರುವ ಕಾರ್ಮಿಕ ಕಾನೂನುಗಳ ಕುರಿತಂತೆ ಕಂಪೆನಿಗಳಿಗೆ ವಿನಾಯಿತಿ ನೀಡುವ ಕ್ರಮಕ್ಕೆ ಏನಾದರೂ ಅರ್ಥವಿದೆಯೇ? ಅದಕ್ಕೊಂದು ಸಮಂಜಸವಾಗಿರುವ ತರ್ಕವಿದೆಯೇ?

ನಮ್ಮ ದೇಶದ ಬೃಹತ್ ಐ. ಟಿ. ಕಂಪೆನಿಗಳು ತಮ್ಮ ಇತಿಹಾಸದಲ್ಲಿ ಮೊಟ್ಟ ಮೊದಲ ಬಾರಿಗೆ ತಮ್ಮ ಸಂಸ್ಥೆಗಳ ಬೆಳವಣಿಗೆ ಮತ್ತು ಅವುಗಳಲ್ಲಿ ದುಡಿಯುವ ನೌಕರರ ಸಂಖ್ಯೆ ಇವೆರಡಕ್ಕೂ ಪರಸ್ಪರ ಸಂಬಂಧವಿಲ್ಲ ಎಂಬ ಪರಿಕಲ್ಪನೆಯನ್ನು ರೂಢಿಗೆ ತರುವಲ್ಲಿ ಯಶಸ್ವಿಯಾಗಿವೆಯೆಂದೇ ಹೇಳಬೇಕು. ಉದಾಹರಣೆಗೆ, ಕಾಗ್ನಿಸೆಂಟ್ ಕಂಪೆನಿಯನ್ನೇ ತೆಗೆದುಕೊಳ್ಳೋಣ. ಆ ಕಂಪೆನಿಯು ೨೦೧೭ರಲ್ಲಿ ೨೦೦ ನೌಕರರನ್ನು ಕೆಲಸದಿಂದ ತೆಗೆದುಹಾಕಿ ಶೇಕಡ ೧೦ರಷ್ಟು ಬೆಳವಣಿಗೆಯಾಗಿದೆ ಎಂದು ದಾಖಲಿಸಿದೆ. ಟಿ. ಸಿ. ಎಸ್. ಮತ್ತು ಇನ್ಫೋಸಿಸ್ ಸಹ ಇದೇ ಮಾದರಿಯನ್ನು ಅನುಸರಿಸುವ ಎಲ್ಲ ಸೂಚನೆಗಳೂ ಇವೆ.

ನೌಕರರ ಭವಿಷ್ಯಕ್ಕೆ ಅಪಾಯ ತಂದೊಡ್ಡುವಂತಹ ಕ್ರಮ ಇದು. ಏಕೆಂದರೆ ಮುಂದಿನ ದಿನಗಳಲ್ಲಿ ಇನ್ನು ಮುಂದೆ ನೌಕರರ ಸಂಖ್ಯೆಯನ್ನು ಐ. ಟಿ. ಕ್ಷೇತ್ರದಲ್ಲಿ ಕಡಿತಗೊಳಿಸುವುದು ಮಾಮೂಲಿನ ಸಂಗತಿಯಾಗಲಿದೆ. ಈ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಒಂದು ಸಂದೇಶವಂತೂ ನಿಚ್ಚಳವಾಗಿ ಎದ್ದು ಕಾಣುತ್ತಿದೆ. ತಮ್ಮ ಕಂಪೆನಿಯ ಅತ್ಯಧಿಕ ಲಾಭಗಳಿಕೆಯನ್ನು ಇನ್ನೂ ಹೆಚ್ಚಿಸಿಕೊಳ್ಳುವ ದಿಶೆಯಲ್ಲಿ ಆಯಾ ಸಂಸ್ಥೆಗಳ ಒಡೆಯರು ನೇರವಾಗಿ ಇಲ್ಲವೇ ಪರೋಕ್ಷವಾಗಿ ಕಾರ್ಮಿಕರು, ತಮ್ಮ ಇಷ್ಟವಿಲ್ಲದಿದ್ದರೂ, ನೌಕರರಿಗೆ ರಾಜೀನಾಮೆ ನೀಡುವ ಪರಿಸ್ಥಿತಿ ಉಂಟುಮಾಡುತ್ತಾರೆ. ಆ ನಿಟ್ಟಿನಲ್ಲಿ ಅವರ ಮೇಲೆ ಒತ್ತಡ ತರುತ್ತಾರೆ. ಉದ್ದಿಮೆದಾರರ ಈ ಕುತಂತ್ರಕ್ಕೆ ಮುಗ್ಧ ನೌಕರರು ಬಲಿಯಾಗಿ ಬೀದಿಪಾಲಾಗುತ್ತಿರುವುದು ಶೋಚನೀಯ ಸಂಗತಿ. ಇಲ್ಲಿ ಇಂತಹ ಪರಿಸ್ಥಿತಿಯಲ್ಲೂ ಒಂದು ಆಶಾದಾಯಕ ಬೆಳವಣಿಗೆ ಕಂಡುಬರುತ್ತಿದೆ. ಅದೆಂದರೆ ಹೀಗೆ ಬಲಿಪಶುಗಳಾಗುವ, ಲೇ–ಆಫ್‌ನಂತಹ ಕಾರ್ಮಿಕ ವಿರೋಧಿ ಕ್ರಮಗಳಿಗೆ ಗುರಿಯಾದ ನೌಕರರು ಸಂಘಟಿತರಾಗಿ ಕೈಗಾರಿಕಾ ವಿವಾದ ಕಾಯಿದೆಯಡಿ (Industrial Disputes Act) ಇರುವ ನಿಬಂಧನೆಗಳನ್ನು ಬಳಸಿಕೊಂಡು ತಮ್ಮ ಹಕ್ಕುಗಳಿಗಾಗಿ ಹೋರಾಡಲು ಪ್ರಾರಂಭಿಸಿದ್ದಾರೆ. ಅಂತೆಯೇ ತಮ್ಮ ಸಿಬ್ಬಂದಿಗಳ ಕಾರ್ಯವೈಖರಿ ಕುರಿತು ಮೌಲ್ಯಮಾಪನ ಮಾಡುವಾಗ, ಬಡ್ತಿ ನೀಡುವಾಗ ಅಥವಾ ಕ್ಷುಲ್ಲಕ ಕಾರಣ ನೀಡಿ ಶಿಸ್ತು ಕ್ರಮ ಜರುಗಿಸುವಾಗ ಉದ್ಯಮಪತಿಗಳು ಅನುಸರಿಸುವ ಸ್ವೇಚ್ಛಾನುಸಾರವಾದ ಧೋರಣೆಯ ವಿರುದ್ಧ ಹೋರಾಡುವುದು, ಆ ಮೂಲಕ ತಮ್ಮ ಕಾನೂನುಬದ್ಧ ಹಕ್ಕುಗಳನ್ನು ರಕ್ಷಿಸಿಕೊಳ್ಳುವುದು ನೌಕರರ ಆದ್ಯತೆಯ ಕರ್ತವ್ಯವಾಗಬೇಕು. ಒತ್ತಡ ಹೇರಿ ನೌಕರರಿಂದ ರಾಜೀನಾಮೆ ಪಡೆಯುವುದರ ವಿರುದ್ಧವೂ ನಿರಂತರ ಹೋರಾಟಗಳು ಅನಿವಾರ್ಯವೇ.

ಸಾಫ್ಟ್‌ವೇರ್ ಮತ್ತು ಸೇವಾ ಕಂಪೆನಿಗಳ ರಾಷ್ಟ್ರೀಯ ಸಂಘವು (NASSCOM) ತರುತ್ತಿರುವ ಒತ್ತಡಕ್ಕೆ ಮಣಿದು ಕರ್ನಾಟಕವೂ ಸೇರಿದಂತೆ ಹಲವಾರು ರಾಜ್ಯ ಸರ್ಕಾರಗಳು ಕೇಂದ್ರೀಯ ಕಾರ್ಮಿಕ ಸಂಘಟನೆಗಳೊಂದಿಗೆ, ನೌಕರರೊಂದಿಗೆ ಸಮಾಲೋಚನೆ ನಡೆಸದೆ ಏಕಪಕ್ಷೀಯವಾಗಿ ೨೦೧೩ರಲ್ಲಿ ಐ. ಟಿ. ಉದ್ಯಮದವರು ೨೦೧೮ರವರೆಗೆ ಕೈಗಾರಿಕಾ ಉದ್ಯೋಗ ಕಾಯ್ದೆಯ ಕಾಯಂ ಸೂಚನೆಗಳನ್ನು (Industrial employment Standing Order) ಪಾಲಿಸುವ ಅವಶ್ಯಕತೆ ಇಲ್ಲ ಎಂದು ವಿನಾಯಿತಿ ನೀಡಿವೆ. ಇಂತಹ ಕಾರ್ಮಿಕ ವಿರೋಧ ಕ್ರಮಗಳನ್ನು ತೆಗೆದುಕೊಳ್ಳುವಲ್ಲಿ ಕೇಂದ್ರ ಸರ್ಕಾರವೂ ಹಿಂದೆ ಬಿದ್ದಿಲ್ಲ. ಇದೇ ಕಾಯ್ದೆಗೆ ಯಾವುದೇ ಸುಳಿವನ್ನೂ ನೀಡದೆ 'ಕಾಲಮಿತಿ ಉದ್ಯೋಗ' ಎಂಬ ಹೊಸ ಕಲ್ಪನೆಯನ್ನು ನಿರೂಪಿಸಿ ಅದನ್ನು ಕಾರ್ಯರೂಪಕ್ಕೆ ತರಲು ಅನುವಾಗುವಂತೆ ತಿದ್ದುಪಡಿಯೊಂದನ್ನು ತಂದಿದೆ. ಈ ತಿದ್ದುಪಡಿ ಐ. ಟಿ. ಉದ್ದಿಮೆಪತಿಗಳ ಬೇಡಿಕೆಗಳಿಗೆ ಅನುಗುಣವಾಗಿದೆ. ಇದರರ್ಥ ಇಷ್ಟೆ: ಇನ್ನು ಮುಂದೆ 'ಕಾಯಂ ಹುದ್ದೆ'ಯ ಬದಲು ನೌಕರರನ್ನು ಅಗತ್ಯವಿದ್ದಾಗ ಕೆಲಸಕ್ಕೆ ನೇಮಿಸಿಕೊಳ್ಳುವ, ಬೇಡವೆನಿಸಿದಾಗ ಮನೆಗೆ ಕಳಿಸುವ ಪದ್ಧತಿ ಜಾರಿಗೆ ಬರುವ ದಿನಗಳು ದೂರವಿಲ್ಲ. ದುಡಿಮೆ ಒಂದು ಸಹವರ್ತಿ ವಿಷಯವಾಗಿರುವುದರಿಂದ ಐ. ಟಿ. ಉದ್ದಿಮೆಯಲ್ಲಿ 'ಕಾಲಮಿತಿ ಉದ್ಯೋಗ'ವನ್ನು ಜಾರಿಗೆ ತರಲು ಬಯಸುವ ರಾಜ್ಯ ಸರ್ಕಾರಗಳು ಈಗಿರುವ ಮಾದರಿ ಕಾಯಂ ಸೂಚನೆಗಳಿಗೆ ಇಂಥ ತಿದ್ದುಪಡಿಯನ್ನು ಮಂಡಿಸುವ ಅಗತ್ಯವಿದೆ. ಈಗಾಗಲೇ ಹಲವಾರು ಕೈಗಾರಿಕಾ ಘಟಕಗಳು ಮತ್ತು ಚೇಂಬರ್ ಆಫ್ ಕಾಮರ್ಸ್‌ನಂತಹ ಸಂಸ್ಥೆಗಳು ಈ ಕುರಿತು ಅಹವಾಲುಗಳನ್ನು ಸಲ್ಲಿಸಿವೆ. ಅಲ್ಲದೆ, ರಾಜ್ಯ ಸರ್ಕಾರಗಳ ಮೇಲೆ ಒತ್ತಡ ಹೇರುತ್ತಿವೆ. ಈ ತಿದ್ದುಪಡಿ ಲಕ್ಷಾಂತರ ಎಂಜಿನಿಯರಿಂಗ್ ವಿದ್ಯಾರ್ಥಿಗಳ ಭವಿಷ್ಯಕ್ಕೆ ಕಂಟಕಪ್ರಾಯವಾಗುವುದಂತೂ ಕಟ್ಟಿಟ್ಟ ಬುತ್ತಿ. ನಮ್ಮ ದೇಶದಲ್ಲೀಗ ಕಾರ್ಮಿಕ ಸಂಘಟನೆಗಳಿಗೆ ಮಾನ್ಯತೆ ನೀಡಲೇಬೇಕೆಂಬ ಕಾನೂನು ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ಮೇಲೆ ಪ್ರಸ್ತಾಪಿಸಿದ ತಿದ್ದುಪಡಿಯೂ ಅಂಗೀಕೃತವಾದರೆ ಕಾರ್ಮಿಕ ಸಂಘಟನೆಗಳು, ಅದರಲ್ಲೂ ಮುಖ್ಯವಾಗಿ ಐ. ಟಿ. ಕ್ಷೇತ್ರದ ನೌಕರರು ಅತ್ಯಂತ ಗಂಭೀರ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಉದಾಹರಣೆಗೆ, ಉದ್ದಿಮೆಯೊಂದರಲ್ಲಿರುವ ಎಲ್ಲ ನೌಕರರೂ ಅಲ್ಲಿನ ಕಾರ್ಮಿಕ ಸಂಘಟನೆಯ ಸದಸ್ಯರಾಗುತ್ತಾರೆ ಎಂದಿಟ್ಟುಕೊಳ್ಳೋಣ. ಆದರೂ ಆ ಸಂಘಟನೆಗೆ ಉದ್ದಿಮೆದಾರರು ಮಾನ್ಯತೆಯನ್ನು ನಿರಾಕರಿಸಲು ಕಾನೂನುಬದ್ಧವಾಗಿ ಅವಕಾಶವಿದೆ. ಎಂದೇ ದೇಶದ ಇಡೀ ಕಾರ್ಮಿಕವರ್ಗದ ಹಿತದೃಷ್ಟಿಯಲ್ಲಿ ಐ. ಟಿ. ಕ್ಷೇತ್ರದ ನೌಕರರು ತಮ್ಮ ಹಕ್ಕುಗಳ ಕುರಿತಂತೆ ಜಾಗೃತರಾಗಿ ಒಟ್ಟುಗೂಡಬೇಕು. ಇಂತಹ ಎಲ್ಲ ಕಾರ್ಮಿಕ ವಿರೋಧಿ ನೀತಿಗಳನ್ನು ಪ್ರತಿಭಟಿಸಿ ಪ್ರಭುತ್ವದ ವಿರುದ್ಧ ಮಾತ್ರವಲ್ಲ, ಖಾಸಗಿ ಉದ್ಯಮಿಗಳ ವಿರುದ್ಧವೂ ಹೋರಾಡಲು ಈ ಕೂಡಲೇ ಸಜ್ಜಾಗುವುದು ಅತ್ಯಗತ್ಯವಾಗಿದೆ.

**ಸತ್ಯಾನಂದ್**
ಘಾಟೆ ಭವನ, ವೈಯಾಲಿಕಾವಲ್, ಬೆಂಗಳೂರು – ೫೬೦ ೦೦೩




# ಕೌಟುಂಬಿಕ ದೌರ್ಜನ್ಯದ ಬೆಂಕಿಯಿಂದ ಎದ್ದು ಬಂದ ಅಗ್ನಿ ದಿವ್ಯ - ಫ್ಲೇವಿಯಾ ಆಗ್ನೇಸ್

ಡಾ॥ **ಜಯಲಕ್ಷ್ಮಿ :** ನಿಮ್ಮ ಆತ್ಮಕಥೆ, ಛಿದ್ರಛಿದ್ರವಾದ ಜೀವನಗಳನ್ನು ಮತ್ತೆ ಕಟ್ಟಿಕೊಡುವ "ನನ್ನಕಥೆ... ನಮ್ಮಕಥೆ" ಓದಿದ್ದೇನೆ. ಬದುಕನ್ನು ನೀವು ಎದುರಿಸಿರುವ ರೀತಿ ಸ್ಫೂರ್ತಿದಾಯಕವಾಗಿದೆ. ನೀವು ನಡೆದು ಬಂದ ಈ ದಾರಿಯ ಬಗ್ಗೆ ನಿಮಗೆ ಈಗ ಏನೆನಿಸುತ್ತದೆ?

**ಫ್ಲೇವಿಯಾ ಆಗ್ನೇಸ್ :** "ಮನೆಯಿಂದ ಹೊರಗೆ ಬರೋದು ನನಗೆ ಎಷ್ಟೊಂದು ಕಷ್ಟ ಆಯ್ತಲ್ಲ ಅನಿಸುತ್ತೆ. ಈಗ ನನ್ನ ಹತ್ತಿರ ನೆರವಿಗಾಗಿ ಬರುವ ಹೆಂಗಸರನ್ನು ನೋಡಿದಾಗ ನನಗೆ ನನ್ನ ಹಿಂದಿನ ಜೀವನದ ನೆನಪೇ ಬರುತ್ತದೆ. ನಾನೂ ಸಹ ಇವರ ಹಾಗೆ ಇದ್ನಲ್ಲಾ ಅಂತ. ಇಪ್ಪತ್ತು, ಮೂವತ್ತು, ನಲವತ್ತು ವರ್ಷ ವಯಸ್ಸಿನ ಹಲವಾರು ಹೆಂಗಸರು ಕೌಟುಂಬಿಕ ದೌರ್ಜನ್ಯಗಳನ್ನು ವರ್ಷಗಟ್ಟಲೆ ಅನುಭವಿಸಿ ದಿಕ್ಕು ತೋಚದೆ ನನ್ನ ಬಳಿ ಬರುತ್ತಾರೆ. ಮಕ್ಕಳಿದ್ದಾರೆ ಏನು ಮಾಡುವುದು ಅಂತ ಸಂಕಟಪಡ್ತಾರೆ. ದೈಹಿಕವಾಗಿಯೂ ಮಾನಸಿಕವಾಗಿಯೂ ನೊಂದು-ನೊಂದು ಕುಗ್ಗಿ ಹೋಗಿರುತ್ತಾರೆ. ಮಾನಸಿಕ ಸ್ತಿಮಿತವನ್ನು ಕಳೆದುಕೊಳ್ಳುವ ಅಂಚಿಗೆ ಬಂದು ತಲುಪಿರುತ್ತಾರೆ. ನಾನು ಹೊರಗೆ ಬರದೆ ಇದ್ದಿದ್ದರೆ ನಾನು ಸಹ ಹಾಗೆ ಆಗ್ತಿದ್ದೆನಲ್ಲ ಅನ್ನಿಸುತ್ತೆ. ನಾನು ಮಹಿಳಾ ಸಂಘಟನೆಗಳ ಜೊತೆ ಸೇರಿಕೊಂಡಿದ್ದರಿಂದ ಹೊರಗೆ ಬಂದೆ.

**ಡಾ॥ ಗಾಯಿತ್ರಿ :** ನಿಮ್ಮ ಜೀವನದ ಅನುಭವ ಬೇರೆಯವರಿಗೆ ಯಾವ ರೀತಿಯಲ್ಲಿ ಸಹಾಯ ಮಾಡುತ್ತಿದೆ?

**ಫ್ಲೇ :** ನಾನು ನನ್ನ ಜೀವನದ ಅನುಭವದಿಂದ ಎಷ್ಟೋ ಪಾಠಗಳನ್ನು ಕಲಿತ್ತಿದ್ದೇನೆ. ಕಾನೂನು ವ್ಯವಸ್ಥೆ ಹೇಗಿದೆ ಎಂತೆಲ್ಲಾ - ಈಗ ನಮ್ಮ ಸಂಘಟನೆ - 'ಮಜ್ಲಿಸ್' ಇದೆಯಲ್ಲಾ, ಅದರಿಂದ ನಾವು ಬಹಳಷ್ಟು ಮಾಹಿತಿ ಸಂಗ್ರಹಿಸುತ್ತಿದ್ದೇವೆ. ಅದನ್ನು ಕಷ್ಟದಲ್ಲಿರುವ ಹೆಣ್ಣುಮಕ್ಕಳ ಜೊತೆ ಹಂಚಿಕೊಳ್ಳುತ್ತೇವೆ. ನಾನು ಎಷ್ಟೊಂದು ದುರ್ಬಲಳಾಗಿದ್ದೆ. ಹಾಗಿರುವುದರ ಬದಲು ಇತರರು ಈಗ ಸ್ವಲ್ಪ ಬಲ ಪಡೆದುಕೊಳ್ಳಬಹುದು. ಅವರ ಪ್ರಕರಣಗಳಲ್ಲಿ ಹೇಗೆ ಕಾರ್ಯತಂತ್ರ ರೂಪಿಸಬೇಕು, ಕಾನೂನು, ಕಾಯ್ದೆಗಳನ್ನು ಹೇಗೆ ಬಳಸಿಕೊಳ್ಳಬೇಕು ಎಂದು ಯೋಚಿಸಿದಾಗ, ನಮ್ಮ ಅನುಭವಗಳನ್ನು ಹಂಚಿಕೊಳ್ಳುವಾಗ ಇತರರಿಗೆ ತುಂಬ ಧೈರ್ಯ ಬರುತ್ತದೆ.

ಅತ್ಯಾಚಾರ ಸಂತ್ರಸ್ತೆಯರು ಧೈರ್ಯವಾಗಿ ಹೋರಾಡಲು, ನಾವು ಅವರ ಜೊತೆ ನಿಲ್ಲುತ್ತಿದ್ದೇವೆ. ೨೦೧೧ರಲ್ಲಿ ನಾವು "ಅತ್ಯಾಚಾರ ಸಂತ್ರಸ್ತೆಯರಿಗೆ ಬೆಂಬಲ ಕಾರ್ಯಕ್ರಮ" ಎಂಬ ಒಂದು ಕಾರ್ಯಕ್ರಮ ಪ್ರಾರಂಭ ಮಾಡಿದ್ವಿ. ಈಗ ಅದು ಒಂದು ಸಾವಿರ ಪ್ರಕರಣಗಳ ಗಡಿದಾಟಿದೆ. ಚಿಕ್ಕಮಕ್ಕಳ ಮೇಲೆ ಅತ್ಯಾಚಾರಗಳು ನಡೆಯುತ್ತವೆ. ಮಹಿಳೆಯರ ಮೇಲೆ ಅತ್ಯಾಚಾರಗಳು ನಡೆಯುತ್ತವೆ. ಅವರಿಗೆ ನ್ಯಾಯ ಸಿಗುತ್ತಾ? ಸಾಮಾನ್ಯವಾಗಿ ಅಂತಹ ಸಂತ್ರಸ್ತೆಯರು ಕೆಳವರ್ಗಕ್ಕೆ ಸೇರಿದವರಾಗುತ್ತಾರೆ. ಅವರ ಜೊತೆಗೆ ಯಾರೂ ನಿಲ್ಲುವುದಿಲ್ಲ. ಕೆಲವರು ಎಫ್ಐಆರ್ (ಪ್ರಥಮ ಮಾಹಿತಿ ವರದಿ) ಮಾಡಿಸಿಬಿಡಿ - ಅಂತ ಹೇಳ್ತಾರೆ. ಆದರೆ ಅಷ್ಟಾದರೆ ಸಾಕಾ? ವೈದ್ಯಕೀಯ ಪರೀಕ್ಷೆ ಆಗ್ಬೇಕಾಗತ್ತೆ, ಆರೋಪಿಗಳ ಗುರುತನ್ನು ಪತ್ತೆ ಹಚ್ಚುವ ಪರೀಕ್ಷೆ ಆಗಬೇಕಾಗುತ್ತೆ, ಇವರ ಹೇಳಿಕೆಯನ್ನು ದಾಖಲು ಮಾಡ್ಬೇಕಾಗತ್ತೆ.

"ಈ ವರ್ಷದ ಮಾರ್ಚ್ ೮, ಶಿವಮೊಗ್ಗದಲ್ಲಿ ಕರ್ನಾಟಕ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟವು ಸಂಘಟಿಸಿದ್ದ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಸಂದರ್ಭಕ್ಕೆ ಮುಖ್ಯ ಅತಿಥಿಗಳಾಗಿ ಭಾಗವಹಿಸಲು ಮುಂಬೈನ 'ಮಜ್ಲಿಸ್' ಸಂಘಟನೆಯ ಫ್ಲೇವಿಯಾ ಆಗ್ನೇಸ್ ಆಗಮಿಸಿದ್ದರು. ಈ ಸಮಾವೇಶದಲ್ಲಿ ಭಾಗವಹಿಸಿದ್ದ ಬೆಂಗಳೂರಿನ ಡಾ॥ ಎನ್. ಗಾಯಿತ್ರಿ ಹಾಗೂ ಡಾ॥ ಎಚ್. ಜಿ. ಜಯಲಕ್ಷ್ಮಿಯವರು ಅವರನ್ನು 'ಹೊಸತು' ಪತ್ರಿಕೆಗಾಗಿ ನಡೆಸಿದ ಸಂದರ್ಶನ ಇಲ್ಲಿದೆ."






ಮಹಿಳೆಯರ ಹಕ್ಕುಗಳಿಗಾಗಿ ನಡೆಯುತ್ತಿರುವ ಹೋರಾಟದಲ್ಲಿ ಅಖಿಲ ಭಾರತ ಮಟ್ಟದಲ್ಲಿ ತಮ್ಮ ಛಾಪನ್ನು ಮೂಡಿಸಿರುವ ಖ್ಯಾತ ವಕೀಲೆ ಫ್ಲೇವಿಯಾ ಆಗ್ನೇಸ್ ಮೂಲತಃ ಕರ್ನಾಟಕದವರು. ೧೯೪೭ರಲ್ಲಿ ಜನಿಸಿದ ಇವರು ಕನ್ನಡ ಮಾಧ್ಯಮದಲ್ಲಿ ಮಂಗಳೂರಿನ ಶಾಲೆಯೊಂದರಲ್ಲಿ ಕಲಿತವರು. ಚಿಕ್ಕ ವಯಸ್ಸಿಗೇ ಮದುವೆಯಾಗಿ ಸ್ವತಃ ಹದಿನಾಲ್ಕು ವರ್ಷಗಳ ಕಾಲ ಸತತ ಕೌಟುಂಬಿಕ ದೌರ್ಜನ್ಯವನ್ನು ಅನುಭವಿಸಿ ಸಿಡಿದೆದ್ದು ಬಂದವರು. ಮದುವೆಯ ನಂತರವೇ ಎಸ್.ಎನ್.ಡಿ.ಟಿ ವಿಶ್ವವಿದ್ಯಾಲಯದಿಂದ ಬಿ.ಎ. ಪದವಿ ಪಡೆದು, ಮುಂಬೈ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಪಡೆದ ನಂತರ ವಕೀಲೆಯಾಗಿ ವೃತ್ತಿ ಆರಂಭಿಸಿದವರು. ಬೆಂಗಳೂರಿನ ನ್ಯಾಷನಲ್ ಲಾ ಸ್ಕೂಲಿನಿಂದ ಎಂಫಿಲ್ ಪದವಿ ಪದವಿ ಪಡೆದಿರುವ ಫ್ಲೇವಿಯಾ ಸ್ವಂತ ಸಾಮರ್ಥ್ಯ ಮತ್ತು ಪರಿಶ್ರಮದಿಂದ ಮೇಲೆ ಬಂದವರು.

ತಮ್ಮಂತೆ ದೇಹ, ಮನಸ್ಸು, ಭಾವನೆಗಳ ಮೇಲೆ ಸದಾ ಆಕ್ರಮಣವನ್ನು ಎದುರಿಸುವ ಮಹಿಳೆಯರಿಗೆ ನೆರವಾಗಲು ಮಧುಶ್ರೀ ದತ್ತ ಅವರೊಂದಿಗೆ ಸೇರಿಕೊಂಡು 'ಮಜ್ಲಿಸ್' ಎಂಬ ಸಂಘಟನೆಯನ್ನು ಕಟ್ಟಿ ಸಾವಿರಾರು ಮಹಿಳೆಯರಿಗೆ ಕಾನೂನಿನ ನೆರವೂ ಸೇರಿದಂತೆ ಅವರು ಮತ್ತೆ ಜೀವನ ಕಟ್ಟಿಕೊಳ್ಳಲು ಹಲವಾರು ರೀತಿಗಳಲ್ಲಿ ನೆರವು ಬೆಂಬಲ ನೀಡುತ್ತಿರುವವರು. ಈಗ ಮುಂಬೈಯಲ್ಲಿ ಖ್ಯಾತ ವಕೀಲರಾಗಿ ಮಹಿಳಾ ಹಕ್ಕುಗಳಿಗಾಗಿ ನ್ಯಾಯಾಲಯದ ಒಳಗೂ ಹೊರಗೂ ನಿರಂತರವಾಗಿ ಹೋರಾಡುತ್ತಿರುವ ಇವರು ಲಿಂಗ ಸಂಬಂಧಿ ಕಾನೂನು ಸುಧಾರಣೆಗಳ ಬಗ್ಗೆ ಕೆಲಸ ಮಾಡುತ್ತಿದ್ದಾರೆ. ಕೌಟುಂಬಿಕ ಹಿಂಸೆ, ಅಲ್ಪ ಸಂಖ್ಯಾತರ ಕಾನೂನಿನಲ್ಲಿ ಸುಧಾರಣೆ, ಜಾತ್ಯಾತೀತತೆ ಮತ್ತು ಮಾನವ ಹಕ್ಕುಗಳನ್ನು ಕುರಿತಂತೆ ಹಲವಾರು ಲೇಖನಗಳನ್ನು ಮತ್ತು ಪುಸ್ತಕಗಳನ್ನು ರಚಿಸಿದ್ದಾರೆ. ಇವರ ಆತ್ಮಚರಿತ್ರೆ " ಮೈ ಸ್ಟೋರಿ ಅವರ್ ಸ್ಟೋರಿ" ಒಡೆದ ಬದುಕುಗಳನ್ನು ಮರುಕಟ್ಟುವ ಪ್ರಯತ್ನವಾಗಿದೆ. ಇದು ಭಾರತದ ಹಲವಾರು ಭಾಷೆಗಳಿಗೆ ಅನುವಾದಗೊಂಡಿದೆ. ಕನ್ನಡದಲ್ಲಿ ಕತೆಗಾರ್ತಿ ನೇಮಿಚಂದ್ರ ಇದನ್ನು "ನನ್ನ ಕತೆ, ನಮ್ಮ ಕತೆ" ಎಂದು ಅನುವಾದಿಸಿದ್ದಾರೆ. ಅವರ ಮತ್ತೆರಡು ಕೃತಿಗಳು ಕಾನೂನು ಮತ್ತು ಲಿಂಗ ನ್ಯಾಯ ಹಾಗೂ "ಮಹಿಳೆ ಮತ್ತು ಕಾನೂನು" ಆಕ್ಸ್‌ಫರ್ಡ್ ಪ್ರೆಸ್‌ನಿಂದ ಪ್ರಕಟವಾಗಿದೆ. ೧೯೯೦ ರಿಂದ ಇಲ್ಲಿಯವರಿಗೆ ಇವರ "ಮಜ್ಲಿಸ್" ಸಂಸ್ಥೆಯಿಂದ ಸುಮಾರು ೫೦,೦೦೦ ಮಹಿಳೆಯರು ಕಾನೂನಿನ ನೆರವು ಪಡೆದಿದ್ದಾರೆ. ಅವರ ಸಾಧನೆಗೆ ಅವರಿಗೆ ಭಾರತದ ಪ್ರತಿಷ್ಠಿತ ನೀರಜಾ ಭಾನೋರ್ಟ್ ಪ್ರಶಸ್ತಿಯೂ ಸಂದಿದೆ.

ಅವರು ತಮ್ಮ "ಮಜ್ಲಿಸ್" ಸಂಸ್ಥೆಯ ಮೂಲಕ ದೇಶದಲ್ಲಿ ಹೆಚ್ಚುತ್ತಿರುವ ಹಿಂದೂ ಮುಲಭೂತವಾದದ ಹಾಗೂ ಹಿಂದುತ್ವದ ಆಕ್ರಮಣಕಾರಿ ಚಟುವಟಿಕೆಗಳ ವಿರುದ್ಧವೂ ಹೋರಾಡುತ್ತಿದ್ದಾರೆ. ೨೦೦೨ರಲ್ಲಿ ನಡೆದ ಗುಜರಾತ್ ಹತ್ಯಾಕಾಂಡದ ಪರಿಣಾಮವಾಗಿ ಪರಿಹಾರ ಶಿಬಿರಗಳಲ್ಲಿದ್ದ ಲೈಂಗಿಕ ದೌರ್ಜನ್ಯಕ್ಕೆ ಒಳಗಾದವರಿಗೆ ಕಾನೂನು ಸಲಹೆ ಮತ್ತು ನೆರವು ನೀಡಿದ್ದಾರೆ. ಈ ಅನುಭವಗಳನ್ನು ಕುರಿತ ಅವರ ಪ್ರಕಟಣೆ "ಆಫ್ ಲಾಫ್ಟಿ ಕ್ಲೈಮ್ಸ್ ಅಂಡ್ ಮಫ್ಡ್ ವಾಯ್ಸಸ್" ೨೦೦೨ರಲ್ಲಿ ಪ್ರಕಟವಾಗಿದೆ.

ಎಷ್ಟೋ ಸಂದರ್ಭಗಳಲ್ಲಿ ಅವರು ೧೦-೧೨ ವರ್ಷದ ಹುಡುಗಿಯರಾಗಿರ್ತಾರೆ, ಶಾಲೆಗಳನ್ನು ಅರ್ಧಕ್ಕೆ ಬಿಟ್ಟ ಮಕ್ಕಳಾಗಿರುತ್ತಾರೆ. ಕೆಲವು ಸಲ ಅವರು ಕಿವುಡು–ಮೂಕ ಮಕ್ಕಳಾಗಿರುತ್ತಾರೆ. ಅವರಿಗೆ ಏನೂ ತಿಳಿದಿರುವುದಿಲ್ಲ. ಒಂದು ವರ್ಷ ಆದ ಮೇಲೆ ಆರೋಪ ಪಟ್ಟಿ ತಯಾರಾಗತ್ತೆ, ಜಾಮೀನಿಗೆ ಅರ್ಜಿ ಹಾಕಲಾಗುತ್ತೆ, ಒಟ್ಟಿನಲ್ಲಿ ಇದೊಂದು ಸುದೀರ್ಘವಾದ ಪ್ರಕ್ರಿಯೆ. ಈ ಇಡೀ ಪ್ರಕ್ರಿಯೆಯುದ್ದಕ್ಕೂ ಅವರ ಜೊತೆ ಯಾರೂ ಇರೋಲ್ಲ ಎನ್ನುವ ಅಂಶವನ್ನು ಗಮನಿಸಿ. ಮುಂದೆ ಆ ಹುಡುಗಿ ಕೋರ್ಟಿಗೆ ಬರಬೇಕು. ಅಲ್ಲಿ ಅವಳು ಎಫ್‌ಐಆರ್‌ನಲ್ಲಿ ಏನಿದೆ. ಹೇಳಿಕೆಯಲ್ಲಿ ಏನಿದೆ ಅಂತ ತಿಳಿದುಕೊಂಡು ತನ್ನ ಪ್ರತಿಕ್ರಿಯೆ ನೀಡಬೇಕು. ಅವಳು ಎದುರಿಸಬೇಕಾಗಿರೋದು ಪಳಗಿರುವ ಕ್ರಿಮಿನಲ್ ಲಾಯರ್‌ರನ್ನು. ಅವಳು ಹೇಗೆ ಉತ್ತರಕೊಡಬಹುದು ಯೋಚಿಸಿ. ಅವಳು ಸರ್ಕಾರಿ ವಕೀಲರನ್ನು ಯಾವತ್ತೂ ನೋಡಿಯೇ ಇರುವುದಿಲ್ಲ. ಅವಳಿಗೆ ತನ್ನ ಪರವಾಗಿ ವಾದಮಾಡುವವರು ಯಾರು, ತನ್ನ ವಿರುದ್ಧ ವಾದ ಮಾಡುವವರು ಯಾರು ಒಂದೂ ತಿಳಿದಿರುವುದಿಲ್ಲ. ಜೊತೆಗೆ ಆರೋಪಿಗಳು ದೋಷಮುಕ್ತರಾಗುವ ಸಂಖ್ಯೆ ತುಂಬ ಜಾಸ್ತಿ. ನಾನು ಇವುಗಳ ಬಗ್ಗೆ ಸಾಕಷ್ಟು ಲೇಖನಗಳನ್ನು ಪತ್ರಿಕೆಗಳಿಗೆ ಬರೆದಿದ್ದೇನೆ. ಕೋರ್ಟಿನ ಒಳಗೆ ಏನಾಗುತ್ತದೆ, ಹೊರಗೆ ಏನಾಗುತ್ತದೆ ಇದೆಲ್ಲದರ ಬಗ್ಗೆ ವಿವರವಾಗಿ ಬರೆದಿದ್ದೇನೆ. ಮಕ್ಕಳು, ಮಹಿಳೆಯರ ಮೇಲಿನ ಅತ್ಯಾಚಾರಗಳಿಗೆ ಸಂಬಂಧಿಸಿದಂತೆ ಕಾನೂನುಗಳು ಇವೆ. ಕೇವಲ ಕಾನೂನುಗಳಿದ್ದರೆ ಸಾಕೇ? ನ್ಯಾಯದಾನ ಪ್ರಕ್ರಿಯೆ ಇಷ್ಟೊಂದು ತೊಡಕಿನದಾಗಿರುವಾಗ, ಕೇವಲ ಕಾನೂನು ಇದ್ದ ಮಾತ್ರಕ್ಕೆ ನ್ಯಾಯ ಸಿಗುತ್ತದೆಯೇ?


ಫ್ಲೇವಿಯಾ ಅವರು, ಕ್ರಿಯಾಶೀಲ ವಕೀಲರು ಮತ್ತು ಸಾಮಾಜಿಕ ಕಾರ್ಯಕರ್ತೆಯರ ತಂಡದೊಂದಿಗೆ

**ಡಾ॥ ಗಾಯಿತ್ರಿ :** ಮರಣದಂಡನೆ ಶಿಕ್ಷೆ ಹಾಗೂ ಬಾಲಾಪರಾಧಿಗಳ ವಯಸ್ಸನ್ನು ಇಳಿಸುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಫ್ಲೇ :** ನಾನು ಮರಣದಂಡನೆಯನ್ನು ವಿರೋಧಿಸುತ್ತೇನೆ. ಬಾಲಾಪರಾಧಿಗಳ ವಯಸ್ಸನ್ನು ಇಳಿಸುವುದನ್ನೂ ಸಹ ವಿರೋಧಿಸುತ್ತೇನೆ. ನಾನು

ಸ್ತ್ರೀವಾದಿಯಾಗಿರುವುದರಿಂದ ಮರಣದಂಡನೆ ಶಿಕ್ಷೆ ವಿಧಿಸಬೇಕೆಂದು, ಬಾಲಾಪರಾಧಿಗಳ ವಯಸ್ಸನ್ನು ಇಳಿಸಬೇಕೆಂದು ವಾದಿಸುತ್ತೇನೆಂದು ಭಾವಿಸಿ ನನ್ನನ್ನು ಟಿ.ವಿ. ಸಂದರ್ಶನಗಳಿಗೆ ಕರೆಯುತ್ತಾರೆ. ಆದರೆ ನಾನು ಅದಕ್ಕೆ ತದ್ವಿರುದ್ಧವಾದ ಅಭಿಪ್ರಾಯವನ್ನು ಹೊಂದಿದ್ದೇನೆ. ನಾನು ಸ್ತ್ರೀವಾದಿಯೂ ಹೌದು, ಮಾನವ ಹಕ್ಕುಗಳ ಹೋರಾಟಗಾರ್ತಿಯೂ ಹೌದು, ನಾನು ಧರ್ಮ ನಿರಪೇಕ್ಷ ಮೌಲ್ಯವನ್ನು ಹೊಂದಿರುವವಳು ಹೌದು. ನನ್ನಲ್ಲಿರುವ ಬೇರೆ ಬೇರೆ ವಿಚಾರಗಳನ್ನು ಪ್ರತ್ಯೇಕಿಸಿ ನೋಡಲು ಸಾಧ್ಯವಿಲ್ಲ. ಒಂದೇ ವ್ಯಕ್ತಿಯಲ್ಲಿ ಇವೆಲ್ಲವೂ ಇರಲು ಸಾಧ್ಯ.

**ಡಾ॥ ಗಾಯಿತ್ರಿ :** ನಿಮ್ಮ ಸಂಘಟನೆ 'ಮಜ್ಲಿಸ್' ಎಂದು ಹೆಸರಿಡುವುದರ ಉದ್ದೇಶ ಏನು?

**ಫ್ಲೇ :** 'ಮಜ್ಲಿಸ್' ಎಂದರೆ 'ಸಭೆ', 'ಕೂಟ' ಎಂದು ಅರ್ಥ. ಮಧ್ಯ ಪ್ರಾಚ್ಯದಲ್ಲಿ ಸಭೆಗೆ 'ಮಜ್ಲಿಸ್' ಎಂತಲೇ ಹೇಳುವುದು. ಬಾಬ್ರಿ ಮಸೀದಿಯನ್ನು ಉರುಳಿಸಿದ ಮುಂಚಿನ ಕಾಲ ಅದು. ನನಗೆ ವೈವಿಧ್ಯತೆಯನ್ನು ಎತ್ತಿಹಿಡಿಯುವ ಒಂದು ಮಹಿಳಾ ಸಂಘಟನೆಯನ್ನು ಕಟ್ಟುವ ಉದ್ದೇಶವಿತ್ತು. ಬಹುತೇಕ ಸಂಘಟನೆಗಳು ಅವು ದಲಿತರದಿರಲಿ, ಕ್ರಿಶ್ಚಿಯನ್ನರದಿರಲಿ, ಸಂಸ್ಕೃತಮಯವಾದ ಹೆಸರುಗಳನ್ನು ಇಡುತ್ತಾರೆ. ಉದಾಹರಣೆಗೆ : ನಿರ್ಮಲ್ ನಿಕೇತನ್, ಋಷಿ ನಿಲಯ್ ಎಂತೆಲ್ಲಾ. ನಮಗೆ ಬೇರೆಯದೇ ಆದ ಹೆಸರು ಬೇಕಿತ್ತು. ಹಾಗಾಗಿ ಈ ಹೆಸರನ್ನು ಆರಿಸಿಕೊಂಡೆವು.

**ಡಾ॥ ಜಯಲಕ್ಷ್ಮಿ :** ನಿಮ್ಮ ಸಂಘಟನೆಯ ಮುಖ್ಯ ಚಟುವಟಿಕೆಗಳೇನು?

**ಫ್ಲೇ :** ನಮ್ಮದು ಕಾನೂನಿಗೆ ಸಂಬಂಧಿಸಿದಂತೆ ಅರಿವು ಮೂಡಿಸುವುದು, ನೆರವು ಕೊಡುವುದು ಒಂದು ಮುಖ್ಯ ಕೆಲಸವಾದರೆ, ಇನ್ನೊಂದು ಸಾಂಸ್ಕೃತಿಕ ಚಟುವಟಿಕೆಗಳು. ನಾವು ಅಕ್ಕಮಹಾದೇವಿಯ ಬಗ್ಗೆ ಒಂದು ಫಿಲ್ಮ್ ಮಾಡಿದ್ದೇವೆ. "ಸ್ಕ್ರಿಬಲ್ಸ್ ಆನ್ ಅಕ್ಕ" ಅಂತ. ಇದಕ್ಕೆ ಸಂಬಂಧಪಟ್ಟ ಸಂಶೋಧನೆಗಳನ್ನೆಲ್ಲಾ ನಾನೇ ಮಾಡಿದ್ದು. ಹುಬ್ಬಳ್ಳಿ, ಧಾರವಾಡ, ಗದಗಲ್ಲೆಲ್ಲಾ ಓಡಾಡಿ, ಅನೇಕರನ್ನು ಭೇಟಿಯಾಗಿದ್ದೆ. ಅಕ್ಕನ ಜನ್ಮದಿನದ ಸಂದರ್ಭದಲ್ಲಿ ಉಡುತಡಿಗೆ ಹೋಗಿ, ಅಲ್ಲಿ ಬರುವ ಜನಗಳನ್ನೆಲ್ಲಾ ಭೇಟಿ ಮಾಡಿ ಮಾತನಾಡಿದ್ದೇನೆ.

**ಡಾ॥ ಗಾಯಿತ್ರಿ :** ಸಮಾನ ನಾಗರಿಕ ಸಂಹಿತೆಯ ಬಗ್ಗೆ ನಿಮ್ಮ ಅಭಿಪ್ರಾಯ ಏನು?

**ಫ್ಲೇ :** ಸಮಾನ ನಾಗರಿಕ ಸಂಹಿತೆ ಎನ್ನುವುದು ಅತ್ಯಂತ ಜಟಿಲವಾದ ವಿಷಯ. ಆದರೆ ಅದರಷ್ಟು ಸರಳೀಕೃತಗೊಳಿಸಲ್ಪಟ್ಟ ವಿಷಯ ಇನ್ನೊಂದಿಲ್ಲ. ಪ್ರತಿಯೊಬ್ಬ ವ್ಯಕ್ತಿಯು ಒಂದಲ್ಲ ಒಂದು ಸಮುದಾಯಕ್ಕೆ ಸೇರಿರುತ್ತಾರೆ. ಪ್ರತಿಯೊಂದು ಸಮುದಾಯಕ್ಕೂ ಅದರದ್ದೇ ಆದ ಧಾರ್ಮಿಕ ನಂಬಿಕೆಗಳಿವೆ, ಸಂಸ್ಕೃತಿ ಇದೆ. ಭಾರತದಲ್ಲಿ ನಾವು ವಿವಿಧತೆಗೆ ತುಂಬ ಮಹತ್ವ ಕೊಡುತ್ತೇವೆ. ಎಲ್ಲರೂ ಒಂದೇ ಪ್ರಕಾರವಾಗಿರಬೇಕು ಎಂದು ಭಾವಿಸುವುದಿಲ್ಲ. ಹಾಗಾಗಿ ಪ್ರತಿಯೊಬ್ಬರೂ ತಮ್ಮತಮ್ಮ ಸಮುದಾಯದೊಳಗೆ ತಮ್ಮದೇ ರೀತಿಯಲ್ಲಿ ಬದುಕಲು ಬಯಸುತ್ತಾರೆ.



ಅವರ ಅಸ್ತಿತ್ವವಿರುವುದೇ ಅಲ್ಲಿ. ಯಾವುದೇ ವಿಚಾರವನ್ನಾಗಲಿ, ಅವರ ಸಮುದಾಯ ಒಪ್ಪದಿದ್ದರೆ ಅವರು ಮುಂದೆ ಹೆಜ್ಜೆ ಇಡುವುದಿಲ್ಲ. ಉದಾಹರಣೆಗೆ : ೧೯೫೪ರಲ್ಲಿ ವಿಶೇಷ ವಿವಾಹ ಕಾಯ್ದೆ ಬಂತು. ಅದರಲ್ಲಿ ಎಷ್ಟು ಜನ ಮದುವೆ ಆಗ್ತಾರೆ. ಅದು ಹಿಂದೂ ವಿವಾಹ ಕಾಯ್ದೆಗೂ ಮುಂಚೆನೇ ಇತ್ತು. ಜನ ಯಾಕೆ ಅದರಲ್ಲಿ ಮದುವೆ ಮಾಡ್ಕೊಳ್ಳಲ್ಲ. ಯಾಕೆಂದರೆ, ಮದುವೆ ಎನ್ನುವುದು ಒಂದು ಸಾಂಸ್ಕೃತಿಕ ಚಟುವಟಿಕೆ ಸಹ. ಮದುವೆ ಕಾರ್ಯಕ್ರಮದಲ್ಲಿ ಕೆಲವೊಂದು ಆಚರಣೆಗಳಿರುತ್ತವೆ. ಅದರ ಅಡಿಯಲ್ಲೇ ಮದುವೆ ಮಾಡೋದು. ಯಾರು ಮನೆಯವರನ್ನು ಬಿಟ್ಟು ಓಡಿಹೋಗಿರುತ್ತಾರೋ ಅವರು ಮಾತ್ರ ವಿಶೇಷ ವಿವಾಹ ಕಾಯ್ದೆಯ ಅಡಿಯಲ್ಲಿ ಮದುವೆ ಮಾಡಿಕೊಳ್ಳೋದು.

**ಡಾ॥ ಗಾಯಿತ್ರಿ :** (ನಗುತ್ತಾ) ನಾವೇನೂ ಓಡಿಹೋಗಿ ಮದುವೆಯಾಗಲಿಲ್ಲ. ಆದರೆ ನಾವು ವಿಶೇಷ ವಿವಾಹ ಕಾಯ್ದೆ ಕೆಳಗೆ ಮದುವೆ ಮಾಡಿಕೊಂಡಿದ್ದು.

**ಫ್ಲೇ :** ನಿಜ, ಆ ಕಾಲದಲ್ಲಿ ಮಾಡಿಕೊಳ್ತಾ ಇದ್ದರು, ಅದೊಂದು ಚಳುವಳಿ ತರಹ ಆಗಿತ್ತು. ಈಗ ಹಾಗಿಲ್ಲ.

**ಡಾ॥ ಜಯಲಕ್ಷ್ಮಿ :** ಬದಲಾವಣೆಗಳನ್ನು ಹೇಗೆ ತರಬೇಕು ಅಂತ ನೀವು ಹೇಳುತ್ತೀರಿ?

**ಫ್ಲೇ :** ಪ್ರತಿಯೊಂದು ಸಮುದಾಯದ ಮಹಿಳೆಯರಿಗೂ ಅವರದೇ ಆದ ಸಮಸ್ಯೆಗಳಿವೆ. ಎಲ್ಲರ ಸಮಸ್ಯೆಗಳೂ ಬೇರೆ ಬೇರೆ. ನಾವು ಅವರ ಮಧ್ಯದಿಂದಲೇ ಸುಧಾರಣೆಗಳನ್ನು ತರಬೇಕು. ಆಗ ಮಾತ್ರ ಅದನ್ನು ಒಪ್ಪುತ್ತಾರೆ. ಇಲ್ಲದಿದ್ದರೆ ಸಾಧ್ಯವಿಲ್ಲ.

ಕ್ರಿಶ್ಚಿಯನ್ ಮಹಿಳೆಯರಿಗೆ ಸಂಬಂಧಿಸಿದಂತೆ ಬಹಳ ಕಷ್ಟಪಟ್ಟು ನಾವು ಕಾನೂನನ್ನು ಬದಲಾಯಿಸಿದೆವು. ಕ್ರಿಶ್ಚಿಯನ್ ಮಹಿಳೆಯರಿಗೆ ಕೇವಲ ದೌರ್ಜನ್ಯದ (ಕೌಟುಂಬಿಕ) ಕಾರಣಕ್ಕೆ ವಿಚ್ಛೇದನ ಸಿಗುತ್ತಿರಲಿಲ್ಲ. ಆ ಕಾರಣಕ್ಕೆ ನನಗೆ ಸಹ ವಿಚ್ಛೇದನ ಸಿಗಲಿಲ್ಲ. ದೌರ್ಜನ್ಯ ಮಾಡುವುದರ ಜೊತೆಗೆ ಗಂಡ ವ್ಯಭಿಚಾರಿಯೂ ಆಗಿದ್ದರೆ ಮಾತ್ರ ವಿಚ್ಛೇದನ ಸಿಗುತ್ತಿತ್ತು. ನಾವು ಸತತ ಇಪ್ಪತ್ತು ವರ್ಷಗಳ ಸುದೀರ್ಘ ಹೋರಾಟದ ನಂತರ ದೌರ್ಜನ್ಯದ ಕಾರಣಕ್ಕೆ ವಿಚ್ಛೇದನ ಸಿಗುವಂತೆ ಮಾಡುವಲ್ಲಿ ಯಶಸ್ವಿಯಾದೆವು. ನಂತರ ಒಟ್ಟಿಗೆ ಜೀವಿಸಲು ಇಷ್ಟಪಡದ ಗಂಡ ಹೆಂಡತಿಯರು ಪರಸ್ಪರ ಒಪ್ಪಿಗೆಯ ಆಧಾರದ ಮೇಲೆ ವಿಚ್ಛೇದನ ಪಡೆದುಕೊಳ್ಳಬಹುದು ಎಂದಾಗಿದೆ.



ಫ್ಲೇವಿಯಾ ಅವರೊಂದಿಗೆ ಡಾ॥ ಎನ್. ಗಾಯತ್ರಿ

**ಡಾ॥ ಗಾಯಿತ್ರಿ :** ಅದೊಂದು ಮಹತ್ವದ ಬೆಳವಣಿಗೆ.

**ಫ್ಲೇ :** ಆದರೆ ಈಗಲೂ ಸಹ ಚರ್ಚ್ ಅದನ್ನು ಪ್ರಚಾರ



***ಫ್ಲೇವಿಯಾ ಅವರೊಂದಿಗೆ ಡಾ॥ ಎಚ್. ಜಿ. ಜಯಲಕ್ಷ್ಮಿ***

ಮಾಡಲ್ಲ. ಕಾನೂನನ್ನು ಬದಲಾಯಿಸಿದ ಮೇಲೂ ಕ್ರಿಶ್ಚಿಯನ್ ಸಮುದಾಯದಲ್ಲಿ ಇನ್ನೂ ಬದಲಾವಣೆ ಬಂದಿಲ್ಲ. ನಾವು ಇನ್ನೂ ಬಹಳ ಪ್ರಯತ್ನಪಡಬೇಕು.

**ಡಾ॥ ಜಯಲಕ್ಷ್ಮಿ :** ಮಹಿಳಾ ಹೋರಾಟಗಳಿಂದಾಗಿ ಹೊಸ ಹೊಸ ಕಾನೂನುಗಳು ರೂಪುಗೊಳ್ಳುತ್ತಾ ಇವೆ. ಆದರೆ ಅವುಗಳ ಫಲ ಮಹಿಳೆಯರನ್ನು ತಲುಪುತ್ತಿದೆಯೇ?

**ಫ್ಲೇ :** ಮಹಿಳೆಯರಿಗೆ ಎಷ್ಟೊಂದು ಸಮಸ್ಯೆಗಳಿವೆ, ಕೌಟುಂಬಿಕ ದೌರ್ಜನ್ಯವಂತೂ ತುಂಬ ಸಾಮಾನ್ಯವಾದದ್ದು. ಆದರೆ ಅವರು ಕೋರ್ಟಿಗೆ ಹೋಗುವುದಿಲ್ಲ. ಹಾಗೇ ಹೊಂದಿಕೊಂಡು ಬದುಕುತ್ತಾರೆಯೇ ಹೊರತು ಪೊಲೀಸ್ ಸ್ಟೇಷನ್, ಕೋರ್ಟ್‌ಗಳಿಗೆ ಹೋಗುವುದಿಲ್ಲ. ಅವರೊಳಗೆ ಅಪರಾಧಿ ಭಾವ ಕಾಡುತ್ತಿರುತ್ತದೆ. ಕೋರ್ಟ್, ಕಚೇರಿ ವ್ಯವಸ್ಥೆ ಸರಿ ಇಲ್ಲ, ಲಾಯರ್ ವ್ಯವಸ್ಥೆ ಸರಿ ಇಲ್ಲ, ಕಾನೂನು ನೆರವು ವ್ಯವಸ್ಥೆ ಸರಿ ಇಲ್ಲ, ಹಾಗಿದ್ದ ಮೇಲೆ ಸಮಾನಕಾಯ್ದೆ ತಂದು ಮಹಿಳೆಯರಿಗೆ ನ್ಯಾಯ ಹೇಗೆ ಕೊಡುತ್ತಾರೆ? ಈಗ ಪೋಕ್ಸೋ ಕಾಯ್ದೆ ಬಂತು, ನಿರ್ಭಯ ಕಾಯ್ದೆ ಬಂತು, ಆದರೆ ಪ್ರತಿ ವರ್ಷ ಅತ್ಯಾಚಾರ ಪ್ರಕರಣಗಳು ಜಾಸ್ತಿ ಆಗ್ತಾ ಇವೆ. ಇಂತಹ ಸಂದರ್ಭದಲ್ಲಿ ಎಲ್ಲಾ ಮಹಿಳಾ ಸಂಘಟನೆಗಳೂ ಒಟ್ಟಿಗೆ ಸೇರಿ ನ್ಯಾಯದಾನ ವ್ಯವಸ್ಥೆ ಸರಿಯಾಗಿ ಕೆಲಸಮಾಡುವಂತೆ, ಮಹಿಳಾ ಸ್ನೇಹಿಯಾಗುವಂತೆ ಮಾಡಬೇಕು.

**ಡಾ॥ ಗಾಯಿತ್ರಿ :** ವಿವಿಧ ಕೋಮುಗಳಿಗೆ ಸೇರಿದ ಮಹಿಳೆಯರಿಗೆ ಇರುವ ಕಾನೂನಿನ ಹಕ್ಕುಗಳ ಬಗ್ಗೆ ಸ್ವಲ್ಪ ವಿವರಿಸಿ.

**ಫ್ಲೇ :** ಈಗ ಮುಸ್ಲಿಂ ಮಹಿಳೆಯರಿಗೆ ಹಕ್ಕುಗಳಿಲ್ಲ ಅಂತ ಭಾರೀ ಪ್ರಚಾರ ಇದೆ. ನಾನು ಕೇಳೋ ಪ್ರಶ್ನೆ ಅಂದರೆ ಹಿಂದೂ ಮಹಿಳೆಯರಿಗೆ ಹಕ್ಕುಗಳಿವೆಯಾ? ಹಿಂದೂಗಳಲ್ಲಿ ಬಹುಪತ್ನಿತ್ವ ಎಷ್ಟೊಂದು ಪ್ರಚಲಿತವಾಗಿದೆ.

**ಡಾ॥ ಗಾಯಿತ್ರಿ :** ಹೌದು. ನಮ್ಮ ಸೀರಿಯಲ್‌ಗಳು, ಫಿಲ್ಮ್‌ಗಳೂ ಇದನ್ನೇ ತೋರಿಸುತ್ತವೆ.

**ಫ್ಲೇ :** ಕೆಲವೊಂದು ಹಕ್ಕುಗಳು ಎಲ್ಲರಿಗೂ ಸಮಾನವಾಗಿ ಉಂಟು, ಜೀವನಾಂಶದ ಹಕ್ಕು, ವೈವಾಹಿಕ ಹಕ್ಕು ಎಲ್ಲರಿಗೂ ಉಂಟು. ಕೌಟುಂಬಿಕ ದೌರ್ಜನ್ಯಕಾಯ್ದೆ ಸಹ ಎಲ್ಲರಿಗೂ ಸಮಾನವಾಗಿ ಅನ್ವಯವಾಗುತ್ತೆ.

'ಮುಸ್ಲಿಂ ಮಹಿಳೆ'ಯರು ಸಿಆರ್‌ಪಿಸಿ ೧೨೫ ಕಾಯ್ದೆಯಡಿ ಪ್ರತಿ ತಿಂಗಳು ಮಾಸಾಶಾಸನವನ್ನು ಇತರ ಸಮುದಾಯದ ಮಹಿಳೆಯರಂತೆಯೇ ಪಡೆದುಕೊಳ್ಳಬಹುದು. ಇಲ್ಲದಿದ್ದರೆ, ವಿಚ್ಛೇದನವಾಗುವಾಗ, ಮೂರು ತಿಂಗಳ 'ಇದ್ದತ್' ಅವಧಿಗೆ ಜೀವನಾಂಶ ಕೊಡಬೇಕು ಹಾಗೂ ಮುಂದಿನ ಜೀವನದ ಭದ್ರತೆಗೆ ಒಂದು ಮೊತ್ತವನ್ನು ಇಡಿಯಾಗಿ ಕೊಡಬೇಕು. ಇದು ಕೇವಲ ಮುಸ್ಲಿಂ ಮಹಿಳೆಯರಿಗೆ ಇರುವ ಹಕ್ಕು. ಈ ಹಕ್ಕು ಹಿಂದೂ ಮಹಿಳೆಯರಿಗೂ ಇಲ್ಲ, ಕ್ರಿಶ್ಚಿಯನ್ ಮಹಿಳೆಯರಿಗೂ ಇಲ್ಲ. ಇದನ್ನು ಯಾರೂ ಪ್ರಚಾರ ಮಾಡುವುದಿಲ್ಲ. ಬಲಪಂಥೀಯ ರಾಜಕಾರಣ ಮಾಡುವವರು ಸಮಾನ ನಾಗರಿಕ ಸಂಹಿತೆಯ ಕೂಗು ಎಬ್ಬಿಸುತ್ತಾರೆ. ಅದು ಮುಸ್ಲಿಂ ಸಮುದಾಯದ ವಿರುದ್ಧ ಜನರನ್ನು ಕೆರಳಿಸುವಂಥದ್ದು. ಅದನ್ನು ನಾವು ಹೇಗೆ ಒಪ್ಪುವುದು.

**ಡಾ॥ ಜಯಲಕ್ಷ್ಮಿ :** ಟ್ರಿಪಲ್ ತಲಾಕ್ ಬಗ್ಗೆ ತರುತ್ತಿರುವ ಕಾನೂನಿನ ಬಗ್ಗೆ ಏನು ಹೇಳುತ್ತೀರಿ?

**ಫ್ಲೇ :** ಕಾನೂನು ಇದ್ದ ಮಾತ್ರಕ್ಕೆ ಟ್ರಿಪಲ್ ತಲಾಕ್ ನಿಲ್ಲುತ್ತಾ, ಇಲ್ಲವಲ್ಲ.

**ಡಾ॥ ಗಾಯಿತ್ರಿ :** ಪರಿಸ್ಥಿತಿ ಇನ್ನೂ ಕೆಡಬಹುದು ಅಂತಾನ?

**ಫ್ಲೇ :** ಜನ ಅಂದುಕೊಳ್ಳೋದು ಹಾಗೆ. ಟ್ರಿಪಲ್ ತಲಾಕ್ ವಿಷಯದಲ್ಲಿ ಮುಸ್ಲಿಂ ಗಂಡಸರನ್ನು ಅಪರಾಧಿಗಳನ್ನಾಗಿ ಮಾಡಿ, ಅವರಿಗೆ ಶಿಕ್ಷೆ ಆಗಿ, ಅವರು ಮೂರು ವರ್ಷಗಳು ಜೈಲಿನಲ್ಲಿ ಕೂತರೆ, ಮುಸ್ಲಿಂ ಮಹಿಳೆಯರಿಗೆ ಏನು ಒಳ್ಳೆಯದಾಗುತ್ತದೆ? ಅವರಿಗೆ ತಿನ್ನುವುದಕ್ಕೆ ಅನ್ನ ಇಲ್ಲ. ಅವರ ಗಂಡಂದಿರೂ ಕೂಡ ಸಣ್ಣ ಅಂಗಡಿಗಳಲ್ಲಿ ಕೆಲಸಮಾಡುವುದು, ರಿಕ್ಷಾ ಓಡಿಸುವುದು, ಅಸಂಘಟಿತ ಕ್ಷೇತ್ರದಲ್ಲಿ ಕೆಲಸ ಮಾಡುವುದು. ಸಂಘಟಿತ ಕ್ಷೇತ್ರದಲ್ಲಿ ಅವರಿಗೆ ಕೆಲಸ ಸಿಗುವುದಿಲ್ಲ. ದಿನಕ್ಕೆ ಹತ್ತಿಪ್ಪತ್ತು ರೂಪಾಯಿಗಳಿಂದ ನೂರರವರೆಗೆ ಸಂಪಾದನೆ ಮಾಡುತ್ತಾರೆ. ಆ ಸಂಪಾದನೆಯಿಂದಲೇ ಹೆಂಡತಿಗೆ ಜೀವನಾಂಶ ಬರಬೇಕು. ಅವರನ್ನು ಜೈಲಿಗೆ ಹಾಕಿದರೆ ಏನು ಸಿಗುತ್ತದೆ?

**ಡಾ॥ ಗಾಯಿತ್ರಿ :** ಚಳುವಳಿಗಳಲ್ಲಿ ಎನ್.ಜಿ.ಓ.ಗಳ ಪಾತ್ರದ ಬಗ್ಗೆ ನಿಮ್ಮ ಅಭಿಪ್ರಾಯವೇನು? ಎನ್.ಜಿ.ಓ.ಗಳಿಂದ ಸಮಸ್ಯೆಗಳಿಗೆ ಏನಾದರೂ ಪರಿಹಾರ ಕಂಡುಕೊಳ್ಳಲು ಸಾಧ್ಯವಿದೆಯೇ?

**ಫ್ಲೇ :** ಮುಂಚೆ ಬಹಳ ಹುರುಪಿನಿಂದ ಮಹಿಳಾ ಹೋರಾಟಗಳು ನಡೆಯುತ್ತಿದ್ದವು. ಈಗ ಹಾಗಿಲ್ಲ. ಎಲ್ಲಾ ಎನ್.ಜಿ.ಓ. ಅಂತ, ಆಗಿ ಹೋಗಿದೆ. ಚಳುವಳಿ ಅಂತ ಏನೂ ಇಲ್ಲ. ಇಲ್ಲಿ ಎರಡು ವಿಷಯಗಳನ್ನು ಗಮನಿಸಬೇಕು. ಒಂದು, ವಿಸ್ತಾರವಾದ ಪ್ರಚಾರಕ್ಕೆ ಬೇಕಾಗಿರುವ ಚಳುವಳಿ, ಇನ್ನೊಂದು ವೈಯಕ್ತಿಕ ಪ್ರಕರಣಗಳಿಗೆ ಗಮನಕೊಡುವಂಥದ್ದು. ಎನ್.ಜಿ.ಓ.ಗಳಲ್ಲಿ ಕೆಲಸ ಮಾಡುವವರಿಗೆ ಚಳುವಳಿ ಮಾಡುವುದು ಗೊತ್ತಿಲ್ಲ. ಚಳುವಳಿಯ ವಿಶಾಲ ದೃಷ್ಟಿಯನ್ನು ನಾವೇ ಕೊಡಬೇಕು. ಹಲವಾರು ವಿಷಯಗಳ ಬಗ್ಗೆ ತರಬೇತಿಯನ್ನು ಕೊಡಬೇಕು ಮತ್ತು ಈ ಸಂದರ್ಭದಲ್ಲಿ ಹೇಳಬೇಕಾದ ವಿಷಯವೆಂದರೆ ಬಹುತೇಕ ಚಳುವಳಿಗಾರರು ವ್ಯಕ್ತಿಗತ ಪ್ರಕರಣಗಳನ್ನು ತೆಗೆದುಕೊಂಡು ಕೋರ್ಟಿಗೆ ಹೋಗೋದಿಲ್ಲ. ಅವರಿಗೆ ಕಾನೂನಿನ ಬಗೆಗೆ ಸರಿಯಾದ ಮಾಹಿತಿ, ತಿಳುವಳಿಕೆ ಇರುವುದಿಲ್ಲ. ಆದರೆ ಅವರು ತಮಗೆ ಎಲ್ಲಾ ಗೊತ್ತಿದೆ ಅಂತ ಮಾತಾಡ್ತಾರೆ. ಅವರು ವಿಷಯ ತಿಳ್ಕೋಬೇಕು.

✴ ✴ ✴

ಹೀಗೆ ಒಂದಾದ ಮೇಲೊಂದರಂತೆ ನಮ್ಮ ನಡುವೆ ಪ್ರಶ್ನೆಗಳೇಳುತ್ತಿದ್ದವು. ನಾವು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ದಣಿವಿಲ್ಲದೆ ಫ್ಲೇವಿಯಾ ಉತ್ಸಾಹದಿಂದ ಉತ್ತರಿಸುತ್ತಿದ್ದರು. ಅವರ ಸ್ವಂತ ಜೀವನದ ಅನುಭವ, ವಕೀಲೆಯಾಗಿ, ಹೋರಾಟಗಾರ್ತಿಯಾಗಿ, ಒಂದು ಸಂಸ್ಥೆಯನ್ನು ಕಟ್ಟಿ ಬೆಳೆಸಿದ ಅವರ ಅನುಭವಗಳಿಂದ ಕಲಿಯುವುದು ಬಹಳಷ್ಟಿದೆ. ಜೀವನದಲ್ಲಿ ಬಹಳಷ್ಟು ನೊಂದು ಬೆಂದರೂ ಅವರಲ್ಲಿ ಕಂಡು ಬರುವ ಮಗುವಿನಂಥ ಮುಗ್ಧತೆ ನಮ್ಮನ್ನು ಅವರಿಗೆ ಆಪ್ತವೆನಿಸುವಂತೆ ಮಾಡಿತು. ಫ್ಲೇವಿಯಾ ಆಗ್ನೇಸ್ ಅವರ ಜೊತೆ ಮಾತನಾಡಿದ್ದು ನಮಗೆ ಮರೆಯಲಾಗದ ಮಧುರ ಅನುಭವ.

ಲೇಖನವನ್ನು ಸಿದ್ಧಪಡಿಸಿದವರು : **ಡಾ॥ ಎಚ್. ಜಿ. ಜಯಲಕ್ಷ್ಮಿ**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕ ನಗರ
ಬೆಂಗಳೂರು – ೫೬೦ ೦೫೦




ಮ್ಯಾಂಚೆಸ್ಟರ್‌ನಲ್ಲಿ ಫ್ರೆಡರಿಕ್ ಏಂಗೆಲ್ಸ್ (ಸೀನಿಯರ್)ನ ಒಂದು ಹೊಲಿಗೆ ನೂಲಿನ ಫ್ಯಾಕ್ಟರಿ ಇರುತ್ತದೆ. ಮೂಲತಃ ಪ್ರಷ್ಯಾದವನಾದ ಈತ ಅಲ್ಲೂ ಫ್ಯಾಕ್ಟರಿಗಳ ಒಡೆಯನಾಗಿರುತ್ತಾನೆ. ಈತನ ಮಗನಾದ ಏಂಗಲ್ಸ್ (ಜೂನಿಯರ್)ಗೆ ತನ್ನ ತಂದೆ ಕಾರ್ಮಿಕರೊಡನೆ ಶೋಷಕನಂತೆ ನಡೆದುಕೊಳ್ಳುವ ರೀತಿಯ ಬಗೆಗೆ ಜುಗುಪ್ಸೆ ಇರುತ್ತದೆ. ಒಮ್ಮೆ ಮಹಿಳಾ ಕಾರ್ಮಿಕಳಾದ ಮೇರಿ ಬರ್ನ್ಸ್ (ನಟಿ ಹನ್ನಾ ಸ್ಟೀಲ್) ಏಂಗೆಲ್ಸ್ (ಸೀನಿಯರ್)ನ ಕಾರ್ಮಿಕ ವಿರೋಧಿ ವರ್ತನೆಯನ್ನು ವಿರೋಧಿಸಿ ಕೆಲಸದಿಂದ ಹೊರನಡೆಯುತ್ತಾಳೆ. ಮಗ ಏಂಗೆಲ್ಸ್ ಆಕೆ ವಾಸಿಸುವ ಬಡ ಕಾರ್ಮಿಕರ ಕಾಲೋನಿಗೆ ಬರುತ್ತಾನೆ.

# ದಿ ಯಂಗ್ ಕಾರ್ಲ್ ಮಾರ್ಕ್ಸ್

ಇತ್ತೀಚೆಗೆ ಬೆಂಗಳೂರಿನಲ್ಲಿ ಜರುಗಿದ ಹತ್ತನೇ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ಮೊದಲನೇ ದಿನವೇ ಸುಚಿತ್ರಾ ಫಿಲ್ಮ್ ಸೊಸೈಟಿಯ ಸ್ನೇಹಿತರಾದ ಶಶಿಧರ್‌ರನ್ನು ಭೇಟಿಯಾಗುವ ಸಂದರ್ಭ ಸಿಕ್ಕಿತ್ತು. ಅವರು ಮಾತನಾಡುತ್ತ, "ಗೋವಾ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಒಂದು ಸಿನಿಮಾ ವೀಕ್ಷಿಸಿದಾಗ ನಿಮ್ಮನ್ನು ನೆನಪಿಸಿಕೊಂಡೆ. ಅದೇ 'ದಿ ಯಂಗ್ ಕಾರ್ಲ್ ಮಾರ್ಕ್ಸ್'. ಇಲ್ಲಿ ಪ್ರದರ್ಶನಗೊಳ್ಳುತ್ತಿದೆ, ಖಂಡಿತ ವೀಕ್ಷಿಸಿ. ಮಿಸ್ ಮಾಡಬೇಡಿ..." ಎಂದು ಪ್ರೀತಿಯಿಂದ ಒತ್ತಾಯಿಸಿದ್ದರು. ಚಲನಚಿತ್ರೋತ್ಸವದಲ್ಲಿ ವೀಕ್ಷಿಸಿದ ತರುವಾಯ ಮಾರ್ಚ್ ಮಾಹೆಯ ಅಂತ್ಯದಲ್ಲಿ ಈ ಸಿನಿಮಾವನ್ನು ಸುಚಿತ್ರಾ ಫಿಲ್ಮ್ ಸೊಸೈಟಿಯಲ್ಲಿ ಕೆಲವು ಸಂಗಾತಿಗಳೊಡನೆ ಪುನಃ ವೀಕ್ಷಿಸುವ ಸದವಕಾಶ ದೊರೆಯಿತು.

ಈ ಚಲನಚಿತ್ರದ ಪ್ರಾರಂಭದಲ್ಲಿ ಅಶ್ವಾರೂಢರಾದ ಪ್ರಷ್ಯಾದ ಸೈನಿಕರು ಕಾಡಿನಲ್ಲಿ ಉದುರಿದ ಕೊಂಬೆಗಳನ್ನು, ಪುರಲೆಗಳನ್ನು ಹೆಕ್ಕುತ್ತಿರುವ, ಬಡತನದ ಬೇಗೆಗೆ ತುತ್ತಾಗಿರುವ ಬಡ ರೈತರ ಮೇಲೆ ಮುಗಿಬೀಳುತ್ತಾರೆ. ರಕ್ತಪಾತವಾಗುತ್ತದೆ; ಮಾರಣಹೋಮವೂ ಕೂಡ. ವಾಯ್ಸ್‌ಓವರ್‌ನಲ್ಲಿ ಮಾರ್ಕ್ಸ್ ಕೈಗಾರಿಕಾ ಕ್ರಾಂತಿಯ ಬಗೆಗೆ ಪ್ರಸ್ತಾಪಿಸುತ್ತ, ಸೈನಿಕರ ಆಕ್ರಮಣಕ್ಕೆ ಸ್ಪಂದಿಸುತ್ತ, "ನೀವು ಕಳ್ಳತನ ಮತ್ತು ಸಂಗ್ರಹದ ಕಾರ್ಯದ ನಡುವಿನ ವ್ಯತ್ಯಾಸವನ್ನು ಅಳಿಸಿಹಾಕಿರುವಿರಿ..." ಎಂದು ಗುಡುಗುತ್ತಾನೆ. ನಂತರದ ದೃಶ್ಯಗಳು ಯುವ ಮಾರ್ಕ್ಸ್ [ನಟ ಆಗಸ್ಟ್ ಡೈಹ್ಲ್ (August Diehl)] ಎದುರಿಸಿದ ಬಹಿಷ್ಕಾರದತ್ತ ಬೆಳಕು ಚೆಲ್ಲುತ್ತವೆ. ಮಾರ್ಚ್ ೧೮೪೩ರಲ್ಲಿ ಮಾರ್ಕ್ಸ್ ಸಂಪಾದಕನಾಗಿದ್ದ 'ರೈನ್ ಪತ್ರಿಕೆ' ಆಡಳಿತಾರೂಢ ರಾಜ್ಯಪ್ರಭುತ್ವದ ಕೆಂಗಣ್ಣಿಗೆ ಗುರಿಯಾಯಿತು. ಆತ ಮತ್ತು ಆತನ ಇತರ ಕೆಲವು ಪತ್ರಕರ್ತ ಸಂಗಾತಿಗಳನ್ನು ಬಂಧಿಸಲಾಯಿತು. ಇಲ್ಲಿಂದ ೧೮೪೭ರ ಕೊನೆಯಲ್ಲಿ 'ಕಮ್ಯುನಿಸ್ಟ್ ಪ್ರಣಾಳಿಕೆ'ಯನ್ನು ಫ್ರೆಡರಿಕ್ ಏಂಗೆಲ್ಸ್ [ನಟ ಸ್ಟೀಫನ್ ಕೊನಾರ್ಕ್ಸ್ (Stefan Konarske)] ಜೊತೆ ಬರೆಯುವವರೆಗೆ ಅಂದರೆ ನಾಲ್ಕು ವರ್ಷಗಳ ಅವಧಿಯ ಮಾರ್ಕ್ಸ್‌ನ ಜೀವನದ ಬೆಳವಣಿಗೆಗಳನ್ನು ಈ ಚಲನಚಿತ್ರದಲ್ಲಿ ಬಿಂಬಿಸಲಾಗಿದೆ.

'ರೈನ್ ಪತ್ರಿಕೆ' ಸ್ಥಗಿತಗೊಂಡ ತರುವಾಯ, ಒಬ್ಬ ಧನಿಕ ಪೋಷಕ ಆರ್ನಾಲ್ಡ್ ರೂಗ್ (Arnold Ruge) ಮಾರ್ಕ್ಸ್ ಪ್ಯಾರಿಸ್‌ನಲ್ಲಿ ನೆಲೆ ನಿಂತರೆ ಸಹಾಯ ಮಾಡುವುದಾಗಿ ಭರವಸೆ ನೀಡುತ್ತಾನೆ. ಇದರಿಂದ ಮಾರ್ಕ್ಸ್‌ನಿಗೆ ಹೆಗೆಲ್ (ಈತ ಜರ್ಮನಿಯ ಪ್ರಮುಖ ತತ್ವಶಾಸ್ತ್ರಜ್ಞ ಹಾಗೂ ಭಾವನಾವಾದಿಯಾಗಿದ್ದ. ಆತನ ಗತಿತಾರ್ಕಿಕ ಸಿದ್ಧಾಂತ ಹಾಗೂ ಭಾವನಾವಾದಿ ಪರಿಗಣನೆ ಯೂರೋಪಿನ ತತ್ವಶಾಸ್ತ್ರದ ದಿಕ್ಕನ್ನೇ ಬದಲಾಯಿಸಿತು) ನಂತರದ ತತ್ವಶಾಸ್ತ್ರೀಯ ಹುಡುಕಾಟಗಳನ್ನು ನಡೆಸಲು ಅವಕಾಶ ದೊರೆಯಿತು. ಇದಕ್ಕೆ ಮುನ್ನವೇ ಮಾರ್ಕ್ಸ್‌ನಿಗೆ ಪ್ರಷ್ಯಾದ ಟ್ರೆಯರ್‌ನ (ಈ ಸ್ಥಳದಲ್ಲೇ ಮಾರ್ಕ್ಸ್ ಜನಿಸಿದ್ದು) ಶ್ರೀಮಂತ ಹಿನ್ನೆಲೆಯ ಜೆನ್ನಿ [ನಟಿ ವಿಕ್ಕಿ ಕ್ರೀಪ್ಸ್] (Vicky Krieps)] ಜೊತೆ

ಮ. ಶ್ರೀ. ಮುರಳಿ ಕೃಷ್ಣ

ಮದುವೆಯಾಗಿರುತ್ತದೆ. ಅವರಿಗೆ ಒಂದು ಮಗುವೂ ಆಗಿರುತ್ತದೆ. ಮುಂದಿನ ದೃಶ್ಯಗಳು ವೀಕ್ಷಕರನ್ನು ಇಂಗ್ಲೆಂಡ್‌ಗೆ ಕರೆದೊಯ್ಯುತ್ತವೆ. ಮ್ಯಾಂಚೆಸ್ಟರ್‌ನಲ್ಲಿ ಫ್ರೆಡರಿಕ್ ಏಂಗೆಲ್ಸ್ (ಸೀನಿಯರ್)ನ ಒಂದು ಹೊಲಿಗೆ ನೂಲಿನ ಫ್ಯಾಕ್ಟರಿ ಇರುತ್ತದೆ. ಮೂಲತಃ ಪ್ರಷ್ಯಾದವನಾದ ಈತ ಅಲ್ಲೂ ಫ್ಯಾಕ್ಟರಿಗಳ ಒಡೆಯನಾಗಿರುತ್ತಾನೆ. ಈತನ ಮಗನಾದ ಏಂಗಲ್ಸ್ (ಜೂನಿಯರ್)ಗೆ ತನ್ನ ತಂದೆ ಕಾರ್ಮಿಕರೊಡನೆ ಶೋಷಕನಂತೆ ನಡೆದುಕೊಳ್ಳುವ ರೀತಿಯ ಬಗೆಗೆ ಜುಗುಪ್ಸೆ ಇರುತ್ತದೆ. ಒಮ್ಮೆ ಮಹಿಳಾ ಕಾರ್ಮಿಕಳಾದ ಮೇರಿ ಬರ್ನ್ಸ್ (ನಟಿ ಹನ್ನಾ ಸ್ಟೀಲ್) ಏಂಗೆಲ್ಸ್ (ಸೀನಿಯರ್)ನ ಕಾರ್ಮಿಕ ವಿರೋಧಿ ವರ್ತನೆಯನ್ನು ವಿರೋಧಿಸಿ ಕೆಲಸದಿಂದ ಹೊರನಡೆಯುತ್ತಾಳೆ. ಮಗ ಏಂಗೆಲ್ಸ್ ಆಕೆ ವಾಸಿಸುವ ಬಡ ಕಾರ್ಮಿಕರ ಕಾಲೋನಿಗೆ ಬರುತ್ತಾನೆ. ಮೇರಿ ಜೊತೆಗಿರುವ ಕಾರ್ಮಿಕರು ಆತನ ಬಗೆಗೆ ಸಂಶಯಪಟ್ಟು, ಅವರಲ್ಲೊಬ್ಬ ಏಂಗೆಲ್ಸ್‌ನ ಮುಖಕ್ಕೆ ಗುದ್ದುತ್ತಾನೆ. ರಕ್ತ ಒಸರುತ್ತದೆ. ನಂತರ ಏಂಗೆಲ್ಸ್ ಮತ್ತು ಮೇರಿ ನಡುವೆ ಅನುರಾಗ ಚಿಗುರುತ್ತದೆ! ಇವರಿಬ್ಬರ ಪರಸ್ಪರ ಆಕರ್ಷಣೆಗೆ ರ್‍ಯಾಡಿಕಲ್ ಐಡಿಯಾಗಳೂ ಕಾರಣವಾಗುತ್ತವೆ.

ಪ್ಯಾರಿಸ್‌ನಲ್ಲೇ ಮಾರ್ಕ್ಸ್ ಮತ್ತು ಏಂಗೆಲ್ಸ್‌ರ ಪ್ರಥಮ ಭೇಟಿಯಾಗುತ್ತದೆ. ಮೊದಲು ಬಹುಶಃ ಏಂಗೆಲ್ಸ್‌ನ ಶ್ರೀಮಂತ ಹಿನ್ನೆಲೆಯ ಕಾರಣದಿಂದ ಮಾರ್ಕ್ಸ್ ಭಾವಸ್ಪಂದನದಿಂದ ಪ್ರತಿಕ್ರಿಯಿಸುವುದಿಲ್ಲ. ಆದರೆ ಕೆಲವು ಸಂಭಾಷಣೆಗಳ, ಭೇಟಿಗಳ ತರುವಾಯ ಅವರ ನಡುವೆ ಗಾಢವಾದ ಸ್ನೇಹ

ನೆಲೆಗೊಳ್ಳುತ್ತದೆ. ಏಂಗೆಲ್ಸ್ ಬರೆದ 'ದಿ ಕಂಡೀಶನ್ ಆಫ್ ವರ್ಕಿಂಗ್ ಕ್ಲಾಸ್ ಇನ್ ಇಂಗ್ಲೆಂಡ್' ಕೃತಿ ಮಾರ್ಕ್ಸ್‌ಗೆ ಮೆಚ್ಚುಗೆಯಾಗುತ್ತದೆ. ಏಂಗೆಲ್ಸ್‌ಗೆ ಮಾರ್ಕ್ಸ್‌ನ ತತ್ವಶಾಸ್ತ್ರೀಯ ಜ್ಞಾನ ಹಾಗೂ ಸಮಾಜವಾದಿ ಸಿದ್ಧಾಂತದ ನಿಷ್ಠೆ ಹಾಗೂ ನಿಖರವಾದ ಪ್ರತಿಪಾದನೆ ಇಷ್ಟವಾಗುತ್ತದೆ. ಚಲನಚಿತ್ರ ಮುಂದುವರೆದಂತೆ, ಆ ಕಾಲಮಾನದಲ್ಲಿ ಪ್ರಸಿದ್ಧ ರಾಜಕೀಯ ಮತ್ತು ಸಮಾಜವಾದಿ ಚಿಂತಕನಾಗಿದ್ದ ಪಿಯರ್ ಜೋಸೆಫ್ ಪ್ರೂಧೋನ್ (ಈತ ಫ್ರಾನ್ಸ್‌ನ ಅರ್ಥಶಾಸ್ತ್ರಜ್ಞ, ತತ್ವಜ್ಞಾನಿ ಮತ್ತು ಸಂಸತ್ತಿನ ಸದಸ್ಯನೂ ಆಗಿದ್ದ. ತನ್ನನ್ನು 'ಅರಾಜಕತಾವಾದಿ' ಎಂದು ಪ್ರಥಮವಾಗಿ ಕರೆದುಕೊಂಡ ವ್ಯಕ್ತಿ ಅವನು), ರಷ್ಯಾದ ಮೈಖೆಲ್ ಬಕುನಿನ್, ವಿಲ್‌ಹೆಲ್ಮ್ ವೀಟ್‌ಲಿಂಗ್ (Wilhelm Weitling) ಮತ್ತು ಇತರರ ನಡುವೆ ಮಾರ್ಕ್ಸ್ ಮತ್ತು ಏಂಗೆಲ್ಸ್ ನಡೆಸುವ ಸಮಾಜವಾದದ ಬಗೆಗಿನ ವಿಚಾರ ವಿನಿಮಯಗಳು, ವಾಗ್ವಾದಗಳನ್ನು ಈ ಚಲನಚಿತ್ರ ಗಮನೀಯವಾಗಿ ಅನಾವರಣಗೊಳಿಸುತ್ತದೆ. "ಆಸ್ತಿಯೆಂದರೆ, ಅದು ಕಳುವು..." ಎಂಬ ಪ್ರೂಧೋನ್‌ನ ಪ್ರಸಿದ್ಧ ಹೇಳಿಕೆಗೆ, ಆತನ ಸಭೆಯಲ್ಲೇ "ಯಾರ ಆಸ್ತಿ?" ಎಂದು ಮಾರ್ಕ್ಸ್ ನೇರವಾಗಿ ಪ್ರಶ್ನಿಸುತ್ತಾನೆ! ಪ್ರೂಧೋನ್ 'ಫಿಲಾಸಫಿ ಆಫ್ ಪಾವರ್ಟಿ' ಎಂಬ ಪುಸ್ತಕವನ್ನು ಬರೆಯುತ್ತಾನೆ. ಇದಕ್ಕೆ ಉತ್ತರಿಸುತ್ತ ಮಾರ್ಕ್ 'ಪಾವರ್ಟಿ ಆಫ್ ಫಿಲಾಸಫಿ' ಎಂಬ ಕೃತಿಯನ್ನು ರಚಿಸುತ್ತಾನೆ.

ಕ್ರಮೇಣ ಮಾರ್ಕ್ಸ್ ಮತ್ತು ಏಂಗೆಲ್ಸ್‌ರಿಗೆ ಆ ಕಾಲದಲ್ಲಿದ್ದ ಸಮಾಜವಾದಿಗಳ ಕುರಿತು ಭ್ರಮನಿರಸನವಾಗುತ್ತದೆ. ಅಂತಹವರು ಸಮಾಜವಾದದ ಪ್ರಸ್ತಾಪ ಮಾಡುತ್ತಿದ್ದರೂ, ಯಥಾಸ್ಥಿತಿವಾದಿಗಳೆಂದು ಅವರು ಅಭಿಪ್ರಾಯಪಡುತ್ತಾರೆ. ಈ ನಿಟ್ಟಿನಲ್ಲೇ "ತತ್ವಶಾಸ್ತ್ರಜ್ಞರು ವಿಶ್ವವನ್ನು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಆದರೆ ಮುಖ್ಯ ವಿಷಯವೆಂದರೆ ಅದನ್ನು ಬದಲಾಯಿಸುವುದು" ಎಂಬ ಮಾರ್ಕ್ಸ್‌ನ ಹೇಳಿಕೆಗೆ ಅನುಗುಣವಾಗಿ ಸಂಗಾತಿಗಳಿಬ್ಬರೂ




ಸಮಾಜ ಪರಿವರ್ತನೆಯ ಸಮಾನತಾ ಸಿದ್ಧಾಂತಕ್ಕೆ ತಳಹದಿಯನ್ನು ನಿರ್ಮಿಸುತ್ತಾರೆ. ಅವರ ಹಾದಿ ಸುಗಮವಾಗಿರುವುದಿಲ್ಲ. ಮಾರ್ಕ್ಸ್‌ನಂತೂ ಆರ್ಥಿಕ ಮುಗ್ಗಟ್ಟಿನಿಂದ ಪರಿತಪಿಸುತ್ತಿರುತ್ತಾನೆ. ಏಂಗೆಲ್ಸ್ ತನ್ನ ಆತ್ಮೀಯ ಒಡನಾಡಿಗೆ ಎಲ್ಲ ರೀತಿಯ ಬೆಂಬಲ ನೀಡುತ್ತಾನೆ. ಆದರೆ ಅವರ ಮಿತ್ರತ್ವ ವೈಯಕ್ತಿಕ ಮಟ್ಟಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಅದಕ್ಕೆ ಸಮಷ್ಟಿ ಹಿತದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಆಯಾಮಗಳೂ ಇರುತ್ತವೆ. ಇವನ್ನೆಲ್ಲ ಈ ಚಲನಚಿತ್ರ ದಾಟಿಸುವುದರಲ್ಲಿ ಸಫಲವಾಗಿದೆ. ಅವರ ನಡುವಿನ ಅಭಿಪ್ರಾಯಭೇದಗಳ ಒಂದೆರಡು ಝಲಕುಗಳೂ ಇವೆ !

ಚಲನಚಿತ್ರದ ಕೊನೆಯ ಹಂತದಲ್ಲಿ 'ಲೀಗ್ ಆಫ್ ದಿ ಜಸ್ಟ್'ನಲ್ಲಿನ ಮಾರ್ಕ್ಸ್ ಮತ್ತು ಏಂಗೆಲ್ಸ್‌ರ ಚಟುವಟಿಕೆಗಳ ಮೇಲೆ ಬೆಳಕನ್ನು ಚೆಲ್ಲಲಾಗಿದೆ. ಆ ಕಾಲದಲ್ಲಿ ಅವರು ತಮ್ಮ ಸಮಾಜವಾದಿ ಪರಿಕಲ್ಪನೆಗಳಿಗೆ ಮೂರ್ತ ರೂಪ ನೀಡಲು ಅಂತರರಾಷ್ಟ್ರೀಯ ಮಟ್ಟದಲ್ಲಿ ದುಡಿಯುವ ವರ್ಗದ ಪಕ್ಷವನ್ನು ಕಟ್ಟಲು ಆಲೋಚಿಸುತ್ತಿರುತ್ತಾರೆ. ಇದಕ್ಕೆ ವೈಜ್ಞಾನಿಕ ಅಡಿಪಾಯವನ್ನು ನೀಡಲು ಲೀಗ್‌ನೊಳಗೆ ಅವರು ಅನೇಕ ಸಂಘರ್ಷಗಳನ್ನು ಮಾಡ ಬೇಕಾಗುತ್ತದೆ. ಏಕೆಂದರೆ, ಅಲ್ಲಿರುವವರ ನಡುವೆಯೂ ಪೆಟ್ಟಿ ಬೂರ್ಶ್ವಾ ಪ್ರವೃತ್ತಿಗಳು ಇರುತ್ತವೆ. ಅಂತಿಮವಾಗಿ ೧೮೪೭ರಲ್ಲಿ 'ಲೀಗ್ ಆಫ್ ದಿ ಜಸ್ಟ್'ನ "ಎಲ್ಲ ಮಾನವರು ಅಣ್ಣತಮ್ಮಂದಿರು" ಎಂಬ ಘೋಷಣೆಯನ್ನು "ಪ್ರಪಂಚದ ಶ್ರಮಿಕರೇ ಒಂದಾಗಿ" ಎಂದು ಪರಿವರ್ತಿಸಿ 'ಕಮ್ಯುನಿಸ್ಟ್ ಲೀಗ್' ಸ್ಥಾಪಿಸುವುದರಲ್ಲಿ ಯಶಸ್ವಿಯಾಗುತ್ತಾರೆ. ಈ ಸಂದರ್ಭದಲ್ಲಿ ಜರುಗುವ ವಿದ್ಯಮಾನಗಳು ಸಿನಿಮಾದಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿವೆ. ಮಾರ್ಕ್ಸ್, ಏಂಗೆಲ್ಸ್, ಜೆನ್ನಿ 'ಕಮ್ಯುನಿಸ್ಟ್ ಪ್ರಣಾಳಿಕೆ'ಯ ತಯಾರಿಕೆಯ ದೃಶ್ಯದೊಂದಿಗೆ ಚಲನಚಿತ್ರ ಕೊನೆಗೊಳ್ಳುತ್ತದೆ. ನಂತರ ತೋರಿಸುವ ಮಾಂಟಾಷ್‌ನಲ್ಲಿ ಚೆ ಗೆವಾರ, ವಿಯಟ್ನಾಂ ಯುದ್ಧದ ವಿರುದ್ಧದ ಪ್ರತಿಭಟನೆಗಳು, ಬರ್ಲಿನ್ ಗೋಡೆಯ ಕುಸಿತ ಮತ್ತು ಇನ್ನೂ ಕೆಲವು ಅಂಶಗಳಿವೆ.

ಈ ಚಲನಚಿತ್ರದಾದ್ಯಂತ ಮಾರ್ಕ್ಸ್ ಮತ್ತು ಏಂಗೆಲ್ಸ್‌ರ ಪಾತ್ರಗಳ ಸುತ್ತ ಪ್ರಭಾವಳಿಯನ್ನು ಕಟ್ಟಲಾಗಿಲ್ಲ. ಅವರನ್ನು ಉಪ್ಪು, ಹುಳಿ, ಖಾರ ತಿನ್ನುವ ಮಾನವರಂತೆಯೇ ಬಿಂಬಿಸಲಾಗಿದೆ. ಜೆನ್ನಿ ಮತ್ತು ಮೇರಿ ಬರ್ನ್ಸ್ ಪಾತ್ರಗಳು ಅಧೀನವಾಗದೆ, ಗಟ್ಟಿಯಾಗಿ ಮೂಡಿಬಂದಿವೆ. ರಾಜಕೀಯ/ ಸಿದ್ಧಾಂತಕ್ಕೆ ಸಂಬಂಧಿಸಿದ ವಿವಾದಗಳ ಆ್ಯಕ್ಷನ್‌ಗಳು ಒಂದರ ನಂತರ ಮತ್ತೊಂದು ತ್ವರಿತವಾಗಿ ಜರುಗುವುದರಿಂದ, ಅವುಗಳಲ್ಲಿನ ಕಂಟೆಂಟ್ ಸ್ವಲ್ಪ ಮಸುಕಾಗಿ ಮೂಡಿವೆ ಎಂದು ಭಾಸವಾಗುತ್ತದೆ. ಪಾತ್ರಧಾರಿಗಳ ನಟನೆ ಉತ್ತಮವಾಗಿದೆ.

ಹೈತಿ ದೇಶದ ರೌಲ್ ಪೆಕ್ ಈ ಚಲನಚಿತ್ರದ ನಿರ್ದೇಶಕರು. ಅವರು ಅಲ್ಪಕಾಲ ಆ ದೇಶದ ಸಂಸ್ಕೃತಿ ಸಚಿವರಾಗಿದ್ದರು. ತಮ್ಮ ಶಿಕ್ಷಣದ ಸಮಯದಲ್ಲೇ ಅವರು 'ದಾಸ್ ಕ್ಯಾಪಿಟಲ್' ಮತ್ತಿತರ ಮಾರ್ಕ್ಸ್‌ವಾದಿ ವಿಷಯಗಳನ್ನು ಅಧ್ಯಯನದ ಭಾಗವಾಗಿ ಓದಿದ್ದರು. ೨೦೦೦ರಲ್ಲಿ ತೆರೆಕಂಡ ಅವರ ನಿರ್ದೇಶನದ 'ಲುಮುಂಬ' (ಕಾಂಗೊ ದೇಶದ ನಾಯಕ) ಮತ್ತು ೨೦೧೬ರಲ್ಲಿ ಲೋಕಾರ್ಪಣೆಯಾದ 'ಐ ಯಾಮ್ ನಾಟ್ ಯುವರ್ ನೀಗ್ರೊ' (ಅಮೇರಿಕದ ಕಾದಂಬರಿಕಾರ ಹಾಗೂ ಸಾಮಾಜಿಕ ವಿಶ್ಲೇಷಕ)ಜೇಮ್ಸ್ ಬಾಲ್ಡ್‌ವಿನ್ ಕುರಿತ ಬಯೋಪಿಕ್ ಚಲನಚಿತ್ರಗಳು ವೀಕ್ಷಕರು ಮತ್ತು ಸಿನಿಮಾ ವಿಶ್ಲೇಷಕರಿಂದ ಮನ್ನಣೆ ಪಡೆದವು. ಅವರು ಕೆಲವು ಫೀಚರ್ ಫಿಲ್ಮ್‌ಗಳನ್ನೂ ನಿರ್ದೇಶಿಸಿದ್ದಾರೆ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ३८, ३ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ
ಬೆಂಗಳೂರು – ೫೬೦ ೦೬೧ ೦೦೦



ಜರ್ಮನಿ ಇತಿಹಾಸ ಪ್ರಸಿದ್ಧರಾದ ಕ್ರಾಂತಿಕಾರಿಗಳು, ತತ್ವಶಾಸ್ತ್ರಜ್ಞರು ಮತ್ತು ಚಿಂತಕರಿಗೆ ಜನ್ಮ ಕೊಟ್ಟ ನಾಡು. ಅಂತಹವರಲ್ಲಿ ಹತ್ತೊಂಭತ್ತನೆಯ ಶತಮಾನದ ವಿಶ್ವವಿಖ್ಯಾತ ದಾರ್ಶನಿಕ, ಮಹಾನ್ ಮಾನವತಾವಾದಿ ಕಾರ್ಲ್ ಮಾರ್ಕ್ಸ್ ಒಬ್ಬರು. ಐದು ವರ್ಷಗಳ ಹಿಂದೆ ನಾನು ಜರ್ಮನಿಯ ಪ್ರವಾಸ ಕೈಗೊಂಡಾಗ ನಾನು ಓದಿಕೊಂಡ, ತಿಳಿದುಕೊಂಡ ಕ್ರಾಂತಿಕಾರಿಗಳು, ಸಾಹಿತಿ, ಕಲಾವಿದರು ಮುಂತಾದವರ ಮ್ಯೂಸಿಯಂಗಳನ್ನು ನೋಡುವುದು ನನ್ನ ಮುಖ್ಯ ಆದ್ಯತೆಯಾಗಿತ್ತು. ಪಶ್ಚಿಮ ಜರ್ಮನಿಯ ಬಾನ್ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ನನ್ನ ಮಗಳು ಚರಿತ್ರೆಯ ಪುಟಗಳಲ್ಲಿ ಅಮರಾಂಕಿತರಾಗಿರುವ ಇತಿಹಾಸ ಪುರುಷರು ಹುಟ್ಟಿದ, ಓದಿದ ಮತ್ತು ಬದುಕಿದ ವಿವರಗಳನ್ನು ಮತ್ತು ಮಾಹಿತಿಯನ್ನು ಕಲೆಹಾಕಿ ಒಂದು ನಕ್ಷೆಯನ್ನು ತಯಾರಿಸಿ ಅಲ್ಲಿಗೆಲ್ಲಾ ನಮ್ಮನ್ನು ಕರೆದೊಯ್ದದ್ದು ಒಂದು ಮರೆಯಲಾಗದ ಅನುಭವ. ಮಾರ್ಕ್ಸ್ ಹುಟ್ಟಿ ೨೦೦ ವರ್ಷಗಳ ಸಂಭ್ರಮಾಚರಣೆಯು ನಡೆಯುತ್ತಿರುವ ಈ ಸಂಭ್ರಮದಲ್ಲಿ ನಾನು ಐದು ವರ್ಷಗಳ ಹಿಂದೆ ಟ್ರೈಯರ್‌ಗೆ ಹೋಗಿದ್ದ ಅನುಭವವನ್ನು ನಿಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದೀನಿ.

# ಟ್ರೈಯರ್‌ನಲ್ಲಿರುವ ಕಾರ್ಲ್ ಮಾರ್ಕ್ಸ್ ಮ್ಯೂಸಿಯಂ

**ಡಾ॥ ಎನ್. ಗಾಯತ್ರಿ**




**ಕಾ**ರ್ಲ್ ಮಾರ್ಕ್ಸ್ ಹುಟ್ಟಿದ ಟ್ರೈಯರ್‌ನ ಮನೆಯೇ ಮ್ಯೂಸಿಯಂ ಆಗಿರುವುದರಿಂದ ಅದನ್ನು ನೋಡಲು ನಾವು ಉತ್ಸುಕರಾಗಿದ್ದೆವು. ನಾವು ಹೋದ ಹಿಂದಿನ ವರ್ಷವಷ್ಟೇ ನನ್ನ ಮಗಳು ಈ ಮ್ಯೂಸಿಯಂ ನೋಡಲು ಅವಳ ಸ್ನೇಹಿತರೊಂದಿಗೆ ಹೋಗಿದ್ದಳು. ಆಗ ಅದು ದುರಸ್ತಿಯಲ್ಲಿದ್ದು ಸಾರ್ವಜನಿಕರ ಭೇಟಿಗೆ ರದ್ದಾಗಿದ್ದರಿಂದ ಅದನ್ನು ನೋಡದೆ ಹಾಗೇ ಹಿಂತಿರುಗಿದ್ದಳು. ಆದ್ದರಿಂದ ಈ ಬಾರಿ ನಮ್ಮೊಡನೆ ಬಂದಾಗ ಆ ಜಾಗದ ಬಗೆಗೆ ಒಂದು ಸ್ಪಷ್ಟ ಚಿತ್ರಣವಿತ್ತು. ಅದೇಕೋ ನಮಗೆ ಟ್ರೈಯರ್‌ನಲ್ಲಿ ಉಳಿದುಕೊಳ್ಳಲು ಸರಿಯಾದ ವಾಸ್ತವ್ಯ ಸಿಕ್ಕಲಿಲ್ಲ. ಅದಕ್ಕೆ ಟ್ರೈಯರ್‌ಗೆ ಅಂಟಿಕೊಂಡಂತೆಯೇ ಇರುವ ಲಕ್ಸಂಬರ್ಗ್ ಪಟ್ಟಣದಲ್ಲಿ ಉಳಿದುಕೊಂಡು ಈ ಮ್ಯೂಸಿಯಂಗೆ ಭೇಟಿ ನೀಡುವುದೆಂದು ನಿರ್ಧರಿಸಿದೆವು. ಈ ಪ್ರಯಾಣದಲ್ಲಿ ನನ್ನ ಜೊತೆ ನನ್ನ ಮಗಳು ಮತ್ತು 'ಹೊಸತು' ಪತ್ರಿಕೆಯ ಸಂಪಾದಕರಾದ ಡಾ॥ ಜಿ. ರಾಮಕೃಷ್ಣ ಕೂಡ ಇದ್ದರು.

ಬಾನ್‌ನಿಂದ ಡಾಯಿಷ್ ಬಾನ್ ರೈಲಿನಲ್ಲಿ ೧೪೬ ಕಿಲೋಮೀಟರ್ ಕ್ರಮಿಸಲು ಲಕ್ಸಂಬರ್ಗ್‌ಗೆ ಕೇವಲ ಎರಡೂವರೆ ಘಂಟೆಗಳ ಪ್ರಯಾಣ. ಲಕ್ಸಂಬರ್ಗ್ ಯೂರೋಪಿನ ಒಂದು ಸಣ್ಣ ದೇಶ. ಬೆಲ್ಜಿಯಂ, ಫ್ರಾನ್ಸ್ ಮತ್ತು ಜರ್ಮನಿಯಿಂದ ಆವೃತವಾಗಿದೆ. ಹೆಚ್ಚು ಕಾಡು-ಮೇಡುಗಳಿಂದ ಕೂಡಿದ್ದು ಕಣ್ಣಿಗೆ ಹಸಿರಾಗಿದೆ. ಬಹು ಭಾಷೆಯ, ಬಹು ಸಂಸ್ಕೃತಿಯ ಈ ಪುಟ್ಟ ಕಾಸ್ಮೊಪಾಲಿಟನ್ ದೇಶದಲ್ಲಿ ಸುಮಾರು ಒಂದು ಲಕ್ಷದಷ್ಟು ಜನಸಂಖ್ಯೆಯಿದ್ದು ಅದರಲ್ಲಿ ಬಹುಭಾಗ ೧೪೩ ದೇಶಗಳಿಂದ ಬಂದವರಾಗಿರುತ್ತಾರೆ. ಒಟ್ಟಿನಲ್ಲಿ ಹಣಕಾಸು ಯೂನಿಯನ್ನಾದ ಡಚಿಯ ಆಡಳಿತ ರಾಜಧಾನಿಯಾಗಿರುವ ಲಕ್ಸಂಬರ್ಗ್ ಭೇಟಿ ನಿಜಕ್ಕೂ ಆಹ್ಲಾದಕರವಾಗಿತ್ತು. ಇಡೀ ದಿನ ಈ ಪಟ್ಟಣದ ಎಲ್ಲಾ ಪ್ರವಾಸಿ ಸ್ಥಳಗಳನ್ನು ಸುತ್ತಾಡಿ ರಾತ್ರಿಗೆ ಹೊಟೆಲ್ ಪಿಜ್ಜಾರಿಯಾ ರೆಸ್ಟೋರೆಂಟ್‌ನಲ್ಲಿ ತಂಗಿದ್ದು ಮಾರನೆಯ ದಿನ ಬೆಳಗ್ಗೆ ಟ್ರೈಯರ್‌ನತ್ತ ಪ್ರಯಾಣ ಬೆಳೆಸಿದೆವು. ಇಲ್ಲಿಂದ ಟ್ರೈಯರ್‌ಗೆ ರೈಲಿನಲ್ಲಿ ಕೇವಲ ನಲವತ್ತು ನಿಮಿಷಗಳ ಪ್ರಯಾಣ. ನಲವತ್ತೆಂಟು ಕಿಲೋಮೀಟರುಗಳ ಈ ದೂರವನ್ನು ಕ್ರಮಿಸುವುದೇ ಗೊತ್ತಾಗದಿರುವಷ್ಟು ನಯನ ಮನೋಹರವಾದ ದೃಶ್ಯಗಳು ದಾರಿಯುದ್ದಕ್ಕೂ




***ಕಾರ್ಲ್ ಮಾರ್ಕ್ಸ್ ಮನೆಯ ಮುಂದೆ***
***ಡಾ॥ ಜಿ. ರಾಮಕೃಷ್ಣ ಮತ್ತು ಡಾ. ಎನ್. ಗಾಯತ್ರಿ***

ಸಿಕ್ಕುತ್ತವೆ. ಬಣ್ಣ ಬಣ್ಣದ ಹೂಗಿಡಗಳು, ಹಚ್ಚ ಹಸಿರಿನ ಹುಲ್ಲುಗಾವಲುಗಳನ್ನು ಆನಂದಿಸುತ್ತಾ ಪ್ರಯಾಣ ಮಾಡುವುದರೊಳಗೆ ಟ್ರೈಯರ್ ತಲುಪಿಯಾಗಿತ್ತು.

ಜರ್ಮನಿಯ ನೈರುತ್ಯ ದಿಕ್ಕಿನಲ್ಲಿರುವ ಪಟ್ಟಣ ಟ್ರೈಯರ್. ಮೊಸೆಲ್ ದ್ರಾಕ್ಷಿ ತೋಟಗಳ ಪ್ರಾಂತ್ಯ ಒಂದು ಕಡೆ, ಮತ್ತೊಂದು ಕಡೆ  ಸುಂದರ ಲಕ್ಸಂಬರ್ಗ್ ಪಟ್ಟಣದ ಸರಹದ್ದು. ದ್ರಾಕ್ಷಿ ತೋಟದ ಗುಡ್ಡಗಳು ಕೆಂಪು ಮರಳುಗಲ್ಲುಗಳ ಬೆಟ್ಟಗಳು ಈ ಪಟ್ಟಣವನ್ನು ಮತ್ತಷ್ಟು ಮನೋಹರಗೊಳಿಸಿವೆ. ಮೂಲತಃ ರೋಮನ್ನರಿಂದ ಕಟ್ಟಲ್ಪಟ್ಟ ಈ ಪಟ್ಟಣದಲ್ಲಿ ರೋಮನ್ನರ ವಾಸ್ತುಶಿಲ್ಪದ ಹಲವಾರು ಕುರುಹುಗಳು ಇಂದಿಗೂ ಕಾಣಸಿಗುತ್ತವೆ. ಪೋರ್ಟಾ ನೈಗ್ರಾ ಗೇಟ್, ರೋಮನ್ನರ ಸ್ನಾನಗೃಹಗಳ ಪಳೆಯುಳಿಕೆಗಳು, ಹೊರವಲಯದಲ್ಲಿ ಒಂದು ಆ್ಯಂಪಿ ಥಿಯೇಟರ್, ಮೊಸೆಲ್ ನದಿಗೆ ಅಡ್ಡವಾದ ಸೇತುವೆ ಇವೆಲ್ಲವನ್ನೂ ನಗರದಲ್ಲಿ ಸುತ್ತಾಡುವಾಗ ಕಂಡೆವಾದರೂ ನಮ್ಮ ಮುಖ್ಯ ಗಮನ ಇದ್ದದು ಕಾರ್ಲ್ ಮಾರ್ಕ್ಸ್ ಹೌಸ್ ಮ್ಯೂಸಿಯಂಅನ್ನು ನೋಡುವುದಾಗಿತ್ತು. ರೈಲ್ವೇ ನಿಲ್ದಾಣದಿಂದ ಸ್ಥಳೀಯ ಟ್ರಾಮ್ ಹಿಡಿದು ಕಾರ್ಲ್ ಮಾರ್ಕ್ಸ್ ಮ್ಯೂಸಿಯಂಗೆ ಹೋಗುವಾಗ ಹಾದಿಯಲ್ಲೇ ರೋಮನ್ನರ ವಾಸ್ತುಶಿಲ್ಪಗಳನ್ನು ಮಗಳು ನಮಗೆ ತೋರಿಸುತ್ತಾ ಹೋದಳು.

ಆಧುನಿಕ ಸಮಾಜವಾದ ಮತ್ತು ಕಮ್ಯೂನಿಸಂನ ನೇತಾರನಾದ ಕಾರ್ಲ್ ಮಾರ್ಕ್ಸ್ ೧೮೧೮ರಲ್ಲಿ ಜನಿಸಿದ ಮನೆಯನ್ನೇ ಈಗ ಮ್ಯೂಸಿಯಂ ಆಗಿ ಪರಿವರ್ತಿಸಿದ್ದಾರೆ. ನಂಬರ್ ೧೦, ಬ್ರೂಕನ್ ಸ್ಟ್ರಾಸೆಯಲ್ಲಿರುವ "ಕಾರ್ಲ್ ಮಾರ್ಕ್ಸ್ ಹೌಸ್"ನ್ನು ೧೭೨೭ರಲ್ಲಿ ವಾಸದ ಮನೆಯನ್ನಾಗಿ ಕಟ್ಟಲಾಗಿತ್ತು. ೧೯೦೪ರವರೆಗೂ ಈ ಮನೆಯ ಪ್ರಾಮುಖ್ಯತೆಯನ್ನು ಯಾರೂ ಗಮನಿಸಿರಲಿಲ್ಲ. ಆ ನಂತರ ಜರ್ಮನಿಯ ಸೋಷಿಯಲ್ ಡೆಮೊಕ್ರಾಟಿಕ್ ಪಕ್ಷವು ಈ ಮನೆಯನ್ನು ಅತ್ಯಂತ ಶ್ರಮಪಟ್ಟು ೧೯೨೮ರಲ್ಲಿ ಕೊಂಡುಕೊಂಡಿತು. ೧೯೩೩ರಲ್ಲಿ ನಾಜಿ ಪಕ್ಷವು ಅಧಿಕಾರಕ್ಕೆ ಬಂದ ನಂತರ ಈ ಕಟ್ಟಡವನ್ನು ವಶಪಡಿಸಿಕೊಂಡು ಅದನ್ನು ಒಂದು ಮುದ್ರಣಾಲಯವನ್ನಾಗಿ ಪರಿವರ್ತಿಸಿತ್ತು.

೧೯೪೭ರ ಮೇ ೫ರಂದು ಈ ಕಟ್ಟಡವನ್ನು ಕಾರ್ಲ್ ಮಾರ್ಕ್ಸ್‌ನ ಜೀವನ ಮತ್ತು ಅವನ ಬರಹವನ್ನೊಳಗೊಂಡ ಮ್ಯೂಸಿಯಂ ಆಗಿ ಪರಿವರ್ತಿಸಲಾಯಿತು. ೧೯೬೮ರಲ್ಲಿ ಸೋಷಿಯಲ್ ಡೆಮೊಕ್ರಾಟಿಕ್ ಪಕ್ಷವು ಫ್ರೆಡ್ರಿಕ್ ಎಬರ್ಟ್ ಫೌಂಡೇಶನ್‌ನವರಿಗೆ ಈ ಮ್ಯೂಸಿಯಂನ್ನು ನೋಡಿಕೊಳ್ಳಲು ವಹಿಸಿತು. ದುರಸ್ತಿಗಾಗಿ ಒಂದು ವರ್ಷದಷ್ಟು ದೀರ್ಘ ಕಾಲ ಮುಚ್ಚಿದ್ದ ಈ ಮ್ಯೂಸಿಯಂನ್ನು ೧೯೮೩ರಲ್ಲಿ ಮಾರ್ಕ್ಸ್‌ನ ಮರಣ ಶತಮಾನೋತ್ಸವವನ್ನು ಆಚರಿಸುವ ಸಂದರ್ಭದಲ್ಲಿ ಪುನಃ ತೆರೆಯಲಾಯಿತು. ಆ ವೇಳೆಗೆ ಇದನ್ನು ಮೂರು ಮಹಡಿಯ ಕಟ್ಟಡವನ್ನಾಗಿ ವಿಸ್ತರಿಸಲಾಗಿತ್ತು. ಈಗ ಈ ಮ್ಯೂಸಿಯಂನಲ್ಲಿ ಸೋವಿಯೆತ್ ಯೂನಿಯನ್, ಚೀನ, ಮಧ್ಯ ಮತ್ತು ಪೂರ್ವ ಭಾಗದ ಯುರೋಪಿನ ಕಮ್ಯುನಿಸಂನ ಚರಿತ್ರೆಯನ್ನು ಕುರಿತ ವಿವರಗಳು ಪ್ರದರ್ಶಿತವಾಗಿವೆ. ಈ ಮ್ಯೂಸಿಯಂಗೆ ೩೨,೦೦೦ ಪ್ರವಾಸಿಗರು ಪ್ರತಿವರ್ಷ ಭೇಟಿ ನೀಡುತ್ತಾರೆ. ಅದರಲ್ಲಿ ಮೂರನೇ ಒಂದು ಭಾಗದಷ್ಟು ಪ್ರವಾಸಿಗರು ಚೀನಾದವರೇ ಆಗಿರುತ್ತಾರೆ. ಎಸ್‌ಡಿಪಿಯ ದೃಷ್ಟಿಯಲ್ಲಿ ಮಾರ್ಕ್ಸ್‌ವಾದವು ಅಷ್ಟಾಗಿ ಗೌರವ ಪಡೆದಿಲ್ಲ. ಆದ್ದರಿಂದ ಮಾರ್ಕ್ಸ್‌ನ ದೃಷ್ಟಿಕೋನವನ್ನು ಸಂಪೂರ್ಣವಾಗಿ ತಿರುಚುವಂತಹ ಕಥನಗಳು ಮ್ಯೂಸಿಯಂನಲ್ಲಿ ಹೇರಳವಾಗಿವೆ. ಉದಾಹರಣೆಗೆ, ರೂಡಿ ಡುಚ್ಕ ೧೯೬೭–೬೮ರ ವಿದ್ಯಾರ್ಥಿ ಚಳುವಳಿಗಳ ನಾಯಕ. ಅವನೊಬ್ಬ ಅರಾಜಕತಾವಾದಿ. ಅವನ ನೇತೃತ್ವದಲ್ಲಿ ಮಾತ್ರವೇ ಜರ್ಮನಿಯ ಕಮ್ಯುನಿಸ್ಟ್ ಪಕ್ಷವು ಮಾರ್ಕ್ಸ್‌ನ ಸಿದ್ಧಾಂತಕ್ಕೆ ಸ್ವಲ್ಪ ಶೋಭೆಯನ್ನು ಪಡೆದಿತ್ತು ಎಂಬ ಮಾತುಗಳನ್ನು ಮ್ಯೂಸಿಯಂನಲ್ಲಿ ಪ್ರತಿಫಲಿಸಲಾಗಿದೆ.

ನಾವು ಮ್ಯೂಸಿಯಂ ತಲುಪುವ ವೇಳೆಗೆ ಮಳೆ ಶುರುವಾಗಿತ್ತು. ನಮ್ಮ ಬೆನ್ನ ಹಿಂದೆ ಮೂವರಿಗೂ ನಮ್ಮ ಬ್ಯಾಕ್‌ಪ್ಯಾಕ್‌ನ ಹೊರೆಯೂ ಇತ್ತು. ಅದನ್ನು ಲಾಕರಿನಲ್ಲಿಟ್ಟು ಹೋಗಬಹುದೆಂದು ಅಲ್ಲಿ ರಿಸೆಪ್ಷನ್‌ನಲ್ಲಿ ಸೂಚಿಸಿದರಾದರೂ ಒಂದೊಂದು ಬ್ಯಾಗಿಗೆ ಒಂದೊಂದು ಯೂರೋ ದುಡ್ಡು ಕೊಡಬೇಕೆಂದು ಸೂಚಿಸಿದೊಡನೆ, ನಾವು ಅದನ್ನು ಹೊತ್ತೇ ನಡೆಯುವ ನಿರ್ಧಾರ ಕೈಗೊಂಡೆವು. ಈ ಮೂರೂ ಮಹಡಿಗಳಲ್ಲಿ ಒಟ್ಟಾಗಿ ೨೩ ಕೊಠಡಿಗಳಿದ್ದು, ಪ್ರತಿ ಕೊಠಡಿಯಲ್ಲೂ ವಿವಿಧ ಮಾಹಿತಿಗಳನ್ನು ವರ್ಗೀಕರಿಸಿ ಪ್ರದರ್ಶಿಸಲಾಗಿದೆ.

ಇಲ್ಲಿ ಪ್ರವೇಶಿಸಿದೊಡನೆ ನಮ್ಮ ಬಲಭಾಗಕ್ಕೆ ಬೂದು ಬಣ್ಣದ ಕ್ಯೂಬ್ ಎದುರಾಗುತ್ತದೆ. ಅಲ್ಲಿಂದ ಕೋಣೆಯೊಳಕ್ಕೆ ಪ್ರವೇಶ. ಹೀಗೆ ಕೋಣೆಯಿಂದ ಕೋಣೆಗೆ ಹೋಗುವಂತೆ ಪ್ರವೇಶ ಕಲ್ಪಿಸಲಾಗಿದೆ. ಉಕ್ಕಿನ ಬೂದು ಬಣ್ಣದ ಕ್ಯೂಬ್‌ಗಳು ಮತ್ತು ಉಕ್ಕಿನ ಕಾರ್ಲ್ ಮಾರ್ಕ್ಸ್‌ನ ಪ್ರತಿಮೆಗಳಿಗೆ ಒಂದು ರೀತಿಯ ವರ್ಣ ಸಂಯೋಜನೆ ಒದಗಿಸುತ್ತದೆ. ಪ್ರತಿ ಕೋಣೆಯಲ್ಲೂ ಅಪಾರ




**ಡಾ. ಎನ್. ಗಾಯತ್ರಿ ಮತ್ತು ಮೈತ್ರಿ**




ಮಾಹಿತಿ, ಚಿತ್ರಗಳು ಮತ್ತು ಉಕ್ಕಿನ ಮೇಲ್ಮೈನ ಮೇಲೆ ಕಾರ್ಲ್ ಮಾರ್ಕ್ಸ್‌ನ ಉದ್ಧರಣೆಗಳು – ಒಟ್ಟಾರೆಯಾಗಿ ಮಾರ್ಕ್ಸ್‌ನ ಚಿಂತನಾ ಲಹರಿಯ ಅರ್ಥ ಪ್ರಪಂಚವನ್ನು ನಮ್ಮ ಮುಂದೆ ತೆರೆದಿಡುವಲ್ಲಿ ಈ ಪ್ರದರ್ಶನ ಯಶಸ್ವಿಯಾಗುತ್ತದೆ.

ನೆಲಮಹಡಿಯಲ್ಲಿ ಈ ಮನೆಯು ವಾಸಸ್ಥಾನವಾಗಿದ್ದಾಗಿನ ಎಲ್ಲ ನೆನಪುಗಳನ್ನು ಬಿಂಬಿಸುವ ಪ್ರದರ್ಶನಗಳನ್ನು ಹೊಂದಿದೆ. ಮಾರ್ಕ್ಸ‌ನ ಬಾಲ್ಯ, ಶಾಲಾ ವಿದ್ಯಾಭ್ಯಾಸ ಕುರಿತ ಮಾಹಿತಿಗಳು ಇವೆ. ಅವನಿಗೆ ಯೆನ್ನಿಯೊಂದಿಗಿನ ಭೇಟಿ ಮತ್ತು ಸಾಹಚರ್ಯದ ಚಿತ್ರಪಟಗಳು ಮತ್ತು ಮಾಹಿತಿ ಲಭ್ಯವಿವೆ. ಹೆನ್ರಿಕ್ ಮಾರ್ಕ್ಸ್ ಮತ್ತು ಹೆನ್ರಿಟಾ ಪ್ರೆಸ್‌ಬರ್ಗ್‌ರಿಗೆ ೧೮೧೮ರ ಮೇ ೫ರಂದು ಹುಟ್ಟಿದ ಕಾರ್ಲ್ ಮಾರ್ಕ್ಸ್‌ನಿಗೆ ಒಡಹುಟ್ಟಿದವರು ನಾಲ್ವರು ಸೋದರರು ಮತ್ತು ಐವರು ಸೋದರಿಯರು. ಐದು ವರ್ಷಗಳ ಕಾಲ ಟ್ರೈಯರ್‌ನ ಜೆಸ್ಯೂಟ್ ಶಾಲೆಯಲ್ಲಿ ಓದುತ್ತಾನೆ. ಈ ಶಾಲೆ ಬಿಡುವಾಗ ದೊರಕಿದ ಸರ್ಟಿಫಿಕೇಟ್‌ನಲ್ಲಿ ಅವನು ಕ್ಲಾಸಿಕ್ಸ್, ಜರ್ಮನ್ ಮತ್ತು ಚರಿತ್ರೆಯಲ್ಲಿ ಒಳ್ಳೆಯ ಅಂಕಗಳನ್ನು ಪಡೆದಿದ್ದು ಗಣಿತದಲ್ಲಿ ಕಡಿಮೆ ಅಂಕಗಳನ್ನು ಪಡೆದಿರುತ್ತಾನೆ. ಅವನು ಇಲ್ಲಿಯೇ ೧೮೩೬ರಲ್ಲಿ ಅವನ ಪ್ರೇಯಸಿ ಯೆನ್ನಿಗೆ ಗುಟ್ಟಾಗಿ ಪ್ರೇಮ ನಿವೇದನೆ ಮಾಡಿಕೊಳ್ಳುತ್ತಾನೆ. ಮುಂದೆ ಅವಳನ್ನು ಮದುವೆಯಾಗುತ್ತಾನೆ.

ಕಾರ್ಲ್ ಮಾರ್ಕ್ಸ್ ೧೮೩೫ರ ಅಕ್ಟೋಬರಿಂದ ಬಾನ್ ವಿಶ್ವವಿದ್ಯಾಲಯದಲ್ಲಿ ಅವರ ತಂದೆಯ ಇಷ್ಟದಂತೆ ಕಾನೂನು ಕಲಿಯಲೆಂದು ಸೇರಿದ್ದರು. ಆದರೆ ಅಲ್ಲಿ ಸೇರಿದ ನಂತರ ಕಾನೂನು ವಿಷಯವನ್ನು ತತ್ವಶಾಸ್ತ್ರ ಮತ್ತು ಇತಿಹಾಸಕ್ಕೆ ಅಧೀನ ವಿಷಯವಾಗಿಯೇ ಅಭ್ಯಸಿಸುತ್ತಾರೆ. ಅವರು ಈ ವಿಶ್ವವಿದ್ಯಾಲಯದಲ್ಲಿದ್ದಾಗ ಅವರ ನಿಶ್ಚಿತ ಪಠ್ಯದ ಜೊತೆಗೆ 'ಗ್ರೀಕ್ ಮತ್ತು ರೋಮನ್ನರ ಪುರಾಣ'ಗಳನ್ನು ಕೂಡ ಅಧ್ಯಯನ ಮಾಡುತ್ತಾರೆ. ಜೊತೆಗೆ ಮಾನವಶಾಸ್ತ್ರ ಮತ್ತು ಭೂಗೋಳದ ಉಪನ್ಯಾಸಗಳನ್ನು ಕೇಳಲು ಹೋಗುತ್ತಿರುತ್ತಾರೆ. ಅಂತೂ ಈ ವಿಶ್ವವಿದ್ಯಾಲಯದಲ್ಲಿ ಎರಡು ಸೆಮಿಸ್ಟರ್‌ಗಳನ್ನು ಕಲಿಯುವಷ್ಟರಲ್ಲಿ ಅವರಿಗೆ ಸಾಕು ಸಾಕೆನಿಸುತ್ತದೆ. ನಂತರ ಬರ್ಲಿನ್‌ನ ಹುಂಬೋಲ್ಟ್ ವಿಶ್ವವಿದ್ಯಾಲಯದಲ್ಲಿ ಅವರು ಒಂಭತ್ತು ತಿಂಗಳುಗಳ ಕಾಲ ವಿದ್ಯಾಭ್ಯಾಸ ಮಾಡಿರುತ್ತಾರೆ.

ಈ ಯುವ ಪತ್ರಕರ್ತ ಬೆಳೆದ ಬಗೆ ಮತ್ತು ಅವನೊಂದಿಗೆ ಬದುಕಿನುದ್ದಕ್ಕೂ ಸ್ನೇಹ ಬೆಳೆಸಿದ ರಾಜಕೀಯ ತತ್ವಶಾಸ್ತ್ರಜ್ಞ ಫ್ರೆಡರಿಕ್ ಏಂಗೆಲ್ಸ್‌ರನ್ನು ಕುರಿತ ಮಾಹಿತಿಯೂ ಇಲ್ಲಿ ಪ್ರದರ್ಶನಗೊಂಡಿದೆ. ಮಾರ್ಕ್ಸ್‌ನ ಬದುಕಿನಲ್ಲಿ ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿದ ೧೮೪೮ರ ಕ್ರಾಂತಿಯ ನಂತರ ಮಾರ್ಕ್ಸ್‌ನ ಗಡೀಪಾರು ಜೀವನದ ಮಾಹಿತಿಯು ಇಲ್ಲಿದೆ. ಈ ಜಗತ್‌ಪ್ರಸಿದ್ಧ ವಿದ್ಯಾವಂತ ವ್ಯಕ್ತಿಯ ಮುಖ್ಯ ಆಸಕ್ತಿಯ ವಸ್ತು ರಾಜಕೀಯ ಅರ್ಥಶಾಸ್ತ್ರವಾಗಿದೆ. ಒಂದು ಕೊಠಡಿಯಲ್ಲಿ ಕಾರ್ಮಿಕ ಚಳುವಳಿಯೊಂದಿಗಿನ ಅವರ ಸಂಬಂಧ ಮತ್ತು ಅದು ನಂತರ ಅಂತರರಾಷ್ಟ್ರೀಯ ಕಾರ್ಮಿಕರ ಸಂಘಟನೆಯಲ್ಲಿ ಪರ್ಯವಸಾನಗೊಂಡದ್ದನ್ನು ವಿವರಿಸುವ ಪಟಗಳು ಮತ್ತು ಮಾಹಿತಿಗಳು ಇಲ್ಲಿವೆ. ಮಾರ್ಕ್ಸ್‌ನ ವಿಚಾರಗಳನ್ನು ತಿಳಿಸುವ ಅವರ ಬರವಣಿಗೆಗಳನ್ನು ಮೂಲ ಜರ್ಮನ್ ಮತ್ತು ಅದರ ಇಂಗ್ಲಿಷ್ ಅನುವಾದಗಳ ಮೂಲಕವೂ ಇಲ್ಲಿ ಪ್ರದರ್ಶಿಸಲಾಗಿದೆ. ಹಾಗೆಯೇ ಪ್ರಪಂಚದ ಹಲವಾರು ರಾಷ್ಟ್ರಗಳಲ್ಲಿ ಪ್ರಕಟವಾಗಿರುವ ದಾಸ್ ಕ್ಯಾಪಿಟಲ್‌ಗಳ ಪ್ರದರ್ಶನವೂ ಇಲ್ಲಿತ್ತು. ಜಗತ್ತಿನಾದ್ಯಂತ ಪ್ರಕಟವಾಗಿರುವ "ಕಮ್ಯುನಿಸ್ಟ್ ಮ್ಯಾನಿಫೆಸ್ಟೋ"ದ ವಿವಿಧ ಅವತರಣಿಕೆಗಳನ್ನು ಇಲ್ಲಿ ಒಂದು ಗೋಡೆಯಲ್ಲಿ ಪ್ರದರ್ಶಿಸಲಾಗಿತ್ತು. ಅದನ್ನು ನೋಡುತ್ತಾ ನಮ್ಮ ಭಾರತೀಯ ಭಾಷೆ ಯಾವುದಾದರೂ ಕಾಣಿಸುತ್ತದೆಯೇ ಎಂದು ಕುತೂಹಲದಿಂದ ಹುಡುಕತೊಡಗಿದೆ. ತಕ್ಷಣ ಕಾಣಿಸಲಿಲ್ಲ. ಮನಸ್ಸಿಗೆ ಸ್ವಲ್ಪ ಬೇಸರವಾಯಿತು. ಆದರೆ ಕೊನೆಗೆ ಮಲೆಯಾಳದ ಕಮ್ಯುನಿಸ್ಟ್ ಪ್ರಣಾಳಿಕೆಯ ಪ್ರತಿಯೊಂದು ಅಂತೂ ಕಣ್ಣಿಗೆ ಬಿದ್ದಾಗ ಸ್ವಲ್ಪ ಸಮಾಧಾನವಾಯಿತು.

ಈ ಭಾಗದಲ್ಲಿಯೇ ಇರುವ ಕೊಠಡಿಯಲ್ಲಿ ಪ್ರವಾಸಿಗರಿಗೆ ಮೇಲಿನಿಂದ ಮತ್ತು ಪಕ್ಕಗಳಲ್ಲಿ ನೇತು ಹಾಕಿರುವ ಮಾರ್ಕ್ಸ್‌ನ ಉದ್ಧೃತ ಹೇಳಿಕೆಗಳು ಮತ್ತು ಅವನನ್ನು ಕುರಿತಂತೆ ಇತರರು ಹೇಳಿರುವ ಹೇಳಿಕೆಗಳ ಫಲಕಗಳು ನೇತಾಡುತ್ತಿವೆ. ಕಾರ್ಲ್ ಮಾರ್ಕ್ಸ್‌ನ ಚಿಂತನೆಗಳು ಜಗತ್ತಿನಾದ್ಯಂತ ಪ್ರಭಾವಿಸಿದ ವಿವಿಧ ದೇಶಗಳ ಸಾಮಾಜಿಕ ಮತ್ತು ರಾಜಕೀಯ ಬದುಕನ್ನು ಕುರಿತ ಪಟಗಳು ಮತ್ತು ಮಾಹಿತಿಯು ಕೊಠಡಿ ೨೩ರಲ್ಲಿ ಲಭ್ಯವಿವೆ.

ಒಂದು ವಿಶಾಲವಾದ ಹಾಲಿನಲ್ಲಿ ಗೋಡೆಗಳಿಗಂಟಿಕೊಂಡಂತೆ ಪ್ರದರ್ಶಿತವಾದ ಫಲಕಗಳಲ್ಲಿ ಮಾರ್ಕ್ಸ‌ನ ವಿಚಾರಧಾರೆ ಮತ್ತು ಚಿಂತನೆಯಿಂದ ಪ್ರಭಾವಿತರಾದ  ಜಗತ್ತಿನ ಹಲವಾರು ಬುದ್ಧಿಜೀವಿಗಳ ಮಾಹಿತಿಗಳನ್ನು ಪ್ರದರ್ಶಿಸಲಾಗಿದೆ. ಇಲ್ಲಿಂದ ನಾವು ಎರಡನೇ ಮಹಡಿಗೆ ಹೋಗುತ್ತೇವೆ. ಅಲ್ಲಿ ಮುಖ್ಯವಾಗಿ ಮಾರ್ಕ್ಸ್‌ನ ವಿಚಾರಗಳ ಪರಿಣಾಮದಿಂದ ಉಂಟಾದ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳ ಹಲವಾರು ಪ್ರದರ್ಶನಗಳನ್ನು ಕಾಣಬಹುದು. ಮುಖ್ಯವಾಗಿ ಮೊದಲನೆಯ ಜಾಗತಿಕ ಸಮರದ ಸಂದರ್ಭದಲ್ಲಿ ರಷ್ಯಾ ಕ್ರಾಂತಿಯ ನಂತರ ಜಾಗತಿಕ ಕಾರ್ಮಿಕ ಚಳುವಳಿಯಲ್ಲಿ ಉಂಟಾದ ಬಿರುಕು ಕುರಿತ ಮಾಹಿತಿಗಳನ್ನು ಪ್ರದರ್ಶಿಸಲಾಗಿದೆ. ಹಾಗೆಯೇ, ಎರಡನೆಯ ಮಹಾಯುದ್ಧದ ನಂತರ ಯುರೋಪಿನಲ್ಲಿ ಉಂಟಾದ ಬಿರುಕು ೧೯೮೯ರವರೆಗೆ ನಡೆದು ಬಂದ ದಾರಿಯೆಲ್ಲವನ್ನೂ ಕುರಿತು ಇಲ್ಲಿ ಪ್ರದರ್ಶನವನ್ನು ನಡೆಸಲಾಗಿದೆ. ಇಲ್ಲಿಂದ ಕೊನೆಯ ಕೋಣೆಯಲ್ಲಿ ನೆಲದವರೆಗೂ ಹರಡಿರುವಂತಹ ಒಂದು ವಿಶ್ವ ಭೂಪಟವನ್ನು ಪ್ರದರ್ಶಿಸಿ, ಅಲ್ಲಿ ಮಾರ್ಕ್ಸ್ ಪ್ರಭಾವವಿರುವ ದೇಶಗಳನ್ನು, ಪ್ರಾಂತ್ಯಗಳನ್ನು ಪ್ರದರ್ಶಿಸಿದೆ. ನಮಗೆ ಅರ್ಥವಾಗದ್ದನ್ನು ವಿವರಿಸುತ್ತಾ, ನಾವು ಗಮನಿಸಬೇಕಾದ್ದನ್ನು ಗಮನಿಸುವಂತೆ ಮಾಡಿದ ಜಿ. ಆರ್.ರವರ ಪಾಠ ನಮಗೆ ಅಲ್ಲಿ ಸಿಕ್ಕಿದ್ದು ಔಚಿತ್ಯಪೂರ್ಣವಾಗಿತ್ತು.

ಕೊನೆಯಲ್ಲಿ ಮ್ಯೂಸಿಯಂ ಅಂಗಡಿಗೆ ಬಂದಾಗ ವಿಸ್ತಾರವಾದ ಉಡುಗೊರೆಗಳ ಮಾರಾಟ ಕೇಂದ್ರವನ್ನು ಕಾಣಬಹುದು. ಮಾರ್ಕ್ಸ್ ಸಾಹಿತ್ಯದ ಜೊತೆಗೆ ಇಲ್ಲಿ ಅದೆಷ್ಟು ಬಗೆಯ ನೆನಪಿನ ಕಾಣಿಕೆಗಳು, ಕಲಾಕೃತಿಗಳು ಮಾರಾಟಕ್ಕಿರುವುದನ್ನು ನೋಡಿದರೆ ಸೋಜಿಗವಾಗುತ್ತದೆ. ಮಕ್ಕಳಿಗಂತೂ ಅವರು ಬಯಸುವ ಹಲವಾರು ವಸ್ತುಗಳು ಈ ಅಂಗಡಿಯಲ್ಲಿ ದೊರೆಯುತ್ತವೆ.

ನಾಲ್ಕನೇ ಕೊಠಡಿಯಲ್ಲಿ ಕೆಫೆ ಇದೆ. ಅದನ್ನು ದಾಟಿ ಮುಂದೆ ಹೋದರೆ, ಹಾದಿಯು ಸುಂದರವಾದ ಉದ್ಯಾನವನಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ. ಹೊರಗೆ ಮಳೆ ಸುರಿಯುತ್ತಿತ್ತು. ಆ ಮಳೆ ಹನಿಯ ಹಿನ್ನೆಲೆಯಲ್ಲಿ ಆ ಹಸಿರು ಉದ್ಯಾನವನ, ಅಲ್ಲಿದ್ದ ಮಾರ್ಕ್ಸ್‌ನ ಪ್ರತಿಮೆ ಎಲ್ಲ ಒಂದು ಸುಂದರ ನೋಟವನ್ನು ಕೊಡುತ್ತಿತ್ತು. ಒಟ್ಟು ಈ ಪ್ರದರ್ಶನವನ್ನು ನೋಡಲು ಸುಮಾರು ಮೂರು ಗಂಟೆಗಳ ಕಾಲ ಹಿಡಿಯಿತು. ಹೊರಗೆ ಬಂದೊಡನೆ ಕಾಲು ನೋಯುತ್ತಿತ್ತು, ಹೊಟ್ಟೆ ಹಸಿದಿದ್ದರೂ ಮನಸ್ಸು ತುಂಬಿಬಂದಿತ್ತು. ಜೀವಮಾನದ ಆಸೆಯೊಂದು ಈಡೇರಿದ ಸಾರ್ಥಕತೆಯ ಭಾವ. ಹೊರಗೆ ಧೋ ಎಂದು ಸುರಿಯುತ್ತಿದ್ದ ಮಳೆ. ಮಳೆ ನಿಲ್ಲುವವರೆಗೂ ವಿಶ್ರಮಿಸಲು ಸಮಯವಿರಲಿಲ್ಲ. ಏಕೆಂದರೆ, ಮತ್ತೆ ಬಾನ್‌ಗೆ ಹೋಗುವ ರೈಲು ಹಿಡಿಯಬೇಕಿತ್ತು. ಮಳೆಯಲ್ಲಿ ನೆನೆಯುತ್ತಲೇ ರೈಲು ನಿಲ್ದಾಣದತ್ತ ಧಾವಿಸಿದೆವು.

**ಡಾ॥ ಎನ್. ಗಾಯತ್ರಿ**
# ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೧೯

# ಚಲನಚಿತ್ರ : ದಿ ಯಂಗ್ ಕಾರ್ಲ್ ಮಾರ್ಕ್ಸ್




'ಐಡಿಯಾ ಈಸ್ ಪವರ್' ಎಂಬ ಪ್ರಯೋಗ ಈಗಲೂ ಪ್ರಚಲಿತ. ವಿಚಾರ ಹೊಸದಾಗಿ ಸ್ಫುರಿಸಬಹುದು ಅಥವಾ ಈಗಾಗಲೇ ಇರುವ ವಿಚಾರಕ್ಕೆ ಹೊಸ ತಿರುವು, ದಿಕ್ಕು ನೀಡುವ ಪ್ರಯತ್ನವೂ ಅದಾಗಿರಬಹುದು.

ಆ ವಿಚಾರ ಒಬ್ಬ ವ್ಯಕ್ತಿಯ ಅವಲೋಕನ, ಆಲೋಚನೆಗಳಿಂದ ಸೃಷ್ಟಿಯಾಗಿರಬಹುದು ಅಥವಾ ಇಬ್ಬರು, ಅದಕ್ಕಿಂತ ಹೆಚ್ಚು ಸಂಖ್ಯೆಯ, ವ್ಯಕ್ತಿಗಳ ವಾಗ್ವಾದ, ವಿಶ್ಲೇಷಣೆಗಳ ಪರಿಣಾಮ ಸ್ವರೂಪವಾಗಿ ಹೊರಹೊಮ್ಮಿರಬಹುದು. ಒಟ್ಟಿನಲ್ಲಿ ವಿಚಾರದ ವಿಕಾಸ ಪ್ರಕ್ರಿಯೆ ಕುತೂಹಲಕರ, ಮುಖ್ಯ. ಇಲ್ಲಿ ಕಾಲಘಟ್ಟವೂ ಪ್ರಮುಖ ಪಾತ್ರವಹಿಸುತ್ತದೆ.

'ದಿ ಯಂಗ್ ಕಾರ್ಲ್ ಮಾರ್ಕ್ಸ್' ಚಿತ್ರವನ್ನು ವೀಕ್ಷಿಸಲು ಹೋದಾಗ ಅಲ್ಲಿ ಪ್ರೇಕ್ಷಕರು ಉತ್ತಮ ಸಂಖ್ಯೆಯಲ್ಲಿದ್ದರು. (ಸಂದರ್ಭ : ಪಣಜಿಯಲ್ಲಿ ನಡೆದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ಇಫಿ) ಈ ಚಿತ್ರದ ನಿರ್ದೇಶಕರು ರಾವುಲ್ ಪೆಕ್, ಹೈಟಿಯ ರಾಜಕೀಯ ಕಾರ್ಯಕರ್ತ. ಅವಧಿ ೧೧೨ ನಿಮಿಷ (ಮಧ್ಯೆ ಯಾರೂ ಎದ್ದು ಹೋಗಲಿಲ್ಲ !)

೧೮೪೭ ಲೀಗ್ ಆಫ್ ದ ಜಸ್ಟ್, 'ದ ಕಮ್ಯುನಿಸ್ಟ್ ಲೀಗ್' ಆಗಿ ಪರಿವರ್ತನೆಗೊಂಡುದು ಒಂದು ಪ್ರಮುಖ ತಿರುವು. 'ದ ಕಮ್ಯುನಿಸ್ಟ್ ಮ್ಯಾನಿಫೆಸ್ಟೊ' ರೂಪುಗೊಂಡ ಬಗೆ ಹಾಗೂ ಮುಂದೆ 'ದಾಸ್ ಕ್ಯಾಪಿಟಲ್' ಹೊರಬರಲು ಸಿದ್ಧತೆಯ ವರ್ಷಗಳು – ಇಲ್ಲಿನ ಪ್ರಮುಖ ಅಂಶಗಳು.

ಫ್ರೆಡರಿಕ್ ಏಂಗೆಲ್ಸ್ ಹತ್ತಿ ಗಿರಣಿ ಮಾಲೀಕನೊಬ್ಬನ ಮಗ, ಬ್ರಿಟನ್ನಿನ ಕಾರ್ಮಿಕ ವರ್ಗದ ಅಧ್ಯಯನ ಅವನ ಮೌಲಿಕ ಕೊಡುಗೆ. ಕಾರ್ಲ್ ಮಾರ್ಕ್ಸ್‌ನ ಹಿನ್ನೆಲೆ ಬೇರೆ ಬಗೆಯದು – ಬಡತನ, ನಿರುದ್ಯೋಗ ಖುದ್ದಾಗಿ ಅನುಭವಿಸಿದವನು; ಆಗಿನ ಹಲವು ನೇತಾರ ವಾಗ್ಮಿಗಳನ್ನು ಪ್ರಶ್ನಿಸಿದವನು. ಈ ಇಬ್ಬರು ೧೮೪೪ರಲ್ಲಿ ಪ್ಯಾರಿಸ್‌ನಲ್ಲಿ ಭೇಟಿಯಾದಾಗ ಪರಸ್ಪರ ಪ್ರಭಾವಕ್ಕೊಳಗಾಗುತ್ತಾರೆ.

ಇನ್ನೆರಡು ಪಾತ್ರಗಳು – ಮೇರಿ ಬರ್ನ್ಸ್, ಕಾರ್ಮಿಕ ನಾಯಕಿ (ಏಂಗೆಲ್ಸ್‌ನ ಸಂಗಾತಿಯಾಗುತ್ತಾಳೆ) ಹಾಗೂ ಜೆನ್ನಿ (ಮಾರ್ಕ್ಸ್‌ನ ಪತ್ನಿ) ಚಿತ್ರ ಕೇವಲ ಸೆರೆಬ್ರಲ್ (ಮಿದುಳಿಗೆ ಕೆಲಸ ಕೊಡುವುದು) ಆಗಿಬಿಟ್ಟಿದ್ದರೆ ವಿವಿಧ ಹಿನ್ನೆಲೆಯ ಪ್ರೇಕ್ಷಕರನ್ನು ಹಿಡಿದಿಡುವುದರಲ್ಲಿ ಸೋಲುತ್ತಿತ್ತೇನೋ. ನಿರ್ದೇಶಕರು ಫ್ರೆಡರಿಕ್, ಕಾರ್ಲ್‌ರ ವೈಯಕ್ತಿಕ ಜೀವನದ ಬಗೆಗೆ (ತುಸು ಹೆಚ್ಚೇ ಅನಿಸುವಷ್ಟು) ಗಮನ ಹರಿಸಿದ್ದಾರೆ. ಅಭಿನಯದಲ್ಲಿ ಸ್ಟೀಫನ್ ಕೊನಾರ್‌ಸ್ಕ್ (ಏಂಗೆಲ್ಸ್ ) ಹಾಗೂ ವಿಕಿ ಕ್ರೀಪ್ಸ್ (ಜೆನ್ನಿ) ಮಿಂಚಿದ್ದಾರೆ. ಪ್ರಧಾನ್, ವೀಟ್ಲಿಂಗ್ ಪಾತ್ರಧಾರಿಗಳೂ ಸಮರ್ಪಕ.

ಏಂಗೆಲ್ಸ್‌ನನ್ನು ಭೇಟಿಯಾಗದಿದ್ದರೆ ಕಾರ್ಲ್ ಮಾರ್ಕ್ಸ್‌ನ ವಿಚಾರ ಜೀವನ ಹೇಗಾಗಿರುತ್ತಿತ್ತು? ಈಗ ಊಹೆಯ ಪ್ರಶ್ನೆ – ಆದರೆ ಕುತೂಹಲಕರ.

ಈ ಚಿತ್ರವನ್ನು ನಾವು ಏಕೆ ನೋಡಬೇಕು?

ಕೆಲಮಟ್ಟಿಗೆ ಇದೊಂದು ಪೀರಿಯಡ್ (ಕಾಲಘಟ್ಟದ ಕನ್ನಡಿಯಾದ) ಫಿಲ್ಮ್, ಕೈಗಾರಿಕಾ ಕ್ರಾಂತಿಯ ನಂತರ ಮಾಲೀಕ – ಕಾರ್ಮಿಕರ ಸಂಬಂಧದಲ್ಲಿ ಬದಲಾವಣೆ ಆರಂಭವಾಯಿತು. ಈಗಿನ ಮಾಹಿತಿ ತಂತ್ರಜ್ಞಾನ ಕ್ರಾಂತಿಯ ದಿನಗಳಲ್ಲಿ ದೈಹಿಕ ಶ್ರಮವಿರುವ ಕೆಲಸಗಳನ್ನು ಕನಿಷ್ಠಗೊಳಿಸುವ ಪ್ರಯತ್ನ ನಡೆದಿದೆ. ಬಿಡಿ ಮಾಲೀಕರಿಗಿಂತ ದೊಡ್ಡ ಕಂಪೆನಿ/ಉದ್ಯಮಗಳ ಸ್ಥಾಪನೆ, ವಿಸ್ತಾರ ಹೆಚ್ಚುತ್ತಿವೆ. ಆದರೂ ಕೆಲಸದ ಅವಧಿ, ಸ್ಥಳದಲ್ಲಿನ ಕನಿಷ್ಠ ಭೌತಿಕ ಅವಶ್ಯಕತೆಗಳು, ಶ್ರಮ ಜವಾಬ್ದಾರಿಗೆ ತಕ್ಕ ಪ್ರತಿಫಲ... ಇಂತಹ ಅಂಶಗಳು ಈಗಲೂ ಸಂಗತವೇ.

ಒಂದು ವಿಚಾರ, ಅಭಿವೃದ್ಧಿ ಪಥವಾಗಿ ಕಮ್ಯುನಿಸಂ ಈಚೆಗೆ ಚರ್ಚೆಗೆ ಒಳಗಾಗಿದೆ. ಚೀನಾ ಮಾದರಿಯನ್ನು ಒಪ್ಪದವರು ಹಲವರಿದ್ದಾರೆ, ರಷ್ಯಾದ ಪ್ರಯೋಗದಲ್ಲಿನ ಕೊರತೆಗಳನ್ನು ಈಗಲೂ ವಿಶ್ಲೇಷಿಸಲಾಗುತ್ತಿದೆ. ಈಗಲೂ ಆ ಸಂಘಟಿತ ವಲಯಗಳಿವೆ.

ಯುವ ಅವಸ್ಥೆಯಲ್ಲಿ ಪುರೋಗಾಮಿ ವಿಚಾರಗಳನ್ನು ಹೊಂದಿದ್ದವರು ಮಧ್ಯ, ಇಳಿವಯಸ್ಸಿನ ವೇಳೆಗೆ ಬದಲಾಗಿರುತ್ತಾರೆ. (ಹಲವು ಬಗೆಯ ರಾಜಿ ಮಾಡಿಕೊಂಡವರ ಸಂಖ್ಯೆ ಗಣನೀಯ) ಡೈನಮಿಕ್ ಎಂಬುದು ವಿಚಾರಧಾರೆಯಲ್ಲಿ ಕಾಣದೆ, ವೈಯಕ್ತಿಕ ಆರ್ಥಿಕ ಬೆಳವಣಿಗೆಯಲ್ಲಿ ಕಂಡುಬರುವುದು ಒಂದು ವಿಡಂಬನೆ.

ಭೂ ಮಾಲೀಕರ ಮಗ ಕಮ್ಯುನಿಸ್ಟ್ ಆಗುವುದು ಭಾರತದಲ್ಲಿ ನಡೆದ ಸಂಗತಿಯೇ. ಚಿತ್ರದಲ್ಲಿ ಏಂಗೆಲ್ಸ್ ತಮ್ಮ ತಂದೆಯಿಂದ ಬೇರೆ ಆಗುತ್ತಾರೆ.

ವ್ಯಕ್ತಿಯೊಬ್ಬ ಅವನು ವಿಚಾರವಾದಿ, ಲೇಖಕ ಏನೇ ಆಗಿರಲಿ. ಜೀವನೋಪಾಯಕ್ಕಾಗಿ ಏನಾದರೂ ಕೆಲಸವನ್ನಂತೂ ಮಾಡಬೇಕಲ್ಲ. 'ದಿ ಯಂಗ್ ಕಾರ್ಲ್ ಮಾರ್ಕ್ಸ್' ಚಿತ್ರದಲ್ಲಿನ ಒಂದು ದೃಶ್ಯದಲ್ಲಿ ಬಾಡಿಗೆ ಕೊಟ್ಟಿಲ್ಲ ಎಂಬ ಕಾರಣಕ್ಕಾಗಿ ಮನೆಯಿಂದ ಹೊರಹಾಕಲ್ಪಡುವುದರಲ್ಲಿದ್ದ ಕಾರ್ಲ್‌ನ ಕುಟುಂಬವನ್ನು ಏಂಗೆಲ್ಸ್ ತಾವು ಹಣ ತೆತ್ತು ಪಾರುಮಾಡುತ್ತಾರೆ. ಇನ್ನೊಂದು ಸಂದರ್ಭದಲ್ಲಿ ತಾವು ಬರೆದ ಲೇಖನಗಳಿಗೆ ಪ್ರತಿಫಲ ನೀಡಲು ತಡಮಾಡುತ್ತಿದ್ದ ಪ್ರತಿಷ್ಠಿತರೊಬ್ಬರನ್ನು ಒತ್ತಾಯಿಸಲು ಕಾರ್ಲ್ ಹೋಗುತ್ತಾರೆ.

ಚಿತ್ರದ ಭಾಷೆ – ಜರ್ಮನ್, ಫ್ರೆಂಚ್, ಇಂಗ್ಲಿಷ್. ಆದರೆ ಈ ಚಿತ್ರ ಇತಿಹಾಸವನ್ನು ಪ್ರಸ್ತುತ ಕಾಲಕ್ಕೆ ತರುವ ಯತ್ನ ನಡೆಸಿದೆ (ಅಂತ್ಯದ ಮಾಂಟಾಷ್ ಪರಿಣಾಮಕಾರಿ). ಮ್ಯಾಂಚೆಸ್ಟರ್ ಮಿಲ್‌ಗಳು ನಮ್ಮ ಮುಂಬೈ, ಕೊಯಮತ್ತೂರು, ಇಂದೋರ್, ದಾವಣಗೆರೆ ಹತ್ತಿ ಗಿರಣಿಗಳಲ್ಲಿ ಮುಂದೆ ಆದುದನ್ನು ನೆನಪಿಸುತ್ತವೆ. ಬಡತನವನ್ನು ಅನುಭವಿಸಿಯೇ ಅರ್ಥಮಾಡಿಕೊಳ್ಳಬೇಕೆಂದಿಲ್ಲ. ಐಡಿಯೋಲಾಗ್ (ಸೂತ್ರವಾದಿ)ಗಳು ಈಗಲೂ ಇದ್ದಾರೆ. ಆದರೆ ತಳಮಟ್ಟದವರ ಸಂಪರ್ಕ ಕಳೆದುಕೊಂಡು ಮಾಧ್ಯಮಗಳಲ್ಲಿ ವಿಜೃಂಭಿಸುತ್ತಿದ್ದಾರೆ. ಪ್ರೇಕ್ಷಕರು ಇಂತಹ ಚಿತ್ರಗಳನ್ನು ನೋಡುವುದು ಮನರಂಜನೆಗಾಗಿ ಅಲ್ಲ, ಒಂದಿಷ್ಟು ಚಿಂತಿಸಲು.

**ಎಚ್. ಎಸ್. ಮಂಜುನಾಥ ಗೌರಿಬಿದನೂರು**
ನಂ. ೧೧೨, ೧೧ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು –೫೬೦ ೦೦೩

# ನೆಲದ ಸಾವು

ಲೇಖಕರು :
**ಎಂ. ಮಂಜುನಾಥ ಬಮ್ಮನಕಟ್ಟಿ**
ಪುಟಗಳು : ೫೪ ಬೆಲೆ : ರೂ. ೬೦/-
ಪ್ರಕಾಶಕರು :
**ಧನ್ಯಾ ಪಬ್ಲಿಕೇಶನ್**, ಗದಗ

ವಿವಿಧ ಪ್ರಕಾರಗಳ ಸಾಹಿತ್ಯದಲ್ಲಿ ಈಗಾಗಲೇ ಗಮನ ಸೆಳೆದಿರುವ ಎಂ. ಮಂಜುನಾಥ ಬಮ್ಮನಕಟ್ಟಿರವರ ಮೊದಲ ಕಥಾಸಂಕಲನ "ನೆಲದ ಸಾವು" ತನ್ನ ಸಹಜ ಹೊಸತನದ ಶೈಲಿಯಲ್ಲಿದೆ. ಮಂಜುನಾಥ ಉತ್ತರ ಕರ್ನಾಟಕದ ಮಣ್ಣಿನ ಸೊಗಡನ್ನು ಅರಿತವರಾಗಿ ಅವುಗಳ ನಡುವೆ ಒಂದು ಬಗೆಯ ಸಮನ್ವಯ ಸಾಧಿಸುವುದನ್ನು ಕೇಂದ್ರ ಬಿಂದುವಾಗಿಸಿ ಕತೆ ಬರೆದಿದ್ದಾರೆ.

'ನೆಲದ ಸಾವು' ಅವರ ಒಂದು ಕತೆಯಾಗಿದ್ದರೂ ಇಡೀ ಕಥಾ ಸಂಕಲನದ ಜವಾಬ್ದಾರಿ ಹೊತ್ತು ನಿಂತ ಶೀರ್ಷಿಕೆಯದು. ನೆಲದ ಸಾವಿನಲ್ಲಿರುವ ಕಥೆಗಳನ್ನು ಓದುತ್ತಾ ಹೋದ ಹಾಗೆ ಅಲ್ಲಿ ಯಾವುದೇ ಕಲ್ಪನೆಯ ಉಡುಗೆ-ತೊಡುಗೆಗಳಿಲ್ಲ. ನೇರವಾಗಿ ಘಟಿಸುವ ಸಂಗತಿಗಳನ್ನು ಸರಳವಾಗಿರುವ ನಿರೂಪಣೆಗಳನ್ನು ತಿಳಿಸುವ ಶಕ್ತಿ ಈ ಕಥೆಗಾರನದ್ದಾಗಿದೆ.

ಈ ಸಂಕಲನದಲ್ಲಿ ಸುಮಾರು ಏಳು ಕಥೆಗಳಿದ್ದು ಮುಖ್ಯಕಥೆ 'ನೆಲದ ಸಾವು' ನಲ್ಲಿ ಮಳೆರಾಯನ ಮುನಿಸಿನಿಂದ ಬರಡಾದ ಭೂಮಿ, ನೆಲವನ್ನು ನಂಬಿದ ರೈತ, ಜೀವನಕ್ಕಾಗಿ ಸಾಲ ಮಾಡಿಕೊಂಡು ಬದುಕನ್ನ ಎಲುಬಿನ ಹಂದರ ಮಾಡಿಕೊಂಡವರು, ಅಸಹಾಯಕನಾಗಿ ಹೆದರಿ ಆತ್ಮಹತ್ಯೆಗೆ ಶರಣಾದ ದೇವಪ್ಪನಂತಹ ಜೀವಗಳ ಚಿತ್ರಣಗಳು ಕಣ್ಮುಂದೆ ಹಾಗೇ ಹಾದುಹೋಗುತ್ತವೆ.

ತಲ್ಲಣಗೊಂಡ ಬದುಕು, ಅಸಹಾಯಕತೆ, ಸ್ವಾತಂತ್ರ್ಯದ ಹಂಬಲ ಇಲ್ಲಿಯ ಕಥೆಗಳ ಹಂದರ. ಒಂದೊಂದೂ ವಿಶಿಷ್ಟ ರೀತಿಯಾಗಿ ಗಮನ ಸೆಳೆಯುತ್ತವೆ. ಉತ್ತರ ಕರ್ನಾಟಕದ ಮಣ್ಣಿನ ಸೊಗಡನ್ನು ಮೆಲ್ಲುವಂತೆ ಮಾಡಿದ್ದಾರೆ. ನೆಲದ ನಂಟನ್ನು ಬದಲಾವಣೆಯ ಗುರಿಯನ್ನಾಗಿಸಿದ್ದಾರೆ. ಬಿಕ್ಕಟ್ಟಿನ ಸಂದರ್ಭದಲ್ಲಿ ಮರಳಿ ನೆಲದ ಸಂಸ್ಕೃತಿಗೆ ತರುವ ಯತ್ನ ಇವರ ಕಥೆಯಲ್ಲಡಗಿದೆ. ಒಂದೊಂದು ಪಾತ್ರದ ಹಿಂದೆಯೂ ಒಂದೊಂದು ಕತೆಯಿರುವಾಗ ಎಲ್ಲವನ್ನೂ ಒಂದು ಕತೆಯಲ್ಲಿ ಹಿಡಿದಿಡುವುದು ಒಂದು ಕಾದಂಬರಿಗೆ ಗ್ರಾಸವಾಗುವ ವಸ್ತು.

'ನನ್ನಪ್ಪ' ನಂತಹ ಕಥೆಯಲ್ಲಿ ಬದುಕಿನಲ್ಲಿ ಅಪ್ಪ ಮಾಡುವ ಪಾತ್ರ ಅಗಾಧವಾದದ್ದು. ಅಪ್ಪನೆಂಬ 'ಅದ್ಭುತ' ಕತೆಗಾರನನ್ನು ಕಾಡಿದೆ. ಅಪ್ಪ ತನ್ನ ಬದುಕಿನಲ್ಲಿ ವಹಿಸುವ ಪಾತ್ರಗಳ ಕುರಿತು, ಅವನ ವಿಭಿನ್ನ ಮುಖಗಳ ಕುರಿತು ಅನಾವರಣ ಮಾಡುತ್ತಾ ಹೋಗುತ್ತದೆ.

ವ್ಯಕ್ತಿ ಚಿತ್ರಣ, ವರ್ತಮಾನದ ತಲ್ಲಣ, ನಿಸರ್ಗ ರಮ್ಯತೆ, ಅನೈತಿಕತೆ, ಪ್ರೀತಿ-ಪ್ರೇಮ, ರಾಜಕೀಯ, ಮನುಷ್ಯತ್ವದ ಸಂಬಂಧಗಳನ್ನು ಅನಾವರಣಗೊಳಿಸಿದ್ದಾರೆ. ಮನುಷ್ಯತ್ವದ ಸಂಬಂಧಗಳ ನಡುವೆ ಸೇತುವೆ ಕಟ್ಟುವ ಕೆಲಸ ಮಾಡಿದ್ದಾರೆ.

ಸಮಾಜದ ವ್ಯವಸ್ಥೆಯಿಂದ ನೋವುಂಡು ಮೈಮಾರಿಕೊಂಡ ಹೆಂಗರುಳಿನ ಬದುಕನ್ನ 'ಪುಟ್ಮಲ್ಲಿ' ಕಥೆ ಕಟ್ಟಿಕೊಟ್ಟಿದೆ.

ಮಂಜುನಾಥರ ಬರಹದಲ್ಲಿ ತಮ್ಮದೇ ಆದ ಮುದ್ರೆಯಿದೆ. ಆಧುನಿಕ ಒತ್ತಡಗಳಿಗೆ ಸಿಕ್ಕು ಬದಲಾವಣೆಗೊಳ್ಳುತ್ತಿರುವ ಗ್ರಾಮೀಣ ಜನರ ಬದುಕಿನ ಚಿತ್ರಮಾಲೆಯನ್ನು ಪೋಣಿಸುವಲ್ಲಿ ಸಫಲರಾಗಿದ್ದಾರೆ. ಹೊಸ ಪೀಳಿಗೆಯು ಎಚ್ಚೆತ್ತು ಜಾಗೃತಗೊಳ್ಳುವ ಪ್ರಜ್ಞೆ ಇದೆ. ಕಥೆಗಳಲ್ಲಿ ನೇರ ಮಾತುಗಳಿದ್ದು, ಮೌಲ್ಯಗಳ ವಿವೇಚನೆಯನ್ನು ಕಥೆಗಾರ ನೀಡಲು ಪ್ರಯತ್ನಿಸಿದ್ದಾನೆ.

ತಮ್ಮ ಕಣ್ಣಳತೆಯ ಅನುಭವಗಳಿಗೆ ನಿಷ್ಠರಾಗಿ ಬದುಕನ್ನು ಕಥೆಯಾಗಿಸುವ ಮಂಜುನಾಥರಿಗೆ ಕಥನಕಲೆ ಪರಂಪರೆಯ ಬಳುವಳಿಯಾಗಿದೆ. ಗದಗ ಸುತ್ತಲಿನ ಜನಪದ ಭಾಷೆಯ ಸಾಂಸ್ಕೃತಿಕ ಸೊಗಡನ್ನು ಪ್ರಾಣವಾಯುವಿನಂತೆ ಧಾರಣ ಮಾಡಿಕೊಂಡಿದ್ದಾರೆ. ಒಟ್ಟಿನಲ್ಲಿ ಅರ್ಥಪೂರ್ಣ ಕಥಾ ರಚನೆಗಳು ಮಂಜುನಾಥ ಬಮ್ಮನಕಟ್ಟಿ ಅವರ ಕಥಾ ಸಾಮರ್ಥ್ಯಕ್ಕೆ ನಿದರ್ಶನಗಳಾಗಿವೆ. ಅವರಿಂದ ಇನ್ನಷ್ಟು ಇಂತಹ ನೆನಪಿನಲ್ಲಿ ಉಳಿಯುವಂತಹ ಗಟ್ಟಿ ಕಥೆಗಳ ಗುಚ್ಛ ಮತ್ತೊಂದು ಬರಲಿ.

**ನಾಮದೇವ ಕಾಗದಗಾರ**
ಕಲಾವಿದ, ೩ ನೇ ಅಡ್ಡರಸ್ತೆ, ೧ ನೇ ಮುಖ್ಯರಸ್ತೆ, ಅಶೋಕ ನಗರ
ರಾಣೇಬೆನ್ನೂರು - ೫೮೧ ೧೧೫

ನಾನು ಓದಿದ ಪುಸ್ತಕ

# ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು

ಲೇಖಕರು :
**ಡಾ॥ ಸಿದ್ದಲಿಂಗಮ್ಮ ಬಿ. ಜಿ.**
ಪುಟಗಳು : ೨೫೨ ಬೆಲೆ : ರೂ. ೨೭೦/-
ಪ್ರಕಾಶಕರು :
**ಸನುಷ ಪಬ್ಲಿಕೇಷನ್ಸ್**, ನವನಗರ, ಹುಬ್ಬಳ್ಳಿ-೨೫

ಡಾ॥ ಸಿದ್ದಲಿಂಗಮ್ಮನವರ 'ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು' ಎಂಬ ಕೃತಿ ತಮ್ಮ ಪಿಎಚ್.ಡಿ. ಪದವಿಗಾಗಿ ರಚಿಸಿದ ಮಹಾಪ್ರಬಂಧ. ಈ ಕೃತಿಯಲ್ಲಿ ಲೇಖಕರು ಮಧ್ಯಕಾಲೀನದಲ್ಲಿದ್ದ ಇರುವ ಕುಶಲಕರ್ಮಿಗಳ ಬಗ್ಗೆ ವಿವರವಾಗಿ ಅಧ್ಯಯನ ನಡೆಸಿದ್ದಾರೆ. ಮಧ್ಯಕಾಲೀನವೆಂದರೆ ಕ್ರಿ. ಶ. ೧೦ನೇ ಶತಮಾನದ ನಂತರದ ಕಾಲ. ಇದು ಜಾತಿಗಳು ಗಟ್ಟಿಗೊಳ್ಳುತ್ತಿದ್ದ ಕಾಲ. ಕರ್ನಾಟಕದಲ್ಲಿ ರಾಜಕೀಯ ವಿಪ್ಲವಗಳಿದ್ದ ಕಾಲ. ಭರತಖಂಡದ ಬೇರೆ ಬೇರೆ ಕಡೆಗಳಿಂದ ನಾನಾ ಕಸಬುದಾರರು ಕರ್ನಾಟಕದ ಕಡೆಗೆ ಮುಖಮಾಡಿ ಬಂದು ನೆಲೆಗೊಳ್ಳುತ್ತಿದ್ದ ಕಾಲ. ಹೊಸ ಹೊಸ ಗ್ರಾಮಗಳ ಸೃಷ್ಟಿ, ದೇವಾಲಯಗಳ ರಚನೆ, ದೇಶ-ಪರದೇಶದ ವ್ಯಾಪಾರ ಹಾಗೂ ರಾಜಕೀಯ ವಿಸ್ತರಣೆ ಮುಂತಾದ ಬಹುಮುಖ್ಯ ಪರ್ವಕಾಲ. ಇಂತಹ ಸನ್ನಿವೇಶದಲ್ಲಿ ಜನರ ಅಗತ್ಯಗಳನ್ನು ಪೂರೈಸಲು ಕುಶಲಕರ್ಮಿಗಳ ಅವಶ್ಯಕತೆ ಹೆಚ್ಚಾಯಿತು. ಕುಶಲಕರ್ಮಿಗಳಲ್ಲಿ ಬಹುತೇಕರು ಆಯಗಾರರೇ ಆಗಿರುತ್ತಾರೆ. ಶಾಸನಗಳಲ್ಲಿ ಇವರನ್ನು ಹಿಟ್ಟುಗಳೆಂದೇ ಕರೆದಿದ್ದಾರೆ. ಮೊದಮೊದಲು ಎಂಟು ಕಸಬಿನವರು ಮಾತ್ರ ಈ ಗುಂಪಿನಲ್ಲಿದ್ದರು. ಮುಂದಿನ ಕಾಲದಲ್ಲಿ ಅಂದರೆ ೧೧ನೆಯ ಶತಮಾನದ ನಂತರ ಇವರು ೧೨ ಆದರು. ಮುಂದೆ ಈ ಸಂಖ್ಯೆ ಬದಲಾಗಲಿಲ್ಲ.

ಈ ಆಯಗಾರರ ಪಟ್ಟಿ ಪ್ರದೇಶದಿಂದ ಪ್ರದೇಶಕ್ಕೆ ಬದಲಾದರೂ ಮೂಲ ಅಗತ್ಯದ ಆಯಗಾರರು ಎಲ್ಲಾ ಕಾಲದಲ್ಲೂ ಇದ್ದರು. ಹಿಟ್ಟುಗಳೆಂದರೆ ಸಿದ್ಧಪಡಿಸಿದ

ಆಹಾರದ ಮೇಲೆ ಅವಲಂಬಿತರಾದವರೆಂದು ಅರ್ಥ. ಅಂದರೆ ವ್ಯವಸಾಯಗಾರರ ಮೇಲೆ ಅವಲಂಬಿತರಾದವರು. ಹಿಂದಿನ ಆರ್ಥಿಕ ವ್ಯವಸ್ಥೆ ನಿಂತಿದ್ದು ವ್ಯವಸಾಯದ ಮೇಲೆ, ಹೀಗಾಗಿ ರೈತ ಬೆಳೆದರೆ, ಸಕಾಲದಲ್ಲಿ ಮಳೆ-ಬೆಳೆಯಾದರೆ ಕುಶಲಕರ್ಮಿ ಅಥವಾ ಆಯಗಾರರು ಸಮೃದ್ಧ-ಸಂತೃಪ್ತರಾಗಿರುತ್ತಿದ್ದರು. ಆಗ ಮನುಷ್ಯನ ಸಾಂಸ್ಕೃತಿಕ ಭಾಗಗಳಾದ ದೇವಾಲಯ ರಚನೆ, ಜಾತ್ರೆ, ರಥೋತ್ಸವ, ಅರವಟಿಗೆ ಮೊದಲಾದ ಕೆಲಸಗಳಿಗೆ ಪ್ರಾಶಸ್ತ್ಯ ನೀಡಿದ್ದರು.

ಇಂತಹ ಕುಶಲಕರ್ಮಿಗಳ ಬಗ್ಗೆ ಹೆಚ್ಚಿಗೆ ಬೆಳಕು ಚೆಲ್ಲುವುದು ಆ ಕಾಲದಲ್ಲಿ ರಚಿತವಾದ ಶಾಸನಗಳು, ವಿವರವಾಗಿಯಲ್ಲದಿದ್ದರೂ ಅಲ್ಲಲ್ಲಿ ಈ ಕುಶಲಕರ್ಮಿಗಳ ಉಲ್ಲೇಖವನ್ನು ಶಾಸನಗಳು ಮಾಡಿವೆ. ಅವರ ಕಾರ್ಯಕ್ಕೆ ಇಂದಿಗೂ ಉಳಿದು ಬಂದಿರುವ ದೇವಾಲಯ ಶಿಲ್ಪ, ಬಾವಿ, ಗಾಣ ಇತ್ಯಾದಿಗಳು ಸಾಕ್ಷಿಯಾಗಿವೆ. ಇವೆಲ್ಲಾ ಅಂದಿನ ಜನರ ಜೀವನದ ಕನ್ನಡಿಯಾಗಿವೆ. ಇಂತಹ ಸಾಕ್ಷ್ಯಗಳನ್ನಿಟ್ಟುಕೊಂಡು ಡಾ॥ ಸಿದ್ದಲಿಂಗಮ್ಮನವರು ತಮ್ಮ ಅಧ್ಯಯನವನ್ನು ಮಾಡಿದ್ದಾರೆ.

ಸಿದ್ದಲಿಂಗಮ್ಮನವರು ಮಧ್ಯಕಾಲೀನ ಕುಶಲಕರ್ಮಿಗಳನ್ನು ಕುರಿತಂತೆ ತಮ್ಮ ಅಧ್ಯಯನವನ್ನು ಆರು ಅಧ್ಯಾಯಗಳಾಗಿ ವಿಂಗಡಿಸಿ ಪ್ರತಿಯೊಂದು ಕುಶಲಕರ್ಮಿಗಳ ಕಾರ್ಯ, ಉಪಕರಣಗಳು, ತಾಂತ್ರಿಕತೆ, ಶಿಕ್ಷಣ ಮೊದಲಾದವುಗಳ ಬಗ್ಗೆ ಶಾಸನಾಧಾರ ಹಾಗೂ ಸಾಹಿತ್ಯಾಧಾರಗಳನ್ನು ಬಳಸಿಕೊಂಡು ಚರ್ಚಿಸಿರುತ್ತಾರೆ. ಇದರೊಂದಿಗೆ ಕುಶಲಕರ್ಮಿಗಳ ಉತ್ಪಾದನೆ, ಮಾರಾಟ ವ್ಯವಸ್ಥೆ ಬಗ್ಗೆಯೂ ವಿವರಗಳನ್ನು ನೀಡಿದ್ದಾರೆ. ಈಗಾಗಲೇ ಡಾ॥ ಎಂ. ಚಿದಾನಂದ ಮೂರ್ತಿ, ಡಾ॥ ಗುರುರಾಜಾಚಾರ್, ಡಾ॥ ಬಿ. ಆರ್. ಹಿರೇಮಠ ಮೊದಲಾದವರು ಕಸಬುದಾರರ ಬಗ್ಗೆ, ಜಾತಿಗಳ ಬಗ್ಗೆ ಸ್ವಲ್ಪ ಮಟ್ಟಿನ ಅಧ್ಯಯನ ನಡೆಸಿದ್ದಾರೆ. ಪ್ರೊ॥ ಲಕ್ಷ್ಮಣ ತೆಲಗಾವಿಯವರು ಚರ್ಮಕಾರರ ಬಗ್ಗೆ ವಿಸ್ತೃತ ಅಧ್ಯಯನ ಮಾಡಿದ್ದಾರೆ. ಕ್ರಿ. ಶ. ೧೧-೧೨ನೆಯ ಶತಮಾನದಲ್ಲಿದ್ದ ರಾಮಾನುಜರು ಮತ್ತು ೧೨ನೆಯ ಶತಮಾನದಲ್ಲಿದ್ದ ಬಸವಣ್ಣನವರು ೧೮ ಜಾತಿಗಳ ಬಗ್ಗೆ ಹೇಳಿದ್ದಾರೆ. ಕುಶಲಕರ್ಮಿಗಳು ಈ ಎರಡು ಪರಂಪರೆಗಳಲ್ಲಿ ಹಂಚಿ ಹೋಗಿದ್ದಾರೆ. ಹೀಗೆ ಹಂಚಿ ಹೋದಾಗ ಮೇಲು ಕೀಳೆಂಬ ಭಾವನೆಗಳು ಹೆಚ್ಚಾಗುತ್ತಾ ಬಂತು. ಈ ಅಂಶದ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಬೇಕಿತ್ತು.

ಕುಶಲಕರ್ಮಿಗಳ ವೃತ್ತಿ ಜಾತಿಗೆ ಅಂಟಿಕೊಂಡಾಗ ಆಯಾ ಜಾತಿಯ ವ್ಯಕ್ತಿ ಆ ಕಸುಬನ್ನೇ ಮಾಡಿ ಜೀವಿಸಬೇಕಾದ ಅನಿವಾರ್ಯತೆವುಂಟಾಗುತ್ತದೆ. ಈ ಕಸುಬಿನವರಲ್ಲಿಯೂ ಮೇಲಿನವರು-ಕೆಳಗಿನವರು ಎಂಬ ಭೇದಗಳಾಗುತ್ತದೆ. ಹೊಸ ರಾಜರುಗಳು ಆಳ್ವಿಕೆಗೆ ಬಂದಾಗ, ಕುಶಲಕರ್ಮಿಗಳಿಗೆ ಪ್ರೋತ್ಸಾಹ ದೊರಕದೆ ಹೋದಾಗ ಸಹಜವಾಗಿ ವೃತ್ತಿಪರತೆ ನಶಿಸುತ್ತದೆ. ಕರ್ನಾಟಕದ ಮೇಲಾದ ದಾಳಿಗಳು ಇದನ್ನು ಸಮರ್ಥಿಸುತ್ತವೆ. ಡಾ॥ ಸಿದ್ದಲಿಂಗಮ್ಮನವರ ಈ ಕೃತಿ ಮಧ್ಯಕಾಲೀನ ವೃತ್ತಿಪರರನ್ನು ಕೇಂದ್ರವಾಗಿಟ್ಟುಕೊಂಡು ಅಂದಿನ ಸಾಮಾಜಿಕ ವಿಧಾನವನ್ನು ಕಟ್ಟಿಕೊಡುತ್ತದೆ.

**ಪ್ರೊ॥ ದೇವರಕೊಂಡಾರೆಡ್ಡಿ**
ವಿಶ್ರಾಂತ ಪ್ರಾಧ್ಯಾಪಕರು, ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

### ತಿದ್ದುಪಡಿ

ಕಳೆದ ತಿಂಗಳ ಸಂಪಾದಕೀಯದಲ್ಲಿ ಪೆರಿಯಾರ ಅವರ ಹೆಸರು 'ರಾಮಸ್ವಾಮಿ' ಬದಲಾಗಿ 'ವೆಂಕಟಸ್ವಾಮಿ' ಎಂದಾಗಿದೆ. ಓದುಗರು ಮನ್ನಿಸಬೇಕಾಗಿ ವಿನಂತಿ. *-ಸಂ.*



## ಬುದ್ಧ ಮತ್ತು ಹದ್ದು




ಅನುಭವ ಮಂಟಪದಲಿ
ವಚನ ಸುಧೆ ಹರಿಸಿದ
ಕೋಗಿಲೆ ಹತ್ಯೆಯಾಯಿತು.

ಶಾಂತಿ ಅಹಿಂಸೆಯ
ಪರಿಮಳ ಪಸರಿಸುವ
ಪಾರಿವಾಳ ಹತ್ಯೆಯಾಯಿತು.

ಜಾತಿ ಧರ್ಮಗಳ ಧಿಕ್ಕರಿಸಿ
ಪ್ರೀತಿಯ ಹುಡಿ ಹರಡಿಸಿದ
ಪತಂಗದ ಹತ್ಯೆಯಾಯಿತು.

ಮೌಢ್ಯ ವಿರೋಧಿಗಾಗಿ
ನಿತ್ಯ ಕೂಗಿ ಎಬ್ಬಿಸುತ್ತಿದ್ದ
ಕೋಳಿಯ ಹತ್ಯೆಯಾಯಿತು.

ಹಾಲು-ಹಾಲಾಹಲವ
ಶೋಧಿಸಿ ಸತ್ಯ ಉಲಿದ
ಹಾಲಕ್ಕಿಯ ಹತ್ಯೆಯಾಯಿತು.

ಗರಿಕೆಯ ಎಳೆತಂದು
ವೈಚಾರಿಕ ಗೂಡು ಕಟ್ಟಿದ
ಗುಬ್ಬಿಯ ಹತ್ಯೆಯಾಯಿತು.

ಹದ್ದುಮೀರಿ ಅರಿವು ಬಿತ್ತಿದ
ಗುರುವಿನಂತವರ ಹತ್ಯೆಯಾಯಿತು
ಹದ್ದಿನ ಸಾಮ್ರಾಜ್ಯದಲಿ.

ಹತ್ಯೆಯ ವಾರಸುದಾರರೀಗ
ಬುದ್ಧರೂಪ ತಳೆದಿದ್ದಾರೆ
ಹದ್ದು ಅಂಗುಲಿಮಾಲಾಗಲೆಂದು.

**ಕೆ. ಬಿ. ವೀರಲಿಂಗನಗೌಡ್ರ**
ಎಸ್. ಆರ್. ಜಿ. ಎಚ್. ಎಂ. ಪ್ರೌಢಶಾಲೆ, ಸಿದ್ದಾಪುರ ತಾಲ್ಲೂಕು ಉತ್ತರ ಕನ್ನಡ ಜಿಲ್ಲೆ - ೫೮೧ ೩೫೫



೨೦೧೮ರ ಫೆಬ್ರವರಿ ೨೩ರ ಸಂಜೆ ಏಳು ಗಂಟೆಯ ಹೊತ್ತಿಗೆ ನನ್ನ ತಂಗಿ ಫೋನ್ ಮಾಡಿ "ವಿಷಯ ಗೊತ್ತಾಯ್ತಾ? ವಿಜಯಾ ದಬ್ಬೆ ಇನ್ನು ಬರಿ ನೆನಪು ಅಂತ ಫೇಸ್ ಬುಕ್ಕಲ್ಲಿ ಬರ್ತೀದೆ" ಅಂತ ಹೇಳಿದಳು. ತಕ್ಷಣ ಏನೂ ಹೇಳಲು ಗೊತ್ತಾಗಲಿಲ್ಲ. 'ಹೌದಾ, ಸರಿ' ಎಂದು ಫೋನಿಟ್ಟೆ. ವಾಸ್ತವದ ಸತ್ಯ ತಲೆಯೊಳಗೆ ಇಳಿಯಲು ಸ್ವಲ್ಪ ಸಮಯ ಹಿಡಿಯಿತು. ವಿಜಯಾ ಜೊತೆ ಮಾತಾಡಿ, ಅವರನ್ನು ನೋಡಿ ಬಹಳ ವರ್ಷಗಳೇ ಆಗಿದ್ದರಿಂದ ನನಗೆ ತಕ್ಷಣಕ್ಕೆ ಹೇಳಲು ಏನೂ ತೋಚದಂತಾಯಿತು. ನಿದಾನವಾಗಿ ವಿಜಯಾ ನನ್ನನ್ನು ಆವರಿಸತೊಡಗಿದರು. ಅವರೊಂದಿಗಿನ ನನ್ನ ಒಡನಾಟದ ನೆನಪಿನ ಸುರುಳಿ ಬಿಚ್ಚಿಕೊಳ್ಳತೊಡಗಿತು.

೧೯೮೦ರ ದಸರಾ ಉತ್ಸವಕ್ಕೆಂದು ನಾನು ಮೈಸೂರಿಗೆ ಹೋಗಿದ್ದಾಗ ಗೆಳತಿ ಗಾಯತ್ರಿದೇವಿ ನನ್ನನ್ನು ಮೊದಲ ಬಾರಿಗೆ ಅವರ ಮನೆಗೆ ಕರೆದೊಯ್ದಿದ್ದಳು. ಅದೇ ಮೊದಲ ಭೇಟಿ. ಆ ವೇಳೆಗಾಗಲೇ ಬೆಂಗಳೂರಿನಲ್ಲಿ ನಾವು ದುಡಿಯುವ ಮಹಿಳೆಯರ ಸಮನ್ವಯ ಸಮಿತಿಯಡಿ ಕ್ರಿಯಾಶೀಲವಾಗಿ ತೊಡಗಿಕೊಂಡಿದ್ದರಿಂದ ನಾನು ಮೈಸೂರಿನ ಸಮತಾ ಬಗ್ಗೆ, ವಿಜಯಾ (ಡಿ. ವಿಜಯಾ) ಬಗ್ಗೆ ಕೇಳಿ ತಿಳಿದಿದ್ದೆ. ಮೊದಲ ಭೇಟಿಯಲ್ಲೇ ನಾವು ಸಾಕಷ್ಟು ಮಾತಾಡಿದೆವು. ಈ ಪರಿಚಯ ಸ್ನೇಹವಾಗುವಷ್ಟು. ಬೆಂಗಳೂರಿಗೆ ಸಮಾರಂಭಗಳಿಗೆಂದು ಬಂದಾಗ ಕೆಲವೊಮ್ಮೆ ನಮ್ಮ ಮನೆಗಳಲ್ಲಿ ತಂಗುತ್ತಿದ್ದರು. ಆಗೆಲ್ಲ ನಡೆಸುತ್ತಿದ್ದ ಮಾತು–ಕತೆ, ವಿಚಾರ–ವಿಮರ್ಶೆ ಅದೆಷ್ಟೋ ಹೊಸ ಕಾರ್ಯಕ್ರಮಗಳು, ಯೋಜನೆಗಳಿಗೆ ರೂಪುಕೊಡುತ್ತಿತ್ತು! ನಮ್ಮ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಮತ್ತು ಕರ್ನಾಟಕ ಲೇಖಕಿಯರ ಸಂಘದ ಹಲವಾರು ಕಾರ್ಯಕ್ರಮಗಳ ಹಿಂದೆ ಅವರ ಸಲಹೆ, ಕ್ರಿಯಾಶೀಲತೆಯ ನೆರಳಿದೆ.

ನಂತರದ ದಿನಗಳಲ್ಲಿ ನಮ್ಮ ಸಂಘಟನೆಯಡಿ ನಡೆಸಿದ "ಮಹಿಳಾ ಹೋರಾಟ ಪುರುಷರೊಂದಿಗೆ ಪುರುಷ ಮೌಲ್ಯಗಳ ವಿರುದ್ಧ" ಎನ್ನುವ ವಿಚಾರ ಸಂಕಿರಣದಲ್ಲಿ ಮಾತನಾಡಲು ವಿಜಯ ಬಂದಿದ್ದರು. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದಿಂದ ನಾವು 'ಅಚಲ' ಮಹಿಳಾ ಪತ್ರಿಕೆಯನ್ನು ಹೊರತಂದಾಗ, ಅದನ್ನು ಬಿಡುಗಡೆ ಮಾಡಲು ಮೈಸೂರಿನಿಂದ ಬಂದಿದ್ದರು. ನಂತರ 'ಅಚಲ ದಶಮಾನೋತ್ಸವ'ದಲ್ಲೂ ಭಾಗವಹಿಸಿದ್ದ ಅವರು ಪತ್ರಿಕೆಗೆ ನಿರಂತರವಾಗಿ ಲೇಖನಗಳನ್ನು ಬರೆಯುತ್ತಿದ್ದರು. ಜಾಗೃತಿ ಮಹಿಳಾ ಪ್ರಕಾಶನ ಹೊರ ತಂದ 'ತ್ರಿವೇಣಿ' ಮತ್ತು 'ವಿಮುಕ್ತೆಯ ಹಾದಿ' ಸಂಕಲನಗಳಿಗೆ ಲೇಖನಗಳನ್ನು ಬರೆದುಕೊಟ್ಟುದಲ್ಲದೆ ಅವುಗಳ ಬಿಡುಗಡೆಯ ಕಾರ್ಯಕ್ರಮದಲ್ಲಿಯೂ ಸಂಭ್ರಮದಿಂದ ಭಾಗವಹಿಸಿದ್ದರು. ವಿಜಯ ಅವರು ಪ್ರಕಟಿಸಿದ ಅವರ ಮೊದಲ ಲೇಖನಗಳ ಸಂಕಲ "ಮಹಿಳೆ ಸಾಹಿತ್ಯ ಮತ್ತು ಸಮಾಜ" ಕೃತಿಯನ್ನು ಶ್ರೀ ಡಿ.ಆರ್.ನಾಗರಾಜ್ ಬಿಡುಗಡೆ ಮಾಡಿದ್ದು ಮತ್ತು ಈ ಕಾರ್ಯಕ್ರಮವನ್ನು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದಿಂದ ಆಯೋಜಿಸಿದ್ದೆವು.

# ತೂರಬೇಡಿ ಹೆಣ್ತನದ ಘನತೆಯ

ಕರ್ನಾಟಕ ಲೇಖಕಿಯರ ಸಂಘದ ಜೊತೆಯೂ ವಿಜಯಾ ದಬ್ಬೆಯವರದು ಅತ್ಯಂತ ಕ್ರಿಯಾಶೀಲ ಸಾಂಗತ್ಯ. ಸಂಘವು ಅವರ 'ಶ್ಯಾಮಲಾ ಸಂಚಯ'ವನ್ನು ಪ್ರಕಟಿಸಿದ್ದಲ್ಲದೆ, ಧಾರವಾಡದಲ್ಲಿ ಶ್ಯಾಮಲಾ ದೇವಿಯವರನ್ನು ಕುರಿತ ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ೧೯೯೪ರಲ್ಲಿ ಮಡಿಕೇರಿಯಲ್ಲಿ ರಾಜ್ಯಮಟ್ಟದ ಸ್ತ್ರೀವಾದಿ ಅಧ್ಯಯನ ಶಿಬಿರವನ್ನು ಸಂಘವು ಏರ್ಪಡಿಸಿದಾಗ ಅದರ ರೂಪುರೇಷೆಗಳನ್ನು ರಚಿಸುವಲ್ಲಿ ವಿಜಯಾ ಪ್ರಮುಖ ಪಾತ್ರವಹಿಸಿದರು. ಸ್ತ್ರೀವಾದಿ ಪ್ರವೇಶಿಕೆಯೊಂದನ್ನು ಕರ್ನಾಟಕ ಲೇಖಕಿಯರ ಸಂಘವು ಪ್ರಕಟಿಸಬೇಕೆಂದು ನಿರ್ಧರಿದಾಗ ಅದರ ಜವಾಬ್ದಾರಿ ಹೊತ್ತಿದ್ದ ನಾನು ಮತ್ತು ಸುಮಿತ್ರಾಬಾಯಿ ನಮ್ಮ ಅಧ್ಯಯನಕ್ಕೆಂದು ವಿಶೇಷವಾಗಿ ಅವಲಂಬಿಸಿದ್ದು ಮೈಸೂರು ವಿಶ್ವವಿದ್ಯಾಲಯದ ಗ್ರಂಥಭಂಡಾರವನ್ನು. ಆಗ ನಾವು ಮೈಸೂರಿನಲ್ಲಿ ವಿಜಯಾ ಅವರ ಮನೆಯಲ್ಲಿದ್ದುಕೊಂಡೇ ಈ ಪ್ರವೇಶಿಕೆಯ ಕೆಲಸ ಮಾಡಿದೆವು. ಆಗ ಈ ವಿಷಯವನ್ನು ಕುರಿತು ವಿಜಯ ದಬ್ಬೆಯವರು ಸಲಹೆ–ಸೂಚನೆಗಳನ್ನು ಕೊಟ್ಟಿದ್ದಲ್ಲದೆ, ಆ ಪ್ರವೇಶಿಕೆಗೆ "ಕಪ್ಪು ಸ್ತ್ರೀವಾದ'ವನ್ನು ಕುರಿತಂತೆ ಲೇಖನವೊಂದನ್ನು ಬರೆದುಕೊಟ್ಟಿದ್ದರು. ಇಂದಿಗೂ ಕರ್ನಾಟಕ ಲೇಖಕಿಯರ ಸಂಘದ ಪ್ರತಿಷ್ಠಿತ ಯೋಜನೆಯಾಗಿರುವ ಲೇಖಕಿಯರ ಆತ್ಮಚರಿತ್ರೆಯ ಯೋಜನೆಯಾದ "ಲೇಖಾ ಲೋಕ"ವನ್ನು ೧೯೯೬ರಲ್ಲಿ ಆರಂಭಿಸಿದಾಗ ಸಂಘದ ಅಧ್ಯಕ್ಷೆಯಾದ ನಾಗಮಣಿ. ಎಸ್. ರಾವ್, ಮೈಸೂರು ವಿಶ್ವ ವಿದ್ಯಾಲಯದ ಮಹಿಳಾ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದ ಪ್ರೊಫೆಸರ್ ರಾಮೇಶ್ವರಿವರ್ಮ ಅವರೊಂದಿಗೆ ವಿಜಯಾ ದಬ್ಬೆಯವರೂ ಸೇರಿ ಉತ್ತಮ ಕಾರ್ಯಯೋಜನೆಗೆ ನಾಂದಿ ಹಾಡಿದರು.

**ಡಾ॥ ಎನ್. ಗಾಯತ್ರಿ**

ಬರಗೂರು ರಾಮಚಂದ್ರಪ್ಪನವರು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಆಯೋಜಿಸಿದ್ದ ಪುನರ್ಮೌಲ್ಯೀಕರಣ ಯೋಜನೆಯಡಿ ಕನ್ನಡ ಸಾಹಿತ್ಯವನ್ನು ಸ್ತ್ರೀವಾದಿ ಅಧ್ಯಯನದ ದೃಷ್ಟಿಕೋನದಿಂದ ವಿಶ್ಲೇಷಿಸಿ ಕೃತಿ ರಚಿಸುವ ಸಂಬಂಧವಾಗಿ ಎರಡು ಬಾರಿ ಶಿಬಿರವನ್ನು ಏರ್ಪಡಿಸಿದ್ದರು. ಇದರ ನೇತೃತ್ವ ವಹಿಸಿದ್ದ ವಿಜಯಾ ದಬ್ಬೆ ಈ ಶಿಬಿರದ ಚರ್ಚೆಯಲ್ಲಿ ಭಾಗವಹಿಸಿ ಅಮೂಲ್ಯ ಮಾಹಿತಿಯನ್ನು ನಮ್ಮೆಲ್ಲರಿಗೂ ನೀಡಿದ್ದು ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ. ರಾಷ್ಟ್ರೀಯ ನೆಲೆಯಲ್ಲೂ ಸ್ತ್ರೀವಾದಕ್ಕೆ ವಿಜಯಾ ನೀಡಿರುವ ಕೊಡುಗೆ ನೆನಪಿಡುವಂತಹುದು. ಹೈದರಾಬಾದ್‌ನ ಅನ್ವೇಷಿ ಸಂಸ್ಥೆಯವರು ಭಾರತದ ವಿವಿಧ ಭಾಷೆಗಳಲ್ಲಿರುವ ಮಹಿಳಾ ಸಾಹಿತ್ಯವನ್ನು ಕುರಿತಂತೆ 'ವಿಮೆನ್ ರೈಟಿಂಗ್ ಇನ್ ಇಂಡಿಯಾ' ಗ್ರಂಥವನ್ನು ಹೊರತಂದಾಗ, ಅದರ ಕನ್ನಡ ವಿಭಾಗದ ಸಂಪಾದಕರಾಗಿ ವಿಜಯಾ ದಬ್ಬೆ ಕೆಲಸ ಮಾಡಿದರು. ಈ ಎಲ್ಲ ಕಾರ್ಯಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ವಿಜಯಾ ಅವರೊಡನೆ ಒಡನಾಡುವ ಅವಕಾಶ ನನಗೆ ಸಿಕ್ಕಿತ್ತು ಎಂಬುದನ್ನು ನೆನೆಸಿಕೊಳ್ಳಲು ನನಗೆ ಸಂತೋಷವಾಗುತ್ತದೆ.

೧೯೭೮ರಲ್ಲಿ ಆರಂಭವಾದ ಮೈಸೂರಿನ 'ಸಮತಾ' ವೇದಿಕೆ ತನ್ನ ಹಲವಾರು ಸಾಮೂಹಿಕ ಮಹಿಳಾಪರ ಚಟುವಟಿಕೆಗಳ ಮೂಲಕ ಮಹಿಳಾ ಚಳುವಳಿಗೆ ಗಟ್ಟಿ ನೆಲೆಯನ್ನು ಒದಗಿಸಿತ್ತು. ಈ ಚಳುವಳಿಯ ಮುಂಚೂಣಿಯಲ್ಲಿದ್ದ ಡಿ. ವಿಜಯಾ ಅಥವಾ ವಿಜಯಾ ದಬ್ಬೆ ತಮ್ಮ ಮಾತು, ಬರೆಹ ಮತ್ತು ಸಂಘಟಿತ ಕ್ರಿಯೆಯ ಮೂಲಕ ಕರ್ನಾಟಕದ ಮಹಿಳಾ ಚಳುವಳಿಗೆ ಮಾಸದ ಹೆಜ್ಜೆ ಗುರುತುಗಳನ್ನು ಬಿಟ್ಟಿದ್ದಾರೆ. ಆಗ ವಿಜಯಾ ಬರೆದ ಈ ಕೆಳಗಿನ ಹಾಡು ಎಪ್ಪತ್ತು–ಎಂಭತ್ತರ ದಶಕದಲ್ಲಿ

ಮಹಿಳಾ ಚಳುವಳಿಯ ಮ್ಯಾನಿಫೆಸ್ಟೋ ಆಗಿದ್ದವು ಎಂದರೂ ತಪ್ಪಾಗಲಾರದು.

*ತೂರಬೇಡಿ ಗಾಳಿಗೆ ಹೆಣ್ತನದ ಘನತೆಯ*
*ಜೀವ ಕೊಡುವ ಜೀವವಿದು ಕಡಿಮೆ ಯಾರಿಗೆ?*
*ನಾಚಬೇಡಿ ಹೆಣ್ತನಕೆ ತಲೆ ಎತ್ತಿ ನಿಲ್ಲಿರಿ*
*ನಾಚಬೇಕು ತುಳಿದವರು ಮನುಜಾತಿಗೆ ಸೇರಿದವರು.*

೧೯೫೫ರ ಜೂನ್ ತಿಂಗಳಿನಲ್ಲಿ ಹಾಸನ ಜಿಲ್ಲೆಯ ದಬ್ಬೆ ಗ್ರಾಮದಲ್ಲಿ ಜನಿಸಿದ ವಿಜಯಾ ಮೈಸೂರಿನಲ್ಲಿ ತಮ್ಮ ಉನ್ನತ ವಿದ್ಯಾಭ್ಯಾಸ ಮತ್ತು ಅಧ್ಯಾಪನ ವೃತ್ತಿ ಹಾಗೂ ಸಾಹಿತ್ಯಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ನಡೆಸಿದವರು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಕನ್ನಡ ಅಧ್ಯಾಪಕಿಯಾಗಿ ಕಾರ್ಯನಿರ್ವಹಿಸಿದ ವಿಜಯಾ ಕನ್ನಡ ಸಾಹಿತ್ಯದ ಕಲಿಕೆಗೆ ಹೊಸ ದೃಷ್ಟಿಯನ್ನು ತೋರಿದರು. ಹಾಗೆಯೇ ಅತ್ಯಂತ ಜನಪ್ರಿಯ ಶಿಕ್ಷಕಿಯೆನಿಸಿಕೊಂಡಿದ್ದು ಅಪಾರ ಮಮತೆಯ ಶಿಷ್ಯಕೋಟಿ ಹೊಂದಿದ್ದರು.

ಸ್ತ್ರೀವಾದವು ಕನ್ನಡದ ಸಾಹಿತ್ಯಿಕ ಕ್ಷೇತ್ರದಲ್ಲಿ ಬೀಜವಾಗಿ ಮೊಳಕೆಯೊಡೆಯುವ ಸಂದರ್ಭದಲ್ಲಿ ಈ ಕ್ಷೇತ್ರದಲ್ಲಿ ವಿಜಯಾ ನಡೆಸಿದ ಬಿತ್ತನೆ ಅಮೂಲ್ಯವಾದದ್ದು. ನಮ್ಮ ಸಾಹಿತ್ಯ ಸಂದರ್ಭದಲ್ಲಿನ 'ಸ್ತ್ರೀ ಅಸ್ಮಿತೆ'ಯನ್ನು ಕುರಿತಂತೆ ಜಿಜ್ಞಾಸೆ ನಡೆಸಿ, ಸ್ತ್ರೀವಾದಿ ವಿಮರ್ಶೆಯ ರೂಪವನ್ನು ಕಟ್ಟಿಕೊಡುವುದರಲ್ಲಿ ಮುಂದಾದರು. ಈ ಜಿಜ್ಞಾಸೆಯ ಮೂಲಕ 'ಸಂಸ್ಕೃತಿಯ ಪುನರ್ರಚನೆ' ಮಾಡುವುದು ಅವರ ಮುಖ್ಯ ಗುರಿಯಾಗಿದ್ದು ಅವರ ಬರವಣಿಗೆಗಳು ಆ ದಿಕ್ಕಿನತ್ತ ಇಟ್ಟ ಖಚಿತ ಹೆಜ್ಜೆಗಳಾಗಿದ್ದವು ಎಂಬುದರಲ್ಲಿ ಅನುಮಾನವೇ ಇಲ್ಲ. ಸ್ತ್ರೀಸಂಸ್ಕೃತಿಯ ಪುನರ್ರಚನೆಯ ಹಾದಿಯಲ್ಲಿ ಸಂಶೋಧನೆ ಮತ್ತು ಅಧ್ಯಯನದ ಮೂಲಕ ಸ್ತ್ರೀಪರಂಪರೆಯ ಚರಿತ್ರೆಯನ್ನು ಕಟ್ಟುವ ಕಾರ್ಯದ ಅನಿವಾರ್ಯತೆ ಮತ್ತು ಪ್ರಾಮುಖ್ಯತೆಯನ್ನು ಅರಿತಿದ್ದ ವಿಜಯಾ ಆಧುನಿಕ ಕನ್ನಡದ ಆರಂಭದ ಲೇಖಕಿಯರಾದ ನಂಜನಗೂಡು ತಿರುಮಲಾಂಬ ಮತ್ತು ಶ್ಯಾಮಲಾ ಬೆಳಗಾಂವ್‌ಕರ್ ಮುಂತಾದವರ ಬದುಕು-ಬರಹದ ಸಂಶೋಧನೆಯಿಂದ ಕನ್ನಡ ಸ್ತ್ರೀವಾದಿ ಸಾಹಿತ್ಯದ ಜ್ಞಾನಭಂಡಾರಕ್ಕೆ ಅಮೂಲ್ಯವಾದ ಕೊಡುಗೆಗಳನ್ನು ಸೇರಿಸಿದ್ದಾರೆ. ಹಾಗೆಯೇ ಅವರ ಶಿಷ್ಯೆಯರ ಮೂಲಕ ನಡೆಸಿದ ಕಲ್ಯಾಣಮ್ಮ ಮತ್ತು ಸರಸ್ವತಿಬಾಯಿ ರಾಜವಾಡೆಯವರ ಅಧ್ಯಯನಗಳು ಕನ್ನಡ ಮಹಿಳಾ ಸಾಹಿತ್ಯವನ್ನು ಶ್ರೀಮಂತವಾಗಿಸಿವೆ.

ನಂತರ ವಿಜಯಾ ಅವರ ಗೆಳತಿಯರೊಂದಿಗೆ ಆರಂಭಿಸಿದ ಸಮತಾ ಅಧ್ಯಯನ ಕೇಂದ್ರ ಮತ್ತು ಅದರ ಸಾಮಾಜಿಕ ಜಾಗೃತಿಯ ಚಟುವಟಿಕೆಗಳು ರಾಜ್ಯವ್ಯಾಪಿ ಪರಿಣಾಮ ಬೀರುವಂತಹವೇ ಆಗಿವೆ. ಸರಳತೆ ಮತ್ತು ಸ್ಪಷ್ಟತೆ – ಇವು ಅವರ ಬರವಣಿಗೆ ಮತ್ತು ಭಾಷಣದ ಪ್ರಮುಖ ಗುಣಗಳು. ಮೆದುವಾದ ಮಾತಿನಲ್ಲಿ ಅವರು ಮಾತನಾಡಲು ನಿಂತರೆ ನಿರರ್ಗಳವಾಗಿ ಮತ್ತು ಸೋದಾಹರಣವಾಗಿ ಸಾಗುತ್ತಿದ್ದ ಅವರ ಭಾಷಣ ಎಂತಹವರನ್ನೂ ಮಂತ್ರಮುಗ್ಧಗೊಳಿಸುತ್ತಿತ್ತು. ಕರ್ನಾಟಕದಾದ್ಯಂತ ಹಲವಾರು ಮಹಿಳಾ ಶಿಬಿರ, ಸಂಕಿರಣ, ಸಂಘಟನೆಗಳನ್ನು ವ್ಯವಸ್ಥಿತವಾಗಿ ಯೋಜಿಸಿದರು. ಹಾಗೆಯೇ ಕರ್ನಾಟಕದ




ಹೇಮಲತಾ ಮಹಿಷಿ, ಎಚ್. ವಿ. ಸಾವಿತ್ರಮ್ಮ ಮತ್ತು ವಿಜಯಾ ದಬ್ಬೆ

ಉದ್ದಕ್ಕೂ ಕ್ರಿಯಾಶೀಲವಾಗಿದ್ದ ಲೇಖಕಿಯರ ಸಂಘಟನೆಗಳು, ವಿಶ್ವವಿದ್ಯಾಲಯಗಳು, ಅಕಾಡೆಮಿಗಳು ಮತ್ತು ಸಾಂಸ್ಕೃತಿಕ ಸಂಘಟನೆಗಳೊಂದಿಗೆ ಸೇರಿ ಅವರು ಸ್ತ್ರೀವಾದಕ್ಕೆ ನೀಡಿದ ತಾತ್ವಿಕ ಚೌಕಟ್ಟನ್ನು ಇಂದು ಕನ್ನಡದ ಸಾರಸ್ವತಲೋಕ ಸ್ಮರಿಸಿಕೊಳ್ಳುತ್ತಿದೆ. ಅನಾಥ ಹೆಣ್ಣು ಮಕ್ಕಳ ಪುನರ್ವಸತಿ ಯೋಜನೆಯಾಗಿ ರೂಪುಗೊಂಡ 'ಶಕ್ತಿಧಾಮ' ಸಂಸ್ಥೆಯ ಪದಾಧಿಕಾರಿಯಾಗಿಯೂ ದುಡಿದರು. ಇಪ್ಪತ್ತು ವರ್ಷಗಳ ಹಿಂದೆ ಅವರ ಬದುಕಿನಲ್ಲಿ ಎದುರಾದ ರಸ್ತೆ ಅಪಘಾತ ಅವರ ಚೈತನ್ಯಮಯ ಜೀವನಕ್ಕೆ ತೆರೆ ಎಳೆದದ್ದು ನಿಜಕ್ಕೂ ದುಃಖಕರ.

'ಇತಿ ಗೀತಿಕಾ' ಎಂಬ ಸಂಗ್ರಹದಲ್ಲಿ ಸಂಕಲನಗೊಂಡಿರುವ ಅವರ ಲೇಖನಿಯಿಂದ ಅರಳಿದ ಕವನಗಳು ಆರಂಭದ ಸ್ತ್ರೀವಾದಿ ಕಾವ್ಯದ ಅತ್ಯುತ್ತಮ ನಿದರ್ಶನವಾಗಿದೆ. "ನವ್ಯದ ವಸ್ತುನಿಷ್ಠತೆ, ಸಂಕೀರ್ಣತೆ, ಭಾಷೆ-ಶಿಲ್ಪ ಇತ್ಯಾದಿ ಒಳ್ಳೆಯ ಅಂಶಗಳನ್ನು ನವೋದಯದ ಭಾವ ತೀವ್ರತೆ, ಆರ್ದ್ರತೆ, ಲಾಲಿತ್ಯಗಳೊಂದಿಗೆ ಬೆಸೆಯಬಲ್ಲ ಕಲೆಗಾರಿಕೆ ವಿಜಯಾ ಅವರದು." (ಬಿ.ಎನ್. ಸುಮಿತ್ರಾಬಾಯಿ) ಈ ಕವಿ ಹೃದಯದ ವಿಮರ್ಶಕಿ ಬರೆದ ವಿಮರ್ಶಾ ಗ್ರಂಥಗಳು, ಜೀವನ ಚರಿತ್ರೆ, ಸಂಶೋಧನೆ ಅವರನ್ನು ಕನ್ನಡದ ಪ್ರಮುಖ ಸ್ತ್ರೀವಾದಿ ಲೇಖಕಿಯನ್ನಾಗಿಸಿದೆ.

ಸ್ತ್ರೀವಾದವು ಕನ್ನಡದ ಸಾಹಿತ್ಯಿಕ ಕ್ಷೇತ್ರದಲ್ಲಿ ಬೀಜವಾಗಿ ಮೊಳಕೆಯೊಡೆಯುವ ಸಂದರ್ಭದಲ್ಲಿ ಈ ಲೋಕವನ್ನು ಪ್ರವೇಶಿಸಿದ ವಿಜಯಾ ಅವರ ಬಿತ್ತನೆ ಅಮೂಲ್ಯವಾದದ್ದು. ನಮ್ಮ ಸಾಹಿತ್ಯ ಸಂದರ್ಭದಲ್ಲಿನ 'ಸ್ತ್ರೀ ಅಸ್ಮಿತೆ'ಯನ್ನು ಕುರಿತಂತೆ ಜಿಜ್ಞಾಸೆ ನಡೆಸಿ ಸ್ತ್ರೀವಾದಿ ವಿಮರ್ಶೆಯ ರೂಪವನ್ನು ಕಟ್ಟಿಕೊಡುವುದರಲ್ಲಿ ಮುಂದಾದರು. ಈ ಜಿಜ್ಞಾಸೆಯ ಮೂಲಕ 'ಸಂಸ್ಕೃತಿಯ ಪುನರ್ರಚನೆ' ಮಾಡುವುದು ಅವರ ಮುಖ್ಯ ಗುರಿಯಾಗಿದ್ದು ಅವರ ಬರವಣಿಗೆಗಳು ಆ ದಿಕ್ಕಿನತ್ತ ಇಟ್ಟ ಖಚಿತ ಹೆಜ್ಜೆಗಳಾಗಿದ್ದವು ಎಂಬುದರಲ್ಲಿ ಅನುಮಾನವೇ ಇಲ್ಲ. ಅಲ್ಲದೆ ಪಾಶ್ಚಾತ್ಯ ಸ್ತ್ರೀವಾದದ ಆಳವಾದ ಅಧ್ಯಯನ ನಡೆಸಿದ್ದರೂ ಸ್ಥಳೀಯ ಅನುಭವದ



ಎನ್. ಗಾಯತ್ರಿ, ವಿಜಯಾ ದಬ್ಬೆ, ಶಾಂತಾ ನಾಗರಾಜ್, ಹೇಮಲತಾ ಮಹಿಷಿ, ಬಿ. ಎನ್. ಸುಮಿತ್ರಾ ಬಾಯಿ



ಗಾಯತ್ರಿ, ಮೈತ್ರಿ, ವಿಜಯಾ ದಬ್ಬೆ, ಚಾರುಮತಿ ಸೋಫಿಯಾ

ಪಾತಳಿಯ ಮೇಲೆಯೇ ಕನ್ನಡ ಸ್ತ್ರೀವಾದದ ಶಿಲ್ಪವನ್ನು ಕಟ್ಟಿದರು. ಆದ್ದರಿಂದಲೇ ಅವರು ನಮ್ಮಲ್ಲೂ ಮಹಿಳಾ ಪ್ರತಿಭಟನೆಯ ಮಾದರಿಗಳು ಇಲ್ಲಿನ ಯಾತನೆ, ಸಂಘರ್ಷದಲ್ಲೇ ಹುಟ್ಟಿವೆ ಎನ್ನುವ ಖಚಿತ ಅಭಿಪ್ರಾಯ ಹೊಂದಿದ್ದರು. ಅವರ 'ಮಹಿಳೆ, ಸಾಹಿತ್ಯ, ಸಮಾಜ' ಹಾಗೂ 'ನಾರಿ ದಾರಿ ದಿಗಂತ' ಕೃತಿಗಳಲ್ಲಿ ನಮ್ಮ ಪರಿಸರದಲ್ಲಿ ನೇಯ್ದಿರುವ ಯಾತನೆ, ಸಂಘರ್ಷ, ಪ್ರತಿಭಟನೆಗಳ ನೂರಾರು ಎಳೆಗಳು ಸ್ತ್ರೀ–ಪುರುಷರ ಬರಹಗಳಲ್ಲಿ ಹೇಗೆ ಬಿಂಬಿತವಾಗಿವೆ ಎಂಬುದನ್ನು ರಾಜಕೀಯಾರ್ಥಿಕ ಸಾಮಾಜಿಕ ಅರಿವಿನೊಂದಿಗೆ ವಿಶ್ಲೇಷಿಸಿದ್ದಾರೆ.

ಸ್ತ್ರೀಸಂಸ್ಕೃತಿಯ ಪುನರ್ರಚನೆಯ ಹಾದಿಯಲ್ಲಿ ಸಂಶೋಧನೆ ಮತ್ತು ಅಧ್ಯಯನದ ಮೂಲಕ ಸ್ತ್ರೀಪರಂಪರೆಯ ಚರಿತ್ರೆಯನ್ನು ಕಟ್ಟುವ ಕಾರ್ಯದ ಅನಿವಾರ್ಯತೆ ಮತ್ತು ಪ್ರಾಮುಖ್ಯತೆಯನ್ನು ಅರಿತಿದ್ದ ವಿಜಯಾ ಆಧುನಿಕ ಕನ್ನಡದ ಮೊದಲ ಲೇಖಕಿ, ಪ್ರಕಾಶಕಿ ಮತ್ತು ಸಂಪಾದಕಿಯೆನಿಸಿಕೊಂಡ ನಂಜನಗೂಡು ತಿರುಮಲಾಂಬ ಅವರನ್ನು ಕುರಿತು ರಚಿಸಿದ 'ಸತ್ಯೈಷಿಣಿಯ ಹೆಜ್ಜೆಗಳು' ಕನ್ನಡ ಸ್ತ್ರೀವಾದಿ ಸಾಹಿತ್ಯದ ಜ್ಞಾನಭಂಡಾರಕ್ಕೆ ಅಮೂಲ್ಯವಾದ ಜ್ಞಾನರಾಶಿಯಾಗಿದೆ. ಹಾಗೆಯೇ ಕತೆಗಾರ್ತಿ ಶಾಮಲಾ ಬೆಳಗಾಂವ್‌ಕರ್ ಅವರ ಬದುಕು – ಬರಹ ಕುರಿತು ಬರೆದ ಶಾಮಲಾ ಸಂಚಯ ಮತ್ತು ಅವರ ಶಿಷ್ಯೆಯರ ಮೂಲಕ ನಡೆಸಿದ ಕಲ್ಯಾಣಮ್ಮ ಮತ್ತು ಸರಸ್ವತಿಬಾಯಿ ರಾಜವಾಡೆಯವರ ಅಧ್ಯಯನಗಳು ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯ ಆರಂಭದ ಅಡಿಗಲ್ಲುಗಳು. ಕರ್ನಾಟಕದ ಉದ್ದಕ್ಕೂ ಲೇಖಕಿಯರ ಸಂಘಟನೆಗಳು, ವಿಶ್ವವಿದ್ಯಾಲಯಗಳು, ಅಕಾಡೆಮಿಗಳು ಮತ್ತು ಸಾಂಸ್ಕೃತಿಕ ಸಂಘಟನೆಗಳೊಂದಿಗೆ ಸೇರಿ ಅವರು ಸ್ತ್ರೀವಾದಕ್ಕೆ ನೀಡಿದ ತಾತ್ವಿಕ ಚೌಕಟ್ಟನ್ನು ಇಂದು ಕನ್ನಡದ ಸಾರಸ್ವತಲೋಕ ಸ್ಮರಿಸಿಕೊಳ್ಳುತ್ತಿದೆ.

ಎಪ್ಪತ್ತರ ದಶಕದಲ್ಲಿ ಆರಂಭವಾದ ಸ್ತ್ರೀ ನೇತೃತ್ವದ ಮಹಿಳಾ ಚಳುವಳಿಯು ಮಧ್ಯಮ ವರ್ಗ ಮತ್ತು ಮೇಲು ಜಾತಿಗಳ ಮಹಿಳೆಯರ ಕೈಯಲ್ಲಿತ್ತು, ಎಂದು ಇಂದು ಟೀಕಿಸುವವರೂ ಇದ್ದಾರೆ. ಅದೊಂದು ಚಾರಿತ್ರಿಕ ಸತ್ಯವೇ ಆದರೂ, ಅಂದು ಸಮತಾ ವೇದಿಕೆಯೂ ಸೇರಿದಂತೆ ಅಂದಿನ ಇತರ ಮಹಿಳಾ ಸಂಘಟನೆಗಳು ಎತ್ತಿಕೊಂಡ ವರದಕ್ಷಿಣೆ, ವಧುದಹನದಂತಹ ಹೆಣ್ಣಿನ ಕೌಟುಂಬಿಕ ಸಮಸ್ಯೆಗಳು ಮತ್ತು ಅತ್ಯಾಚಾರದಂತಹ ವಿಷಯಗಳು ಕಾನೂನಿನ ತಿದ್ದುಪಡಿಯಾಗುವಲ್ಲಿ ಪ್ರಮುಖ ಪಾತ್ರ ವಹಿಸಿದವೆಂಬುದನ್ನು ಮರೆಯಲಾಗದು. ಮಹಿಳೆಯರ ಸ್ವಂತಿಕೆ ಮತ್ತು ಅಸ್ಮಿತೆಗಾಗಿ ನಡೆದ ಚಳುವಳಿಗಳು ಮಹಿಳಾ ಸಬಲೀಕರಣಕ್ಕೆ ದಾರಿ ಮಾಡಿಕೊಟ್ಟವು, ಎಂಬುದನ್ನು ಯಾರೂ ಮರೆಯುವಂತಿಲ್ಲ. ಮಹಿಳಾ ಅಧ್ಯಯನವೆಂಬುದು ಶೈಕ್ಷಣಿಕ ವಿಷಯವೇ ಆಗಿಲ್ಲದ ಸಂದರ್ಭದಲ್ಲಿ ಮಹಿಳಾ ಅಧ್ಯಯನಕ್ಕೆ ಮತ್ತು ಮಹಿಳಾ ಹೋರಾಟಕ್ಕೆ ಬೇಕಾದ ಅಸ್ತಿಭಾರವನ್ನು ನಿರ್ಮಿಸಿದ್ದು ಈ ಕಾಲಘಟ್ಟದ ಮಹಿಳಾ ಚಳುವಳಿಯ ಕೊಡುಗೆಯಾಗಿದೆ. ಅದರಲ್ಲಿ ವಿಜಯಾ ಅವರದು ಪ್ರಮುಖ ಪಾಲಿದೆ.

*"ನಾನು ನೀನು ಅವಳು ಇವಳು ಹೆಣ್ಣಾಗಿ ನೊಂದವರು*
*ಕೈಗೆ ಕೈ ಜೋಡಿಸೋಣ ಹೊಸ ಜಗತ್ತು ನಮ್ಮದು"*

ಅಂದಿಗಿಂತ ಇಂದು ಹೆಣ್ಣಿನ ನೋವಿನ ವ್ಯಾಪ್ತಿ ಮತ್ತು ವೈವಿಧ್ಯ ವಿಸ್ತಾರವಾಗಿದೆ. ಹೆಣ್ಣಿನ ನೋವಿನ ಸ್ವರೂಪ ಬದಲಾಗಿದೆ. ವಿವಿಧ ಹೆಣ್ಣುಗಳ ಎಲ್ಲ ನೋವಿನ ವಿರುದ್ಧ ನಡೆಸಬೇಕಾದ ಹೋರಾಟದ ಅಗತ್ಯವಿದೆ. ಹೆಣ್ಣಿನ ಘನತೆಗೆ ಧಕ್ಕೆ ತರುವ, ಅವಳ ಮೈ ಮನಸ್ಸುಗಳ ಮೇಲೆ ಸತತವಾಗಿ ಧಾಳಿ ಮಾಡುತ್ತಿರುವ ಮನು ಜಾತಿಯ ಹಿಂಸ್ರ ಪಶುಗಳು ಇಂದು ಹೆಚ್ಚುತ್ತಿರುವಾಗ ವಿಜಯಾ ದಬ್ಬೆ ಮತ್ತೆ ಮತ್ತೆ ನೆನಪಾಗುತ್ತಾರೆ.

**ಡಾ॥ ಎನ್. ಗಾಯತ್ರಿ**
# ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೧೯

## ತಿರುಗಿ ನಿಂತ ಪ್ರಶ್ನೆ

ಅಪ್ಪ ಜನಕ ಕಲಿಸಿದ್ದ ಅಕ್ಷರವಿತ್ತು
ಸಾಕವ್ವೆಯರು ಹೇಳಿಕೊಟ್ಟ ಹಾಡಮಟ್ಟಿತ್ತು
ಸುತ್ತಮುತ್ತ ತಾಡಪತ್ರ ಚೆಲ್ಲಿತ್ತು
ಯಾಕೆ ಸುಮ್ಮನೆ ಕುಳಿತೆ ಸೀತೆ ನೀನು ?

ಅಶೋಕದ ನೆರಳಿತ್ತು
ನಿನ್ನ ತುಂಬ ಶೋಕವಿತ್ತು
ಕೈ ತುಂಬ ಬಿಡುವಿತ್ತು
ಇನ್ನೇನು ಬೇಕಿತ್ತು ?
ಯಾಕೆ ಸುಮ್ಮನೆ ಕುಳಿತೆ ಸೀತೆ ನೀನು?

ಆಮೇಲೂ ಬಿಡುವಿತ್ತು
ಲವಕುಶರು ಬೆಳೆದು
ಆಶ್ರಮ ಪ್ರಶಾಂತವಾಗಿತ್ತು
ನಿನ್ನೆದುರು ಹರಿದುಹೋದ
ಇಡೀ ಜೀವನವಿತ್ತು
ಯಾಕೆ ಸುಮ್ಮನೆ ಕುಳಿತೆ ಸೀತೆ ನೀನು ?

ನನ್ನ ಪ್ರಶ್ನೆಗಳಿಗೆಲ್ಲ
ಅವಳ ಭೂಮಿತೂಕದ ಮೌನ.
ಕತ್ತೆತ್ತಿ ನೋಡಿದರೂ
ಅವಳ ಕಣ್ಣಭಾವಗಳು
ಶಬ್ದವಾಗದೆ ನನ್ನ ಕಣ್ಣೆಗಿಳಿದು
ತಿರುಗಿನಿಂತವು ಕೇಳಿದ್ದ ಪ್ರಶ್ನೆಗಳು.





# ಶುಕ್ರಗ್ರಹದ ಪುನರಾಗಮನ

ಸಂಜೆಯಾಗುತ್ತಿದ್ದಂತೆ ಪಶ್ಚಿಮದಲ್ಲಿ ಪ್ರಕಾಶಮಾನವಾಗಿ ಕಾಣುವ ಚುಕ್ಕೆಯೇ ಶುಕ್ರ. ದಿನೇ ದಿನೇ ಮೇಲೇರುವ ಇದು ಸಂಜೆಯ ಆಕಾಶದ ಪ್ರಮುಖ ಆಕರ್ಷಣೆ. ೨ರಂದು ಶುಕ್ರ ಗ್ರಹವನ್ನು ರೋಹಿಣಿಯ ಪಕ್ಕದಲ್ಲಿಯೇ ನೋಡಬಹುದು. ದಿನೇ ದಿನೇ ಮೇಲೇರುತ್ತಿರುವ ಇದು ೧೭ರ ಸಂಜೆ ಚಂದ್ರನೊಡಗೂಡಿದಾಗ ರೋಹಿಣಿಯಿಂದ ದೂರ ಸರಿದು ಮೃಗಶಿರಾ ನಕ್ಷತ್ರದ ಸಮೀಪವೇ ಬಂದಿರುತ್ತದೆ. ತಿಂಗಳ ಕೊನೆಗೆ ಪುನರ್ವಸು ನಕ್ಷತ್ರದ ಸಮೀಪ ಕಾಣುತ್ತದೆ. ಹೀಗೆ ಒಂದೇ ತಿಂಗಳಲ್ಲಿ ಅದರ ಓಟ ಗಣನೀಯವಾಗಿರುತ್ತದೆ.

ಈ ತಿಂಗಳ ಒಂದನೆಯ ತಾರೀಖು ಪಾಡ್ಯ. ಅಂದರೆ ಚಾಂದ್ರಮಾನ ಗಣನೆ ಕ್ಯಾಲೆಂಡರ್ ಸಂಖ್ಯೆಯೇ ಆಗಿದೆ. ಈ ಪಾಡ್ಯ ಎಂಬುದು ಹುಣ್ಣಿಮೆಯ ನಂತರದ ದಿನ. ಆದ್ದರಿಂದ ಸೂರ್ಯಾಸ್ತವಾದ ಸುಮಾರು ಮುಕ್ಕಾಲು ಗಂಟೆಯ ನಂತರ ಚಂದ್ರೋದಯವಾಗುತ್ತದೆ. ಪೂರ್ವದ ಅಂಚಿನಲ್ಲಿ ಕಾಣುವ ಇನ್ನೊಂದು ಪ್ರಕಾಶಮಾನ ಚುಕ್ಕೆ ಗುರುಗ್ರಹ. ಇದು ಕಳೆದ ಹುಣ್ಣಿಮೆ ಅಂದರೆ ಏಪ್ರಿಲ್ ೩೦ರಂದು ಚಂದ್ರನ ಪಕ್ಕದಲ್ಲಿಯೇ ಇತ್ತು. ಈ ತಿಂಗಳಲ್ಲಿ ಹುಣ್ಣಿಮೆಗೆ ಎರಡು ದಿನ ಮೊದಲೇ ಅಂದರೆ ೨೭ರಂದು ಗುರು–ಚಂದ್ರ ಜೋಡಿ ಯಾಗುತ್ತದೆ. ಅಂದರೆ ಚಂದ್ರ ೨೮ ದಿನ ಗಳಿಗೆ ತನ್ನ ಪರಿಭ್ರಮಣೆಯನ್ನು ಮುಗಿಸಿದ ಮೇಲೆ ಎರಡು ದಿನಗಳ ನಂತರ ಹುಣ್ಣಿಮೆ ಆಗುತ್ತದೆ ಎಂದು ಪ್ರಮಾಣೀಕರಿಸಿದಂತಾಗುತ್ತದೆ.




ಪೂರ್ವದ ಅಂಚಿನಲ್ಲಿ ಕಾಣುವ ಗುರುಗ್ರಹ ತುಲಾರಾಶಿಯ ಒಂದು ಕ್ಷೀಣ ನಕ್ಷತ್ರವನ್ನು ಸಮೀಪಿಸುವುದನ್ನು ಕಾಣಬಹುದು. ಒಂದು ತಿಂಗಳ ಈ ಚಲನೆ ಶುಕ್ರದ ಚಲನೆಗೆ ಹೋಲಿಸಿದರೆ ಬಹಳ ನಿಧಾನ. ಸೂಕ್ಷ್ಮವಾಗಿ ಗಮನಿಸಿದಲ್ಲಿ ಚಲನೆಯ ದಿಕ್ಕೂ ವಿರುದ್ಧವಾಗಿದೆ ಎಂದು ತಿಳಿಯಬಹುದು. ಭೂಮಿ ಅದನ್ನು ಹಿಂದೆ ಹಾಕಿ ಮುಂದೆ ಓಡುತ್ತಿರುವುದೇ ಈ ವಿರುದ್ಧ ದಿಕ್ಕಿನ ಚಲನೆಗೆ ಕಾರಣ. ಇದಕ್ಕೆ "ವಕ್ರ" ನಡೆ ಎಂದು ಹೆಸರಿದೆ. ಗುರು ಗ್ರಹದ ಈ 'ವಕ್ರ' ನಡೆಯ ಮಧ್ಯಭಾಗ ೯ರಂದು – ಅಂದು ಸಂಜೆ ಸೂರ್ಯಾಸ್ತವಾಗುವಾಗ ಗುರು ಉದಯಿಸುತ್ತದೆ. ಆ ಘಟನೆಗೆ ವಿಯುತಿ ಎಂದು ಹೆಸರು. ಇದರ ಕಾರಣ ಗುರು ಗ್ರಹ ರಾತ್ರಿಯುದ್ದಕ್ಕೂ ನೋಡಲು ಸಿಗುತ್ತದೆ.


ಆರ ಮುಂಜಾವು–ಧನು ರಾಶಿಯಲ್ಲಿ
ಚಂದ್ರ, ಮಂಗಳ ಮತ್ತು ಶನಿ

ದೂರದರ್ಶಕ ಇರುವವರು ಕೆಂಪು ಮಚ್ಚೆಯನ್ನು ಹುಡುಕಬಹುದು. ಏಕೆಂದರೆ ರಾತ್ರಿಯ ಒಂದಲ್ಲ ಒಂದು ಹೊತ್ತಿನಲ್ಲಿ ಅದು ಕಾಣುವುದು ಖಚಿತ. ಶನಿ ಮತ್ತು ಮಂಗಳ ಗ್ರಹಗಳು ಮಧ್ಯರಾತ್ರಿಯ ನಂತರ ನೋಡಲು ಸಿಗುತ್ತವೆ. ಚಂದ್ರ ೫ರಂದು ಶನಿಯ ಜೊತೆ ೬ರಂದು ಮಂಗಳದ ಜೊತೆ ಕಾಣುತ್ತದೆ. ಬುಧ ಗ್ರಹ ಮುಂಜಾವಿನಲ್ಲಿ ಕಾಣುತ್ತದೆ. ೧೩ರಂದು ಚಂದ್ರ–ಬುಧ ಜೋಡಿಯಾಗುವ ಸಂದರ್ಭದಲ್ಲಿ ಅದನ್ನು ಗುರುತಿಸಬಹುದು. ಈ ವರ್ಷದಲ್ಲಿ ಸರಿ ಸುಮಾರು ಪ್ರತಿ ತಿಂಗಳೂ ಚಂದ್ರ ಕಟಕ ರಾಶಿಯ ಬೀಹೈವ್ ಎಂಬ ಹೆಸರಿನ ನಕ್ಷತ್ರ ಗುಚ್ಛದ ಪಕ್ಕದಲ್ಲಿ ಹಾದು ಹೋಗುತ್ತದೆ. ಮೇ ತಿಂಗಳ ೨೦ರಂದು ಈ ಘಟನೆ ನಡೆಯಲಿದೆ. ದುರ್ಬೀನಿನ ಮೂಲಕ ಚಂದ್ರನ ಆಸುಪಾಸನ್ನು ಹುಡುಕಿ ನೋಡಿದರೆ ಈ ಗುಚ್ಛ ಕಾಣುತ್ತದೆ.

ಹ್ಯಾಲೀ ಧೂಮಕೇತುವಿನ ತುಣುಕುಗಳ ಹರಡಿಕೊಂಡಿರುವ ಭಾಗ ಸಮೀಪಿಸುವುದರಿಂದ ಏಪ್ರಿಲ್ ೧೯ರಿಂದ ಸುಮಾರು ಒಂದು ತಿಂಗಳು ಈ ಧೂಳಿನ ಕಣಗಳು ಭೂಮಿಯ ಮೇಲೆ ಉದುರಿ ಭಸ್ಮವಾಗುವುವು. ಇದಕ್ಕೆ ಉಲ್ಕಾವೃಷ್ಟಿ ಎಂದು ಹೆಸರು. ಮೇ ೬ರಂದು ಗರಿಷ್ಠ; ಅಂದರೆ ೫ರ ಮುಂಜಾವಿನಲ್ಲಿ ಗಂಟೆಗೆ ೨೦ರಿಂದ ೬೦ ಉಲ್ಕೆಗಳು ಕಾಣುವ ಸಾಧ್ಯತೆ ಇದೆ. ಇವು ಕುಂಭರಾಶಿಯ ಈಟಾ ಎಂಬ ನಕ್ಷತ್ರದಿಂದ ಹೊರಟಂತೆ ಕಾಣುವುದರಿಂದ ಈಟಾ ಅಕ್ವಾರಿಡ್ಸ್ ಎಂಬ ಹೆಸರಿದೆ.

### ಖಗೋಳ ದಿನಚರಿ

೨ ಶುಕ್ರ–ರೋಹಿಣಿ ಜೋಡಿ*
೫ ಶನಿ–ಚಂದ್ರ ಜೋಡಿ*
೬ ಚಂದ್ರ–ಭೂಮಿ ನಡುವೆ ಗರಿಷ್ಠ ದೂರ; ಮಂಗಳ ಚಂದ್ರ ಜೋಡಿ*
ಈಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿ*
೮ ಚಾಂದ್ರಮಾಸದ ಕೊನೆಯ ಪಾದ; ಚಂದ್ರೋದಯ ನಡುರಾತ್ರಿಗೆ
೧೩ ಬುಧ–ಚಂದ್ರ ಜೋಡಿ*
೧೫ ಅಮಾವಾಸ್ಯೆ ೧೭:೧೭ಕ್ಕೆ
೧೬ ಚಂದ್ರ–ರೋಹಿಣಿ ಜೋಡಿ (ಆಚ್ಛಾದನೆ ಕಾಣುವುದಿಲ್ಲ)
೧೭ ಚಂದ್ರ–ಶುಕ್ರ ಜೋಡಿ*
೨೨ ಮಘ – ಚಂದ್ರ ಜೋಡಿ ಚಾಂದ್ರಮಾಸದ ಮೊದಲ ಪಾದ;
ಚಂದ್ರಾಸ್ತ ನಡುರಾತ್ರಿಗೆ
೨೭ ಗುರು–ಚಂದ್ರ ಜೋಡಿ*
೨೯ ಹುಣ್ಣಿಮೆ ೧೯:೪೯ಕ್ಕೆ

(*ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಭಾರತದ ಸಂವಿಧಾನದ ಸಭೆಯಲ್ಲಿ ಮಹಿಳೆಯರು

**ಭಾ**ರತದ ಸಂವಿಧಾನದ ರಚನೆಗೆ ಅನೇಕ ಮಹನೀಯರು ಕಾರಣರಾಗಿದ್ದಾರೆ. ಕಾನೂನು ತಜ್ಞರು, ಸಾಮಾಜಿಕ ಕಾರ್ಯಕರ್ತರು, ರಾಜಕಾರಣಿಗಳು, ಆಡಳಿತಗಾರರು, ಚಿಂತಕರು ಹೀಗೆ ವಿವಿಧ ವರ್ಗದವರು ತಮ್ಮ ಕೊಡುಗೆಗಳನ್ನು ನೀಡುವ ಮೂಲಕ ಸಂವಿಧಾನದ ಗೌರವ ಮತ್ತು ಘನತೆಯನ್ನು ಹೆಚ್ಚಿಸಿದ್ದಾರೆ. ಅನೇಕ ರಾಷ್ಟ್ರಗಳು ಭಾರತದ ಸಂವಿಧಾನದ ಸ್ವರೂಪವನ್ನು ಆಯ್ಕೆ ಮಾಡಿಕೊಂಡಿವೆ. ಸ್ವಾತಂತ್ರ್ಯ ಗಳಿಸಿದ ಕೂಡಲೆ ದೇಶಕ್ಕೆ ಒಂದು ಮಾದರಿ ಸಂವಿಧಾನವನ್ನು ರಚಿಸಬೇಕಿತ್ತು. ದೇಶದ ಅಂದಿನ ಪರಿಸ್ಥಿತಿಯಲ್ಲಿ ಅದು ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ. ಸಂವಿಧಾನ ರಚಿಸುವ ಜವಾಬ್ದಾರಿಯನ್ನು ಸಂವಿಧಾನ ಸಭೆಗೆ ನೀಡಲಾಯಿತು. ಡಿಸೆಂಬರ್ ೧೯೪೬ರಲ್ಲಿ ರಚಿತವಾದ ಈ ಸಭೆಯು ಸುಮಾರು ಮೂರು ವರ್ಷಗಳ (ಎರಡು ವರ್ಷ, ಹನ್ನೊಂದು ತಿಂಗಳು ಮತ್ತು ಹದಿನೇಳು ದಿನಗಳ) ಕಾಲ ದೀರ್ಘ ಚರ್ಚೆ, ವಾದವಿವಾದ ನಡೆಸಿ ಸಂವಿಧಾನವನ್ನು ಸಿದ್ಧಪಡಿಸಿತು. ಇದರಲ್ಲಿ ಮಹಿಳೆಯರ ಕೊಡುಗೆಯೂ ಇದೆ ಎಂಬುದು ಬಹಳ ಜನರಿಗೆ ತಿಳಿದಿಲ್ಲ.

ಸಂವಿಧಾನ ಸಭೆಯು ಒಟ್ಟು ೨೯೯ ಸದಸ್ಯರನ್ನು ಒಳಗೊಂಡಿತ್ತು. ರಾಜ್ಯ ಸಭೆಯ ಸಚಿವಾಲಯವು ೨೦೧೨ರಲ್ಲಿ ಪ್ರಕಟಿಸಿರುವ 'ಸಂವಿಧಾನ ಸಭೆಯ ಮಹಿಳಾ ಸದಸ್ಯರ ಆಯ್ದ ಭಾಷಣಗಳು' ಎಂಬ ಪುಸ್ತಕದ ಪ್ರಕಾರ ಈ ಸಭೆಯಲ್ಲಿ ಒಬ್ಬ ಮುಸ್ಲಿಂ ಮಹಿಳೆ ಸೇರಿದಂತೆ, ಹದಿನೈದು ಮಹಿಳೆಯರಿದ್ದರು (ಪಟ್ಟಿ ನೋಡಿ) ಎಂಬುದು ವಿಶೇಷ. ಈ ಮಹಿಳೆಯರ ಗುಂಪಿನಲ್ಲಿ ವಕೀಲರು, ಮಹಿಳಾ ಹಕ್ಕುಗಳ ಕಾರ್ಯಕರ್ತರು ಇದ್ದಾರೆ. ದಲಿತರಿದ್ದಾರೆ, ಮುಸ್ಲಿಂ ಜನಾಂಗಕ್ಕೆ ಸೇರಿದವರಿದ್ದಾರೆ, ಮಹಾತ್ಮಾ ಗಾಂಧಿ ಅವರ ನೇತೃತ್ವದಲ್ಲಿ ನಡೆದ ದಂಡಿ ಯಾತ್ರೆಯಲ್ಲಿ ಭಾಗವಹಿಸಿದವರಿದ್ದಾರೆ. ಸೈಮನ್ ಆಯೋಗದ ವಿರುದ್ಧ ಪ್ರತಿಭಟನೆ ನಡೆಸಿದವರಿದ್ದಾರೆ. ಸಂವಿಧಾನ ರೂಪುಗೊಳ್ಳಲು ಈ ಮಹಿಳೆಯರು ನೀಡಿದ ಸಲಹೆ ಮತ್ತು ಸೂಚನೆಗಳೆಲ್ಲವನ್ನೂ ಅಂಗೀಕರಿಸಿದ ಸಂವಿಧಾನದಲ್ಲಿ ಅಳವಡಿಸಿಲ್ಲವಾದರೂ, ಅವರ ಕೊಡುಗೆ ಮತ್ತು ದೂರದೃಷ್ಟಿಯನ್ನು ಕಡೆಗಣಿಸುವಂತಿಲ್ಲ. ಈ ಹದಿನೈದು ಮಹಿಳೆಯರಲ್ಲಿ ಕೆಲವರ ಸೂಕ್ಷ್ಮ ಪರಿಚಯ ಮಾಡಿಕೊಡುವುದು ಈ ಲೇಖನದ ಉದ್ದೇಶ.

**ವೈ. ಜಿ. ಮುರಳೀಧರನ್**

ಸಂವಿಧಾನದಲ್ಲಿ ಸೇರಿಸಬೇಕಾದ ಅಂಶಗಳ ಬಗ್ಗೆ ಖಚಿತವಾದ ನಿಲುವು ಹೊಂದಿದ್ದ ಈ ಮಹಿಳೆಯರು ಜಾತಿ, ಮತ, ಭಾಷೆಯನ್ನು ಮೀರಿ ಒಟ್ಟಾರೆ ರಾಷ್ಟ್ರದ ಐಕ್ಯತೆ, ಅಭಿವೃದ್ಧಿ ಮತ್ತು ಜನರ ಕಲ್ಯಾಣವನ್ನು ಬಯಸಿದ್ದು ಅವರ ಭಾಷಣಗಳಿಂದ ವ್ಯಕ್ತವಾಗುತ್ತದೆ. ಮಹಿಳೆಯರ ಹಕ್ಕುಗಳು, ದೇವದಾಸಿ ಪದ್ಧತಿಯ ನಿರ್ಮೂಲನೆ ಬಗ್ಗೆಯೂ ಧ್ವನಿ ಎತ್ತಿದ್ದಾರೆ. ಜಾತಿ ಆಧಾರಿತ ಮೀಸಲಾತಿಯನ್ನು ವಿರೋಧಿಸಿದ ಮುಸ್ಲಿಂ ಮಹಿಳೆ ಇದ್ದಾರೆ. ಸಂವಿಧಾನದ ಬೃಹತ್ ಗಾತ್ರವನ್ನು ಟೀಕಿಸಿದ ಮಹಿಳೆಯರಿದ್ದಾರೆ. ಸಂವಿಧಾನ ಶಿಲ್ಪಿ ಡಾ॥ ಅಂಬೇಡ್ಕರ್ ಅವರ ಅಭಿಪ್ರಾಯವನ್ನು ವಿರೋಧಿಸಿದವರೂ ಇದ್ದಾರೆ. ಇವರೆಲ್ಲರ ಕೊಡುಗೆಯನ್ನು ಸ್ಮರಿಸುವುದು ಹಾಗೂ ಅವರುಗಳ ಬಗ್ಗೆ ಹೆಚ್ಚು ಆಳವಾದ ಅಧ್ಯಯನ ಮಾಡುವುದು ಅಗತ್ಯ.

ಸಂವಿಧಾನದ ಪ್ರತಿಯನ್ನು ಜೇಬಿನಲ್ಲಿ ಅಥವಾ ಪರ್ಸ್‌ನಲ್ಲಿ ಕೊಂಡೊಯ್ಯುವಷ್ಟು ಚಿಕ್ಕದಾಗಿರಬೇಕೆಂದು, ಭಾರತದ ಸಂವಿಧಾನದ ಗಾತ್ರದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದವರು ಅಮ್ಮು ಸ್ವಾಮಿನಾಥನ್. ಮೂಲಭೂತ ಹಕ್ಕುಗಳು ಮತ್ತು ರಾಜ್ಯ ನಿರ್ದೇಶಕ ತತ್ವಗಳ ಬಗ್ಗೆ ಮಾತನಾಡುತ್ತಾ ಅಮ್ಮು ಅವರು ಸಂವಿಧಾನದ ಗಾತ್ರದ ಬಗ್ಗೆ ತಮ್ಮ ಅಸಮಾಧಾನ ವ್ಯಕ್ತಪಡಿಸಿದ್ದರು. ರಾಜ್ಯಾಡಳಿತದ ಪ್ರತಿಯೊಂದು ವಿಷಯವನ್ನೂ ವಿವರವಾಗಿ ಸಂವಿಧಾನದಲ್ಲಿ ಸೇರಿಸುವ ಅಗತ್ಯವಿಲ್ಲ. ಮುಂದೆ ಅಧಿಕಾರಕ್ಕೆ ಬರುವವರು ಸಂವಿಧಾನಕ್ಕೆ ಅನುಗುಣವಾಗಿ ನಡೆದುಕೊಳ್ಳುವುದರಿಂದ ಎಲ್ಲವನ್ನೂ ತಿಳಿಸುವುದರ ಅಗತ್ಯವಿಲ್ಲ ಎಂಬುದು ಅವರ ಅಭಿಪ್ರಾಯವಾಗಿತ್ತು.



ಅಮ್ಮು ಸ್ವಾಮಿನಾಥನ್

ಸಂವಿಧಾನದ ಬೃಹತ್ ಗಾತ್ರದ ಬಗ್ಗೆ ಇತರರು ಇದೇ ಮಾತನ್ನು ಆಡಿದ್ದರು. ಅದಕ್ಕೆ ಧ್ವನಿಗೂಡಿಸಿದ್ದ ಅಮ್ಮು ಸ್ವಾಮಿನಾಥನ್ ಒಬ್ಬ ಸಾಮಾಜಿಕ ಕಾರ್ಯಕರ್ತೆ. ತಮಿಳುನಾಡಿನ ಮೂಲದ ಅಮ್ಮು ಸಮಾಜ ಸುಧಾರಣೆಯ ಮುಂಚೂಣಿಯಲ್ಲಿದ್ದು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಅವರ ವಂಶಸ್ಥರು ಕೇರಳದವರು. ಅಮ್ಮು ಹುಟ್ಟಿದ್ದು (೧೮೯೪) ಕೇರಳದ ಪಾಲಕ್ಕಾಡ್‌ನಲ್ಲಿ. ತಂದೆ ಗೋವಿಂದ ಮೆನನ್ ಮತ್ತು ತಾಯಿ ಅನಕ್ಕಾರ ವಡಕಾತ್. ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡ ಅಮ್ಮು ಸ್ವಾಮಿನಾಥನ್ ತಾಯಿಯ ಆರೈಕೆಯಲ್ಲಿ ಬೆಳೆದರು. ಮಕ್ಕಳನ್ನು ಸಾಕಲು ತಾಯಿ ಪಟ್ಟ ಶ್ರಮ ಅಮ್ಮುವಿನ ಗಮನಕ್ಕೆ ಬಾರದಿರಲಿಲ್ಲ. ಆದರೆ ಆಗ ಪ್ರಚಲಿತವಿದ್ದ ಸಂಪ್ರದಾಯದ ಪ್ರಕಾರ ಕೇವಲ ೧೩ ವರ್ಷದ ಅಮ್ಮು ಮೂವತ್ತೂರು ವರ್ಷದ ಡಾ॥ ಸುಬ್ಬರಾಮ ಸ್ವಾಮಿನಾಥನ್ ಅವರ ಮಡದಿಯಾದರು. ಅಮ್ಮು ಅವರ ನಾಲ್ಕು ಮಕ್ಕಳಲ್ಲಿ ಇಬ್ಬರು ಪುತ್ರಿಯರು ಹಾಗೂ ಇಬ್ಬರು ಪುತ್ರರು. ಪುತ್ರಿಯರು ಅಮ್ಮನಿಗಿಂತ ಹೆಚ್ಚು ಜನಪ್ರಿಯತೆ ಗಳಿಸಿದರು. ಅವರಲ್ಲಿ ಒಬ್ಬ ಮಗಳು ನಾಟ್ಯ ಪ್ರವೀಣೆ ಮೃಣಾಲಿನಿ ಸಾರಾಭಾಯ್ ಮತ್ತೊಬ್ಬಳು ಸ್ವಾತಂತ್ರ್ಯ ಹೋರಾಟಗಾರ್ತಿ ಕ್ಯಾಪ್ಟನ್ ಲಕ್ಷ್ಮಿ ಸಹಗಾಲ್.

ಪತಿಯ ಪ್ರಭಾವದಿಂದ ಅಮ್ಮು ಮಹಾತ್ಮ ಗಾಂಧಿಯನ್ನು ತಮ್ಮ ನಾಯಕನನ್ನಾಗಿ ಸ್ವೀಕರಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುತ್ತಲೇ ಮದ್ರಾಸ್ ಪ್ರಾಂತದ ಅಖಿಲ ಭಾರತ ಮಹಿಳಾ ಸಮ್ಮೇಳನವನ್ನು ಸ್ಥಾಪಿಸಿದರು. ತದನಂತರ ೧೯೩೪ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ಗೆ ಸೇರಿ ಐದು ವರ್ಷಗಳ ಕಾಲ ಅದರಲ್ಲಿ ಸಕ್ರಿಯವಾಗಿ ಕಾರ್ಯನಿರ್ವಹಿಸಿದರು. ಅಮ್ಮು ಸ್ವಾಮಿನಾಥನ್ ಮದ್ರಾಸ್ ನಗರ ಪಾಲಿಕೆಯ ಸದಸ್ಯರಾಗಿ ಆಯ್ಕೆಯಾಗುವ ಮೂಲಕ ರಾಜಕೀಯ ಪ್ರವೇಶ ಮಾಡಿದರು. ಇದೇ ಸಂದರ್ಭದಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದ್ದರಿಂದ ೧೯೪೫ರಲ್ಲಿ ಒಂದು ವರ್ಷದ ಕಾಲ ವೆಲ್ಲೂರ್ ಸೆರೆಮನೆಯಲ್ಲಿರಬೇಕಾಯಿತು. ೧೯೪೬ರಲ್ಲಿ ಭಾರತದ ತಾತ್ಕಾಲಿಕ ಲೋಕಸಭೆಯ ಸದಸ್ಯರಾಗಿ ಆಯ್ಕೆಗೊಂಡರು. ಈ ಹಂತದಲ್ಲಿ ಸಂವಿಧಾನ ಸಭೆ ರಚನೆಗೊಂಡು ಅದರಲ್ಲಿ ಸದಸ್ಯತ್ವದ ಸ್ಥಾನ ಪಡೆದರು. ಅವರ ರಾಜಕೀಯ ಜೀವನ ಮತ್ತಷ್ಟೂ ಮುಂದುವರಿಯಿತು. ೧೯೫೦ರಿಂದ ೧೯೫೭ರವರೆಗೆ ಏಳು ವರ್ಷಗಳ ಕಾಲ ಲೋಕಸಭೆಯ ಸದಸ್ಯರಾಗಿದ್ದು ತದನಂತರ ೧೯೬೦ರವರೆಗೆ ರಾಜ್ಯ ಸಭೆಯ ಸದಸ್ಯರಾಗಿದ್ದರು. ರಾಜಕೀಯ ನಿವೃತ್ತಿಯ ನಂತರ ಐದು ವರ್ಷಗಳ ಕಾಲ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿ ವಿಶ್ರಾಂತ ಬದುಕು ನಡೆಸುತ್ತಿದ್ದ ಅವರು ೧೯೭೮ರಲ್ಲಿ ನಿಧನರಾದರು.

ಪ್ರಜಾಪ್ರಭುತ್ವ ಆರಂಭವಾಗುತ್ತಿರುವ ಹಂತದಲ್ಲೇ ಅಧಿಕಾರವನ್ನು ಕೇಂದ್ರೀಕರಿಸುವುದು ಸರಿಯಲ್ಲ ಎಂದು ಡಾ॥ ಅಂಬೇಡ್ಕರ್ ಅವರನ್ನೆ ಟೀಕೆಗೆ ಒಳಪಡಿಸಿದ ಮಹಿಳೆ ಅನ್ನಿ ಮಾಸ್ಕರೀನೆ. ಈಕೆ ಕೇರಳದ ರಾಜಕೀಯದಲ್ಲಿ ಜನಪ್ರಿಯ ಹೆಸರು. ಪ್ರಜಾಪ್ರಭುತ್ವದಲ್ಲಿ ಅಧಿಕಾರದ ವಿಕೇಂದ್ರೀಕರಣಕ್ಕೆ ಹೋರಾಡಿದ ಮಹಿಳೆ. ಅಮೆರಿಕ ಮತ್ತು ಇಂಗ್ಲೆಂಡ್‌ನಲ್ಲಿ ಪ್ರಜಾಪ್ರಭುತ್ವ

ಯಶಸ್ವಿಯಾಗಿದೆ. ಅದು ಭಾರತದಲ್ಲೂ ಯಶಸ್ವಿಯಾಗುವ ಸಾಧ್ಯತೆ ಇದೆ ಎಂಬುದು ಅನ್ನಿ ಅವರ ಅಭಿಪ್ರಾಯವಾಗಿತ್ತು. ತಿರುವಾಂಕೂರ್‌ನ ಕ್ರಿಶ್ಚಿಯನ್ ಕುಟುಂಬದಲ್ಲಿ ಜನಿಸಿದ (೧೯೦೨) ಅನ್ನಿ ಬಹಳ ಬುದ್ಧಿವಂತೆ. ತಿರುವಾಂಕೂರ್‌ನ ಮಹಾರಾಜ ಕಾಲೇಜಿನಿಂದ ೧೯೨೫ರಲ್ಲಿ ಎರಡು ಸ್ನಾತಕೋತ್ತರ ಪದವಿ ಪಡೆದು ಶ್ರೀಲಂಕಾದಲ್ಲಿ ಕೆಲವು ಕಾಲ ಉದ್ಯೋಗದಲ್ಲಿದ್ದರು. ಶ್ರೀಲಂಕಾದಿಂದ ತಿರುವನಂತಪುರಕ್ಕೆ ಹಿಂದಿರುಗಿದ ನಂತರ ಎಲ್. ಎಲ್. ಬಿ. ಪರೀಕ್ಷೆ ಬರೆದು ಕಾನೂನು ಪದವಿ ಪಡೆದರು.



**ಅನ್ನಿ ಮಾಸ್ಕರೀನೆ**

ತಿರುವಾಂಕೂರ್ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರಾದ ನಂತರ ತಿರುವಾಂಕೂರ್ – ಕೊಚ್ಚಿನ್ ಶಾಸನ ಸಭೆಯ ಸದಸ್ಯರಾಗಿ, ಮಂತ್ರಿಯಾಗಿಯೂ ಕಾರ್ಯನಿರ್ವಹಿಸಿದರು. ತಿರುವನಂತಪುರಂ ಕ್ಷೇತ್ರದಿಂದ ಸ್ವತಂತ್ರ ಅಭ್ಯರ್ಥಿಯಾಗಿ ಭಾರತದ ಪ್ರಥಮ ಲೋಕಸಭೆಗೆ ಆಯ್ಕೆಯಾಗಿದ್ದರು. ಆ ಮೂಲಕ ಕೇರಳದ ಪ್ರಥಮ ಮಹಿಳಾ ಸಂಸದೆ ಎನಿಸಿ ಕೊಂಡರು. ಐವತ್ತರ ದಶಕದಲ್ಲಿ ಕೇರಳದ ಲೋಕೋಪಯೋಗಿ ಖಾತೆಯ ಮಂತ್ರಿಗಳ ವಿರುದ್ಧ ಭ್ರಷ್ಟಾಚಾರದ ಆರೋಪ ಮಾಡಿ ಅದರಲ್ಲಿ ಸೋಲನ್ನು ಅನುಭವಿಸಿ ದಂಡವನ್ನು ಸಹ ಪಾವತಿಸ ಬೇಕಾಯಿತು. ೧೯೫೭ರ ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿ, ಸೋತ ಅನ್ನಿ ೧೯೬೩ರಲ್ಲಿ ನಿಧನರಾದರು.

ಸಂವಿಧಾನ ಸಭೆಯಲ್ಲಿದ್ದ ಹದಿನೈದು ಮಹಿಳೆಯರಲ್ಲಿ ಬೇಗಂ ಐಜಾಜ್ ರಾಸುಲ್ ಒಬ್ಬರೇ ಮುಸ್ಲಿಂ ಜನಾಂಗಕ್ಕೆ ಸೇರಿದ್ದವರು. ಆಕೆ ಜನಿಸಿದ್ದು (೧೯೦೮) ಯುನೈಟೆಡ್ ಪ್ರಾವಿನ್ಸ್‌ನಲ್ಲಿ. ಆಕೆ ಸಂವಿಧಾನ ಸಭೆಯಲ್ಲಿ ಮಾಡಿರುವ ಭಾಷಣಗಳನ್ನು ಗಮನಿಸಿದರೆ, ಆಕೆಯ ದೂರದೃಷ್ಟಿ ತಿಳಿಯುತ್ತದೆ. ವಿಶೇಷವಾಗಿ ಜಾತಿ ಆಧಾರಿತ ಮೀಸಲಾತಿಯನ್ನು ಖಂಡಿಸಿದ ಬೇಗಂ, ಮೀಸಲಾತಿಯು ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತರ ನಡುವೆ ಕಂದರವನ್ನು ಉಂಟುಮಾಡುವುದಲ್ಲದೆ ಕೋಮು ಭಾವನೆಯನ್ನು ಶಾಶ್ವತವಾಗಿಸುತ್ತದೆ ಎಂದು ತಮ್ಮ ಭಾಷಣದಲ್ಲಿ ಹೇಳಿದ್ದರು. ಅಲ್ಪಸಂಖ್ಯಾತರಿಗೆ ಪ್ರತ್ಯೇಕ ಚುನಾವಣೆಯನ್ನು ಹಾಗೂ ಶಾಸನ ಸಭೆಯಲ್ಲಿ ಅಲ್ಪಸಂಖ್ಯಾತರಿಗೆ ಸ್ಥಾನಗಳ ಮೀಸಲಾತಿಯನ್ನು ಆಕೆ ವಿರೋಧಿಸಿದ್ದರು. ಬೇಗಂ ಅವರು ಕಾನೂನು ವಿಷಯದಲ್ಲಿ ಮಾತ್ರವಲ್ಲ ಇತರೆ ರಾಷ್ಟ್ರಗಳ ಸಂವಿಧಾನವನ್ನು ಗಂಭೀರವಾಗಿ ಅಭ್ಯಾಸ ಮಾಡಿದ್ದರ ಫಲವಾಗಿ ಅಧಿಕಾರ ಯುಕ್ತವಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಭಾರತವು ಕಾಮನ್‌ವೆಲ್ತ್ ಕೂಟದ ಸದಸ್ಯತ್ವ ಹೊಂದಿರಬೇಕೆಂದು ಆಗ್ರಹಿಸಿದ್ದರು. ಜಮೀನ್ದಾರ್ ಪದ್ಧತಿಯನ್ನು ತೀವ್ರವಾಗಿ ವಿರೋಧಿಸಿದ್ದರು. ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದಂತೆ ಷರತ್ತುಗಳನ್ನು ಸೇರಿಸುವ ಸಂದರ್ಭದಲ್ಲಿ ಬೇಗಂ ತಮ್ಮ ಅಸಮಾಧಾನ ವ್ಯಕ್ತಪಡಿಸಿದ್ದರು. ಒಂದು ಕೈಯಲ್ಲಿ ಕೊಟ್ಟಿದ್ದನ್ನು ಮತ್ತೊಂದು ಕೈಯಲ್ಲಿ ಕಿತ್ತುಕೊಳ್ಳುವಂತಾಗಿದೆ ಎಂದು ಷರತ್ತುಗಳನ್ನು ಟೀಕಿಸಿದ್ದರು. ಮೂಲಭೂತ ಹಕ್ಕುಗಳು ಮತ್ತು ರಾಜ್ಯ ನಿರ್ದೇಶಕ ತತ್ವಗಳನ್ನು ಪರಿಣಾಮಕಾರಿಯಾಗಿ ಆಚರಣೆಗೆ ತರಲು ಒಂದು ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಹೇಳಿದ್ದರು.

ಚಿಕ್ಕ ವಯಸ್ಸಿನಲ್ಲೇ ನವಬ್ ಐಜಾಜ್ ರಾಸುಲ್ ಅವರನ್ನು ವಿವಾಹವಾಗಿದ್ದ ಬೇಗಂ ರಾಜಕೀಯ ಪ್ರವೇಶಿಸಿದ್ದು ಮುಸ್ಲಿಂ ಲೀಗ್ ಸದಸ್ಯರಾಗಿ. ಗವರ್ನಮೆಂಟ್ ಆಫ್ ಇಂಡಿಯಾ ಕಾಯ್ದೆ ೧೯೩೫ರ ಅನುಸಾರ ನಡೆದ ಚುನಾವಣೆಯಲ್ಲಿ ೧೯೩೭ರಲ್ಲಿ ಉತ್ತರ ಪ್ರದೇಶದ ರಾಜ್ಯ ವಿಧಾನಸಭೆಗೆ ಆಯ್ಕೆಯಾದರು. ಮೂರು ವರ್ಷಗಳ ಕಾಲ ವಿಧಾನಸಭೆಯ ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸಿ ವಿಶ್ವದಲ್ಲೇ ಈ ಹುದ್ದೆಯನ್ನು



**ಬೇಗಂ ಐಜಾಜ್ ರಾಸುಲ್**

ಅಲಂಕರಿಸಿದ ಪ್ರಥಮ ಮಹಿಳೆ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಸ್ವಾತಂತ್ರ್ಯ ಬಂದ ನಂತರ ಬೇಗಂ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸೇರಿದರು. ೧೯೫೨ರಲ್ಲಿ ಬೇಗಂ ರಾಜ್ಯಸಭೆಗೆ ಆಯ್ಕೆಯಾದರು. ೧೯೬೯ರಲ್ಲಿ ಅವರು ಉತ್ತರ ಪ್ರದೇಶದ ಸಮಾಜ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಖಾತೆಯನ್ನು ನಿರ್ವಹಿಸಿದ್ದರು. ರಾಜಕೀಯವಲ್ಲದೆ ಬೇಗಂ ಕ್ರೀಡೆ ಮತ್ತು ಸಾಹಿತ್ಯದಲ್ಲಿ ಆಸಕ್ತರಾಗಿದ್ದರು. ಕ್ರೀಡೆಯಲ್ಲಿ ಮಹಿಳೆಯರನ್ನು ಪ್ರೋತ್ಸಾಹಿಸುತ್ತಿದ್ದರು. ಬೇಗಂ ಅವರ ಈ ಆಸಕ್ತಿ ಅವರನ್ನು ಹಾಕಿಯತ್ತ ಕೊಂಡೊಯ್ದಿತು. ಅವರು ಭಾರತದ ಮಹಿಳಾ ಹಾಕಿ ಫೆಡರೇಷನ್ ಮತ್ತು ಏಷ್ಯನ್ ಮಹಿಳಾ ಹಾಕಿ ಫೆಡರೇಷನ್‌ನ ಅಧ್ಯಕ್ಷರಾಗಿದ್ದರು. ಅವರು ತ್ರೀ ವೀಕ್ಸ್ ಇನ್ ಜಪಾನ್ ಎಂಬ ಪ್ರವಾಸ ಕಥನವನ್ನು ಬರೆದಿದ್ದಾರೆ. ಅವರ ಆತ್ಮಕಥೆ ಫ್ರಮ್ ಪರ್ದಾ ಟು ಪಾರ್ಲಿಮೆಂಟ್ – ಎ ಮುಸ್ಲಿಂ ವುಮೆನ್ ಇನ್ ಇಂಡಿಯನ್ ಪಾಲಿಟಿಕ್ಸ್ ಪ್ರಕಟವಾಗಿದೆ. ಭಾರತ ಸರ್ಕಾರವು ಬೇಗಂ ಅವರ ಬಹುಮುಖಿ ಸೇವೆಯನ್ನು ಗುರುತಿಸಿ ೨೦೦೦ದಲ್ಲಿ ಪದ್ಮಶ್ರೀ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಭಾರತದ ಸಂವಿಧಾನದ ರಚನೆಯಲ್ಲಿ ಮುಖ್ಯ ಪಾತ್ರ ವಹಿಸಿದ ಬೇಗಂ ರಾಸುಲ್ ೨೦೦೧ರಲ್ಲಿ ತೀರಿಕೊಂಡರು.

ಸಂವಿಧಾನವನ್ನು ರಚಿಸಲು ಭಾರತ ಸರ್ಕಾರ ಒಂದು ಸಮಿತಿಯನ್ನು ರಚಿಸಿತು. ಆದರೆ ಆ ಸಮಿತಿ ಪ್ರಜಾಪ್ರತಿನಿಧಿಗಳಿಂದ ಕೂಡಿರಲಿಲ್ಲ. ಚುನಾವಣೆಗೆ ಸಮಯವಿಲ್ಲದ ಕಾರಣ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡಲಾಗಿತ್ತು. ಜನರಿಂದ ಆಯ್ಕೆಯಾಗದ ಸದಸ್ಯರಿಂದ ರಚಿತವಾಗುವ ಸಂವಿಧಾನ ಎಷ್ಟು ಪ್ರಜಾಪ್ರಭುತ್ವವಾಗಿರುತ್ತದೆ ಎಂಬುದರ ಬಗ್ಗೆ ಆ ಕಾಲಘಟ್ಟದಲ್ಲಿ ಸಾಕಷ್ಟು ಚರ್ಚೆ ನಡೆದಿತ್ತು. ರಾಷ್ಟ್ರದ ಪ್ರಥಮ ಸಾರ್ವಜನಿಕ ಚುನಾವಣೆಯಲ್ಲಿ ಮತಹಾಕುವ ಮೂಲಕ ಸಂವಿಧಾನವನ್ನು ನಿರ್ಧರಿಸಬೇಕೆಂಬ ವಿನೂತನ ಸಲಹೆ ನೀಡಿದವರು ದಾಕ್ಷಾಯಿಣಿ ವೇಲಾಯುಧನ್. ಪದವಿ ಪಡೆದ ಪ್ರಥಮ ಭಾರತೀಯ ದಲಿತ ಮಹಿಳೆ, ದಾಕ್ಷಾಯಿಣಿ ಭಾರತದ ಸಂವಿಧಾನದ ರಚನೆಯಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ್ದರು. ಅಸ್ಪೃಶ್ಯತೆಯು ಕಾನೂನು ಬಾಹಿರ ಎಂದು ಸಂವಿಧಾನದಲ್ಲೇ ಸೇರಿಸಬೇಕೆಂದು ಒತ್ತಾಯಿಸಿದ ಮಹಿಳೆ ದಾಕ್ಷಾಯಿಣಿ ವೇಲಾಯುಧನ್. ಸಂವಿಧಾನದ ಬಗ್ಗೆ ಚರ್ಚೆ ನಡೆಯುತ್ತಿರುವ ಸಂದರ್ಭದಲ್ಲಿ ದಲಿತ ಸಮುದಾಯಕ್ಕೆ ಪ್ರತ್ಯೇಕ ಮತದಾರರ ಮಂಡಳಿ (ಎಲೆಕ್ಟೋರೇಟ್) ರಚಿಸಬೇಕೆಂಬ ವಿಷಯವೂ ಪ್ರಸ್ತಾಪವಾಯಿತು. ಅದಕ್ಕೆ ತೀವ್ರ ವಿರೋಧ ವ್ಯಕ್ತಪಡಿಸಿದವರಲ್ಲಿ ದಾಕ್ಷಾಯಿಣಿ ವೇಲಾಯುಧನ್ ಸಹ ಒಬ್ಬರು. ಸ್ವತಂತ್ರ ಭಾರತವು ಜಾತಿ, ಮತ ಆಧಾರಿತ

ಭೇದಭಾವಗಳಿಂದ ಮುಕ್ತವಾಗಿರಬೇಕೆಂದು ಆಕೆ ಬಯಸಿದ್ದರು.

ದಾಕ್ಷಾಯಿಣಿ ವೇಲಾಯುಧನ್ ಎರ್ನಾಕುಲಮ್ ಜಿಲ್ಲೆಯ ಮುಲವುಕಾಡ್ ಎಂಬ ಹಳ್ಳಿಯಲ್ಲಿ ೧೯೧೨ರ ಜುಲೈ ನಾಲ್ಕರಂದು ಜನಿಸಿದರು. ಅವರು ಪುಲಯಾ ಕುಲಕ್ಕೆ ಸೇರಿದವರು. ಆ ಕಾಲದಲ್ಲಿ ಪುಲಯ ವರ್ಗಕ್ಕೆ ಸೇರಿದ ಹೆಂಗಸರು ಕುಪ್ಪಸ ತೊಡುತ್ತಿರಲಿಲ್ಲವಾದರೂ ಅದನ್ನು ತೊಟ್ಟ ಪ್ರಥಮ ಮಹಿಳೆ ದಾಕ್ಷಾಯಿಣಿ. ಕೊಚ್ಚಿನ್ ಸರ್ಕಾರದ ಸ್ಕಾಲರ್‌ಶಿಪ್ ಪಡೆದ ದಾಕ್ಷಾಯಿಣಿ ತಮ್ಮ ಬಿ.ಎ. ಪದವಿಗಾಗಿ ಮದ್ರಾಸ್ ವಿಶ್ವವಿದ್ಯಾಲಯಕ್ಕೆ ಸೇರಿದರು. ಜೊತೆಗೆ ಶಿಕ್ಷಕರ ತರಬೇತಿಯಲ್ಲಿ ಸರ್ಟಿಫಿಕೇಟ್ ಪಡೆದರು. ಹತ್ತು ವರ್ಷಗಳ ಕಾಲ (೧೯೩೫ರಿಂದ ೧೯೪೫) ಅವರು ಕೇರಳದ ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕಿಯಾಗಿ ಕಾರ್ಯನಿರ್ವಹಿಸಿದರು. ಮುಂದೆ ಲೋಕಸಭೆಯ ಸಂಸದರಾದ ದಲಿತ ಮುಖಂಡ ಆರ್. ವೇಲಾಯುಧನ್ ಅವರನ್ನು ವಿವಾಹವಾದ ದಾಕ್ಷಾಯಿಣಿ ಐವರು ಮಕ್ಕಳಿಗೆ ಜನ್ಮ ನೀಡಿದರು. ಸೇವಾಗ್ರಾಮ (ವಾರ್ಧಾ)ದಲ್ಲಿ ನಡೆದ ಈ ವಿವಾಹಕ್ಕೆ ಸಾಕ್ಷಿಯಾದವರು ಮಹಾತ್ಮ ಗಾಂಧಿ ಮತ್ತು ಕಸ್ತೂರಬಾ. ವಿವಾಹದ ಮತ್ತೊಂದು ವಿಶೇಷವೆಂದರೆ, ಕುಷ್ಠರೋಗಿಯೊಬ್ಬ ಪೌರೋಹಿತ್ಯ ವಹಿಸಿದ್ದು. ಭಾರತದ ಪ್ರಥಮ ದಲಿತ ರಾಷ್ಟ್ರಪತಿ ಕೆ. ಆರ್. ನಾರಾಯಣನ್, ವೇಲಾಯುಧನ್ ಅವರ ಸಂಬಂಧಿ.

ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ದಾಕ್ಷಾಯಿಣಿ ತಮ್ಮ ವರ್ಗಕ್ಕೆ ಆಗುತ್ತಿದ್ದ ಅವಮಾನ, ಅನ್ಯಾಯ ಮತ್ತು ಅವಹೇಳನವನ್ನು ಪ್ರತ್ಯಕ್ಷವಾಗಿ ಅನುಭವಿಸಿದರು. ದಲಿತರನ್ನು ಈ ಸಮಾಜ ನಡೆಸಿಕೊಳ್ಳುತ್ತಿದ್ದ ರೀತಿ ಅತೀವ ನೋವನ್ನುಂಟುಮಾಡಿತು. ಇದಕ್ಕೆ ರಾಜಕೀಯ ಪರಿಹಾರ ಕಂಡುಕೊಳ್ಳಬೇಕೆಂದು ನಿರ್ಧರಿಸಿ ರಾಜಕೀಯ ಕ್ಷೇತ್ರ ಪ್ರವೇಶಿಸಿದರು. ೧೯೪೫ರಲ್ಲಿ ದಾಕ್ಷಾಯಿಣಿ ಕೊಚ್ಚಿನ್ ವಿಧಾನ ಪರಿಷತ್ತಿಗೆ ನೇಮಕಗೊಂಡರು. ಮರು ವರ್ಷವೇ ಮದ್ರಾಸ್ ಪ್ರೆಸಿಡೆನ್ಸಿಯಿಂದ ಸಂವಿಧಾನ ಸಭೆಗೆ ಆಯ್ಕೆಯಾಗಿ



**ದಾಕ್ಷಾಯಿಣಿ ವೇಲಾಯುಧನ್**




೧೯೫೨ರವರೆಗೆ ಆ ಹುದ್ದೆಯಲ್ಲಿದ್ದರು. ಆ ಸಂದರ್ಭದಲ್ಲಿ ೩೪ರ ಪ್ರಾಯದ ದಾಕ್ಷಾಯಿಣಿ ಅತ್ಯಂತ ಚಿಕ್ಕವಯಸ್ಸಿನ ಸದಸ್ಯರಾಗಿದ್ದರು. ಸಂವಿಧಾನ ಸಭೆಗೆ ಆಯ್ಕೆಯಾದ ದಾಕ್ಷಾಯಿಣಿಗೆ ಗಾಂಧಿ ಮತ್ತು ಅಂಬೇಡ್ಕರ್ ಇಬ್ಬರೂ ಆದರ್ಶವಾಗಿದ್ದರು. ಅವರ ವಿಚಾರಗಳಿಂದ ಪ್ರಭಾವಿತರಾಗಿದ್ದ ಅವರಿಗೆ, ಸಭೆಯು ಕೇವಲ ಒಂದು ಸಂವಿಧಾನವನ್ನು ರಚಿಸುವುದಕ್ಕೆ ಸೀಮಿತ ಗೊಳ್ಳದೆ ಸ್ವತಂತ್ರ ಭಾರತದ ಪ್ರಜೆಗಳಿಗೆ ಹೊಸ ಬದುಕನ್ನು ಕಟ್ಟಿಕೊಡಬೇಕೆಂದು ಆಶಿಸಿದ್ದರು. ಮುಖ್ಯವಾಗಿ ಅಸ್ಪೃಶ್ಯತೆಯನ್ನು ಬುಡಸಮೇತ ಕಿತ್ತೊಗೆಯುವುದು ಅವರ ಧ್ಯೇಯವಾಗಿತ್ತು. ಅಸ್ಪೃಶ್ಯತೆಯನ್ನು ಕಾನೂನು ಬಾಹಿರ ಎಂದು ಘೋಷಿಸಿ, ಕೆಳವರ್ಗದ ಸಮುದಾಯಕ್ಕೆ ಸೂಕ್ತ ರಕ್ಷಣೆ ಒದಗಿಸಬೇಕೆಂದು ಆಗ್ರಹಿಸಿದರು.

ಆಗಸ್ಟ್ ೨೮, ೧೯೪೭ರಂದು ಮಾಡಿದ ಭಾಷಣದಲ್ಲಿ ಸಂವಿಧಾನ ಸಭೆಯಲ್ಲಿ ದಾಕ್ಷಾಯಿಣಿ ಮಾಡಿದ ಭಾಷಣದಲ್ಲಿ ಭಾರತೀಯ ಪ್ರಜೆಗಳ, ವಿಶೇಷವಾಗಿ ದಲಿತರ ಬಗ್ಗೆ ಆಕೆಗಿದ್ದ ಕಳಕಳಿ ವ್ಯಕ್ತವಾಗುತ್ತದೆ. ಭಾರತವನ್ನು ಒಂದು ಸಮಾಜವಾದಿ ಗಣರಾಜ್ಯವನ್ನಾಗಿ ರೂಪಿಸಿದಾಗ ಮಾತ್ರ ದಲಿತರ ಉದ್ಧಾರ ಆಗುತ್ತದೆ ಎಂಬ ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾರೆ. ಅಸ್ಪೃಶ್ಯತೆಯನ್ನು ಒಂದು ರಾಜಕೀಯ ಅಸ್ತ್ರವನ್ನಾಗಿ ಬಳಸಿಕೊಳ್ಳದೆ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಯ ಮೂಲಕ ಈ ಅನಿಷ್ಟ ಪದ್ಧತಿಯನ್ನು ಹೋಗಲಾಡಿಸಬೇಕೆಂದು ಹೇಳಿದರು. ಎಲ್ಲಿಯ ತನಕ ದಲಿತರು ಆರ್ಥಿಕವಾಗಿ ಸಬಲರಾಗದೆ ಇತರೆ ಜನಾಂಗದವರನ್ನು ಆಶ್ರಯಿಸುತ್ತಾರೋ ಅಲ್ಲಿಯವರೆಗೆ ಅಸ್ಪೃಶ್ಯತೆಯ ನಿವಾರಣೆ ಆಗುವುದಿಲ್ಲ. ಆದ್ದರಿಂದ ದಲಿತರ ಆರ್ಥಿಕ ಮತ್ತು ಸಾಮಾಜಿಕ ಬಲವರ್ಧನೆಗೆ ಅಗತ್ಯವಾದ ಅಂಶಗಳನ್ನು ಸಂವಿಧಾನದಲ್ಲಿ ಸೇರಿಸಬೇಕೆಂಬುದು ದಾಕ್ಷಾಯಿಣಿ ಅವರ ಬೇಡಿಕೆಯಾಗಿತ್ತು. ದಲಿತರಿಗೆ ಪ್ರತ್ಯೇಕ ಚುನಾವಣಾ ಮಂಡಳಿಯ ಪ್ರಸ್ತಾಪವನ್ನು ದಾಕ್ಷಾಯಿಣಿ ಸಂಪೂರ್ಣವಾಗಿ ವಿರೋಧಿಸಿದ್ದರು. ಅಧಿಕಾರವನ್ನು ಅತಿಯಾಗಿ ಕೇಂದ್ರೀಕರಿಸಿರುವ ಬಗ್ಗೆ ತಮ್ಮ ಅಸಮಾಧಾನ ವ್ಯಕ್ತಪಡಿಸಿದರು. ಕೇಂದ್ರವು ಹೆಚ್ಚು ಅಧಿಕಾರವನ್ನು ಉಳಿಸಿ ಕೊಳ್ಳುವುದು ಅಗತ್ಯವಾದರೂ, ವಿಕೇಂದ್ರೀಕರಣಕ್ಕೆ ಸೂಕ್ತ ವ್ಯವಸ್ಥೆ ಮಾಡಬೇಕೆಂದು ಹೇಳಿದ್ದರು. ಈ ವಿಷಯದಲ್ಲಿ ಬ್ರಿಟಿಷ್ ಮಾದರಿಯನ್ನು ಅನುಸರಿಸುವ ಬದಲು ಕ್ರಿಯಾಶೀಲವಾಗಿ ಯೋಚಿಸಿ ನಮ್ಮದೆ ವ್ಯವಸ್ಥೆ ಮಾಡಬೇಕೆಂಬುದು ಅವರ ನಿಲುವಾಗಿತ್ತು.

ಸಂವಿಧಾನದ ರಚನೆಯಲ್ಲಿ ತಮ್ಮ ಅಮೂಲ್ಯ ಕೊಡುಗೆಯನ್ನಿತ್ತ ಮಹಿಳೆಯರಲ್ಲಿ ದುರ್ಗಾಬಾಯ್ ದೇಶ್‌ಮುಖ್ ಒಬ್ಬರು. ಕಾನೂನು ಪದವಿ ಪಡೆದಿದ್ದ ಈಕೆ ಸಂವಿಧಾನದಲ್ಲಿ ನ್ಯಾಯಾಂಗದ ಪಾತ್ರ ಮತ್ತು ಅದರ ಸಂರಚನೆಯ ಬಗ್ಗೆ ಸಾಕಷ್ಟು ಸಲಹೆಗಳನ್ನು ನೀಡಿದ್ದರು. ನ್ಯಾಯಾಧೀಶರ ನೇಮಕ, ನ್ಯಾಯಾಂಗದ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆ ಬಗ್ಗೆ ಹೆಚ್ಚು ಕಾಳಜಿ ವಹಿಸಿದ ದುರ್ಗಾಬಾಯ್, ಭಾರತದ ಪ್ರಜೆಗಳನ್ನು ಮಾತ್ರ ನ್ಯಾಯಾಧೀಶರ ಸ್ಥಾನಕ್ಕೆ ಆಯ್ಕೆ ಮಾಡಬೇಕೆಂಬ ಅವರ ಸಲಹೆಯನ್ನು ಸಂವಿಧಾನ ಸಭೆ ಒಪ್ಪಿಕೊಂಡಿತು. ಕೇವಲ ಹನ್ನೆರಡು ವರ್ಷದ ದುರ್ಗಾಬಾಯ್ ೧೯೨೨ರ ಅಸಹಕಾರ ಚಳವಳಿಯಲ್ಲಿ ಭಾಗವಹಿಸುವ ಮೂಲಕ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಆರಂಭಿಸಿದ ಮಹಿಳೆ. ದುರ್ಗಾಬಾಯಿ ದೇಶ್‌ಮುಖ್ ಆಂಧ್ರಪ್ರದೇಶಕ್ಕೆ ಸೇರಿದವರು. ಹುಟ್ಟಿದ್ದು ೧೯೦೯ರ ಜುಲೈ ೧೫ರಂದು. ಆಂಧ್ರ ಮಹಿಳಾ ಸಭೆಯನ್ನು ಸ್ಥಾಪಿಸಿ ಅದರ ಮೂಲಕ ಮಹಿಳೆಯರ ಶಿಕ್ಷಣ ಮತ್ತು ಸಾಮಾಜಿಕ ಬೆಳವಣಿಗೆಗೆ ಕಾರಣರಾದವರು. ಆಂಧ್ರ ಮಹಿಳಾ ಎಂಬ ಪತ್ರಿಕೆಯನ್ನೂ ಆರಂಭಿಸಿದ್ದರು. ಗಾಂಧಿಯವರ ತತ್ವಗಳನ್ನು ರಾಜಮುಂಡ್ರಿ ಮತ್ತು ಕಾಕಿನಾಡ ಪ್ರದೇಶದಲ್ಲಿ ಪ್ರಚುರಪಡಿಸಿದ ದುರ್ಗಾಬಾಯ್ ಅನೇಕ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿದರು. ಮದ್ರಾಸ್ ನಗರದಲ್ಲಿ (೧೯೩೦) ಆಂಧ್ರ ಕೇಸರಿ ಎಂದು ಪ್ರಖ್ಯಾತರಾದ ಟಿ. ಪ್ರಕಾಸಂ ಅವರ ನೇತೃತ್ವದಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಭಾಗವಹಿಸಿದ ದುರ್ಗಾಬಾಯ್ ತಮ್ಮ ರಾಜಕೀಯ ಚಟುವಟಿಕೆಗಳ ನಡುವೆ ಎಂ. ಎ. ಸ್ನಾತಕೋತ್ತರ ಪದವಿಯನ್ನು ಹಾಗೂ ಬಿಎಲ್ ಪದವಿಯನ್ನು ಗಳಿಸಿದರು.

ಹಿಂದಿ ಭಾಷೆಯ ಹೇರಿಕೆಯ ಬಗ್ಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದ ದುರ್ಗಾಬಾಯ್, ಒಂದು ಭಾಷೆಯನ್ನು ರಾಷ್ಟ್ರೀಯ ಭಾಷೆಯನ್ನಾಗಿ ಸ್ವೀಕರಿಸಲು ಸಾಕಷ್ಟು ಕಾಲಾವಕಾಶ ಅಗತ್ಯ



ದುರ್ಗಾಬಾಯ್ ದೇಶ್‌ಮುಖ್

ಎಂದಿದ್ದರು. ಹಿಂದಿ ಮತ್ತು ಉರ್ದು ಸೇರಿರುವ ಹಿಂದೂಸ್ಥಾನಿ ಭಾಷೆಯನ್ನು ರಾಷ್ಟ್ರೀಯ ಭಾಷೆಯನ್ನಾಗಿ ಅಂಗೀಕರಿಸಬಹುದು. ಆದರೆ, ಇದಕ್ಕೆ ಕನಿಷ್ಠ ೧೫ ವರ್ಷ ಬೇಕಾಗಿದ್ದು ಅಲ್ಲಿಯವರೆಗೆ ಯಥಾಸ್ಥಿತಿಯನ್ನು ಮುಂದುವರಿಸ ಬೇಕೆಂದು ತಿಳಿಸಿದರು. ಭಾಷೆಯ ವಿಷಯದಲ್ಲಿ ದುರ್ಗಾಬಾಯ್ ನೀಡಿದ ಮತ್ತೊಂದು ಸಲಹೆ ಇಂದಿಗೂ ಪ್ರಸ್ತುತವಾಗಿದೆ. ದಕ್ಷಿಣದವರು ಹಿಂದೂಸ್ಥಾನಿ ಭಾಷೆ ಕಲಿಯುವಂತೆ, ಉತ್ತರದವರು ತಮಿಳು, ತೆಲುಗು, ಕನ್ನಡ ಅಥವಾ ಬೆಂಗಾಳಿ ಭಾಷೆಯನ್ನು ಕಲಿಯಬೇಕಾಗುತ್ತದೆ ಎಂದಿದ್ದರು.

ದುರ್ಗಾಬಾಯ್ ದೇಶ್‌ಮುಖ್ ಅವರ ಸಾಮಾಜಿಕ ಚಟುವಟಿಕೆಗಳು ಜವಹರಲಾಲ್ ನೆಹರು ಅವರ ಗಮನ ಸೆಳೆಯಿತು. ಈಕೆಯ ಸೇವೆಯನ್ನು ರಾಷ್ಟ್ರಮಟ್ಟದಲ್ಲಿ ಉಪಯೋಗಿಸಿ ಕೊಳ್ಳಬೇಕೆಂದು ದುರ್ಗಾಬಾಯ್ ಅವರನ್ನು ಕೇಂದ್ರ ಸಮಾಜ ಕಲ್ಯಾಣ ಮಂಡಳಿ, ಹೆಣ್ಣುಮಕ್ಕಳ ಮತ್ತು ಮಹಿಳೆಯರ ಕೇಂದ್ರ ಶಿಕ್ಷಣ ಸಮಿತಿ ಇತ್ಯಾದಿಗೆ ಅವರು ನೇಮಿಸಿಕೊಂಡರು. ಲೋಕಸಭೆಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದರು. ದುರ್ಗಾಬಾಯ್ ಅವರನ್ನು ಯೋಜನಾ ಆಯೋಗದ ಸದಸ್ಯರನ್ನಾಗಿಯೂ ಆಯ್ಕೆ ಮಾಡಲಾಯಿತು. ಮಹಿಳೆಯರ ಶಿಕ್ಷಣ ಮತ್ತು ಅಭಿವೃದ್ಧಿಯಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಕಾರಣ ದುರ್ಗಾಬಾಯ್ ಅವರಿಗೆ ಅನೇಕ ಪ್ರಶಸ್ತಿಗಳು ದೊರಕಿದವು. ಅವುಗಳಲ್ಲಿ ಮುಖ್ಯವಾದವು ಪಾಲ್ ಜಿ ಹಫ್‌ಮನ್ ಪ್ರಶಸ್ತಿ, ನೆಹರು ಸಾಕ್ಷರತಾ ಪ್ರಶಸ್ತಿ, ಯುನೆಸ್ಕೊ ಪ್ರಶಸ್ತಿ ಇತ್ಯಾದಿ. ದುರ್ಗಾಬಾಯ್ ಅವರ ಸಮಾಜ ಸೇವೆಯನ್ನು ಗುರುತಿಸಿದ ಕೇಂದ್ರ ಸರ್ಕಾರ ೧೯೭೫ರಂದು ಅವರಿಗೆ ಪದ್ಮವಿಭೂಷಣ ನೀಡಿ ಗೌರವಿಸಿತು. ೧೯೮೧ರ ಮೇ ತಿಂಗಳು ೯ರಂದು ದುರ್ಗಾಬಾಯ್ ವಿಧಿವಶವಾದರು.

೧೯೪೭ರ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಘೋಷಣೆಯಾದ ಕೆಲವೇ ನಿಮಿಷಗಳ ನಂತರ ಭಾರತದ ಮಹಿಳೆಯರ ಪರವಾಗಿ ರಾಷ್ಟ್ರಧ್ವಜವನ್ನು ಸಂವಿಧಾನ ಸಭೆಗೆ ನೀಡಿದ ಹಿರಿಮೆಗೆ ಪಾತ್ರರಾಗಿರುವ ಮಹಿಳೆ ಹನ್ಸಾ ಜೀವರಾಜ್ ಮೆಹ್ತಾ. ಇದು ಸ್ವತಂತ್ರ ಭಾರತದ ಮೇಲೆ ಹಾರಾಡಿದ ಮೊದಲ ಧ್ವಜ. ಹನ್ಸಾ ಮೆಹ್ತಾ ಗುಜರಾತ್ ರಾಜ್ಯದವರು. ಗಾಂಧೀಜಿಯವರ ನೇತೃತ್ವದಲ್ಲಿ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಮೆಹ್ತಾ ಜೈಲು ಸೇರಿದ್ದೂ ಇದೆ. ಸಮಾಜ ಸೇವೆಯ ಮೂಲಕ ಸಾರ್ವಜನಿಕ ಕ್ಷೇತ್ರಕ್ಕೆ ಕಾಲಿಟ್ಟ ಈಕೆ ಮಹಿಳೆಯರ ಹಕ್ಕುಗಳಿಗೆ ರಾಷ್ಟ್ರೀಯ ಮಾನ್ಯತೆ ತಂದುಕೊಟ್ಟರು. ಸಂವಿಧಾನದ ಸಭೆಯಲ್ಲಿ (೧೯೪೬–೪೯) ಅವರು ಮಹಿಳೆಯರ ಕುರಿತು ಮಾಡಿದ ಭಾಷಣ, ಕೊಟ್ಟ ಸಲಹೆಗಳು ಈಗ ನಮ್ಮ ಸಂವಿಧಾನದಲ್ಲಿ ಸೇರಿವೆ. ಏಕರೂಪ ನಾಗರಿಕ ಸಂಹಿತೆಗೂ ತಮ್ಮ ಪ್ರೋತ್ಸಾಹ ಸೂಚಿಸಿದ್ದರು. ಹನ್ಸಾ ಮೆಹ್ತಾ ಹುಟ್ಟಿದ್ದು ೧೮೯೭ರಲ್ಲಿ. ಅವರ ತಂದೆ ಬರೋಡಾದ ದಿವಾನರಾಗಿದ್ದ ಮನುಭಾಯ್ ಮೆಹ್ತಾ. ಬರೋಡಾ ವಿಶ್ವವಿದ್ಯಾಲಯದಲ್ಲಿ ಆನಂತರ ಲಂಡನ್‌ನಲ್ಲಿ ಶಿಕ್ಷಣ ಪಡೆದರು. ಹನ್ಸಾ ಮೆಹ್ತಾ ಸಮಾಜ ಸೇವೆಯಲ್ಲಿದ್ದುಕೊಂಡು ಹತ್ತಾರು ಪುಸ್ತಕಗಳನ್ನು ರಚಿಸಿದರು. ಅವುಗಳಲ್ಲಿ ಗುಜರಾತಿ ಯಿಂದ ಇಂಗ್ಲಿಷ್‌ಗೆ ಭಾಷಾಂತರ ಮಾಡಿದ ಪುಸ್ತಕಗಳೂ ಸೇರಿವೆ. ಅನೇಕ ಸಮಾಜ ಸೇವಾ ಸಂಸ್ಥೆಗಳಲ್ಲಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು.

ಸಂವಿಧಾನ ಸಭೆಗೆ ಆಯ್ಕೆಯಾಗುವ ಮುನ್ನವೇ ಅವರು ಮಹಿಳೆಯರ ಹಕ್ಕುಗಳಿಗಾಗಿ ಸಾಕಷ್ಟು ಶ್ರಮವಹಿಸಿದ್ದರು. ಆದರೆ ಮಹಿಳೆಯರ ಮೀಸಲಾತಿಗೆ ಅವರು ವಿರೋಧ ಸೂಚಿಸಿದ್ದರು. ಮಹಿಳೆಯರಿಗೆ ಸೂಕ್ತ ಅವಕಾಶ ಕಲ್ಪಿಸಿದಲ್ಲಿ, ಸಮಾನತೆ ತಾನಾಗೆ ಉಂಟಾಗುತ್ತದೆ ಎಂಬುದು ಹನ್ಸಾ ಮೆಹ್ತಾ ಅವರ ಅಭಿಪ್ರಾಯವಾಗಿತ್ತು. ೧೯೩೭ರಲ್ಲಿ ನಡೆದ ಚುನಾವಣೆಯಲ್ಲಿ ಬಾಂಬೆ ವಿಧಾನ ಪರಿಷತ್ತಿಗೆ ಮೀಸಲು ಕ್ಷೇತ್ರವನ್ನು ನಿರಾಕರಿಸಿ ಸಾಮಾನ್ಯ ಕ್ಷೇತ್ರದಿಂದ ಆಯ್ಕೆಯಾದರು. ಎರಡು ವರ್ಷಗಳ ಕಾಲ ಪರಿಷತ್ತಿನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದರು. ನಂತರ ೧೯೪೯ರವರೆಗೆ ಪರಿಷತ್ತಿನ ಸದಸ್ಯರಾಗಿದ್ದರು. ಹೈದರಾಬಾದ್‌ನಲ್ಲಿ ೧೯೪೬ರಲ್ಲಿ ನಡೆದ ಅಖಿಲ ಭಾರತೀಯ ಮಹಿಳಾ ಕಾಂಗ್ರೆಸ್ ಅಧಿವೇಶನದಲ್ಲಿ ಹನ್ಸಾ ಮೆಹ್ತಾ ಸಂವಿಧಾನ ರಚನಾ ಸಭೆಯಲ್ಲಿದ್ದ ಮತ್ತೊಬ್ಬ ಮಹಿಳಾ ಸದಸ್ಯೆ, ರಾಜಕುಮಾರಿ ಅಮೃತ್ ಕೌರ್ ಅವರೊಂದಿಗೆ ಸೇರಿ ಭಾರತೀಯ ಮಹಿಳೆಯರ ಹಕ್ಕುಗಳ ಮತ್ತು ಕರ್ತವ್ಯಗಳ ಸನ್ನದನ್ನು ಮಂಡಿಸಿದ್ದರಲ್ಲದೆ ಮತ್ತೊಬ್ಬ ಸದಸ್ಯೆ ವಿಜಯಲಕ್ಷ್ಮಿ ಪಂಡಿತ್ ಜೊತೆಗೂಡಿ ವಿಶ್ವಸಂಸ್ಥೆಯಲ್ಲಿ ಮಹಿಳೆಯರ ಸಮಾನತೆ ಹಾಗೂ ಮಾನವ ಹಕ್ಕುಗಳಿಗಾಗಿ ಹೋರಾಡಿದರು. ಹನ್ಸಾ ಮೆಹ್ತಾ ವಿಶ್ವಸಂಸ್ಥೆಯ ಮಾನವ ಹಕ್ಕು ಆಯೋಗದ ಉಪಾಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದರು. ವಿಶ್ವ ಸಂಸ್ಥೆಯು All men are born free and equal ಎಂದು ಸಿದ್ಧಪಡಿಸಿದ್ದ ಘೋಷಣಾ ವಾಕ್ಯವನ್ನು All human being are born free and equal ಎಂದು ಬದಲಾಯಿಸುವಲ್ಲಿ ಯಶಸ್ವಿಯಾದರು.



ಹನ್ಸಾ ಜೀವರಾಜ್ ಮೆಹ್ತಾ

ಹನ್ಸಾ ಮೆಹ್ತಾ ಅವರು ೧೯೪೬–೪೯ರವರೆಗೆ ಸಂವಿಧಾನದ ಮೂಲಭೂತ ಹಕ್ಕುಗಳ ಉಪ ಸಮಿತಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ಪರಿಶಿಷ್ಟ ಜಾತಿಯವರಿಗೆ ಮೀಸಲಾತಿಯನ್ನು ಒಪ್ಪಿದರೂ ಇತರರಿಗೆ ಜಾತಿ ಆಧಾರಿತ ಮೀಸಲಾತಿಗೆ ವಿರೋಧವಿತ್ತು. ಪರಿಶಿಷ್ಟ ಜಾತಿಯವರು ಹಿಂದೂ ಸಮಾಜದಲ್ಲಿ ಸಾಕಷ್ಟು ಕಷ್ಟ, ನೋವು, ಅವಮಾನ ಇತ್ಯಾದಿ ಅನುಭವಿಸಿದ್ದಾರೆ. ಇವೆಲ್ಲದರಿಂದ ಅವರಿಗೆ ಮುಕ್ತಿ ದೊರೆಯುವಂತೆ ಮಾಡಬೇಕೆಂದು, ಸಂವಿಧಾನದಲ್ಲಿ ಸೂಕ್ತ ವ್ಯವಸ್ಥೆ ಮಾಡಬೇಕೆಂದು ಆಗ್ರಹಿಸಿದರು. ದೇವದಾಸಿ ಪದ್ಧತಿ ಮತ್ತು ಬಾಲ್ಯವಿವಾಹದ ಬಗ್ಗೆ ಧ್ವನಿ ಎತ್ತಿದವರು ಹನ್ಸಾ. ವೈಯಕ್ತಿಕ ಕಾನೂನುಗಳು ದೇಶವನ್ನು ವಿಭಜನೆಯತ್ತ ಕೊಂಡೊಯ್ಯುತ್ತಿದ್ದು, ಭಾರತಕ್ಕೆ ಏಕರೂಪ ನಾಗರಿಕ ಸಂಹಿತೆಯ ಅಗತ್ಯವಿದೆ ಎಂದು ಹನ್ಸಾ ಸಂವಿಧಾನ ಸಭೆಯಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಬರೋಡಾದ ಪ್ರಸಿದ್ಧ ಎಂ.ಎಸ್. ವಿಶ್ವವಿದ್ಯಾಲಯದ ಪ್ರಥಮ ವೈಸ್‌ಚಾನ್ಸಲರ್ ಆಗುವ ಮೂಲಕ ಅವರು ಭಾರತದ ಪ್ರಥಮ ಮಹಿಳಾ ವೈಸ್‌ಚಾನ್ಸಲರ್ ಎನಿಸಿಕೊಂಡಿದ್ದಾರೆ. ಅವರ ಪತಿ ಜೀವರಾಜ್ ಮೆಹ್ತಾ ಗುಜರಾತ್ ರಾಜ್ಯದ ಪ್ರಥಮ ಮುಖ್ಯಮಂತ್ರಿ. ಕೇಂದ್ರ ಸರ್ಕಾರವು ಹನ್ಸಾ ಮೆಹ್ತಾ ಅವರಿಗೆ ೧೯೫೯ರಲ್ಲಿ ಪದ್ಮಭೂಷಣ ಗೌರವ ನೀಡಿದೆ.

*(ಈ ಲೇಖನ ಸಿದ್ಧಪಡಿಸಲು ರಾಜ್ಯ ಸಭೆಯ ಸಚಿವಾಲಯವು ೨೦೧೨ರಲ್ಲಿ ಪ್ರಕಟಿಸಿರುವ 'ಸಂವಿಧಾನ ಸಭೆಯ ಮಹಿಳಾ ಸದಸ್ಯರ ಆಯ್ದ ಭಾಷಣಗಳು' ಎಂಬ ಪುಸ್ತಕ, ಪ್ರಿಯಾ ರವಿಚಂದರ್ ಅವರ ಬ್ಲಾಗ್, ಸಂವಿಧಾನ ಸಭೆಯ ಚರ್ಚೆಗಳ ೮ ಸಂಪುಟಗಳು ಹಾಗೂ ಇತರೆ ಲೇಖನಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಬಳಸಿರುವ ಚಿತ್ರಗಳನ್ನು ಅಂತರ್‌ಜಾಲದಿಂದ ತೆಗೆದುಕೊಳ್ಳಲಾಗಿದೆ)*

**ವೈ. ಜಿ. ಮುರಳೀಧರನ್**
೯೦೦, ೧೫ನೆ ರಸ್ತೆ, ಚಂದ್ರಾ ಬಡಾವಣೆ
ಮೊದಲನೆ ಹಂತ, ಬೆಂಗಳೂರು – ೫೬೦೦೭೨











# ಕುಂಚದಲ್ಲಿ ಅರಳಿದ ಪ್ರಕೃತಿಯ ರಮ್ಯ ತಾಣಗಳು

ಎ. ರಾಮಕೃಷ್ಣಪ್ಪನವರು ಹಿರಿಯ ಚಿತ್ರಕಲಾವಿದರಲ್ಲಿ ಒಬ್ಬರು. ಇವರಿಗೆ ನಿಸರ್ಗ ಚಿತ್ರಗಳನ್ನು ಕುಂಚದಲ್ಲಿ ಅರಳಿಸುವುದೆಂದರೆ ಅಚ್ಚುಮೆಚ್ಚು. ತಾವು ಭೇಟಿ ನೀಡಿದ ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ತಾವು ಕಂಡು ಅನುಭವಿಸಿದ ಪ್ರಕೃತಿಯ ರಮ್ಯತಾಣಗಳನ್ನು ಅದ್ಭುತವಾಗಿ ಚಿತ್ರಿಸಿರುವುದು ವಿಶೇಷ ಪ್ರಸ್ತುತ. ಈಗ ಇವರು ಕರ್ನಾಟಕ ಚಿತ್ರಕಲಾ ಪರಿಷತ್ತಿನ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ರಾಜ್ಯ, ರಾಷ್ಟ್ರ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಲಾಪ್ರದರ್ಶನವನ್ನು ಏರ್ಪಡಿಸುವುದರ ಜೊತೆಗೆ ಅದ್ಭುತ ಕಲಾಸೇವೆ ಮಾಡುತ್ತಿರುವುದು ವಿಶೇಷ. ಇವರ ಸಾಧನೆಗೆ ಕೆಂಪೇಗೌಡ ಪ್ರಶಸ್ತಿ, ಎಂ.ಟಿ.ವಿ. ಆಚಾರ್ಯ ಪ್ರಶಸ್ತಿ, ಕ್ಷತ್ರೀಯ ವೀರ ಪ್ರಶಸ್ತಿ ಹೀಗೆ ಬಹಳಷ್ಟು ಸಂಘ ಸಂಸ್ಥೆಗಳಿಂದ ಪುರಸ್ಕರಿಸಲ್ಪಟ್ಟಿದ್ದಾರೆ.

–ಬಳಕೂರು ವಿ. ಎಸ್. ನಾಯಕ











Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

